ನವ ಯುಗ ಪ್ರವರ್ತಕ

# ರಾಜಾ ರಾಮಮೋಹನ ರಾಯ್

## ಜೀವನಚರಿತ್ರೆ ಮತ್ತು ಕಾರ್ಯೋದ್ಯಮ

ಡಿ. ವಿ. ಶೇಷಗಿರಿರಾವ್, ಬಿ.ಎ.,
ಅವರಿಂದ

ಪ್ರಕಾಶಕರು
ಎಸ್. ಎಸ್. ಎನ್. ಬುಕ್ ಡಿಪೋ
ನ್ಯೂ ಮಾರ್ಕೆಟ್, ಬೆಂಗಳೂರು ಸಿಟಿ

ನವಯುಗ ಪ್ರವರ್ತಕರು

# ರಾಜಾ ರಾಮಮೋಹನ ರಾಯ್

## ಜೀವನಚರಿತ್ರೆ ಮತ್ತು ಕಾರ್ಯೋದ್ಯಮ

ಡಿ. ಎ. ಶೇಷಗಿರಿರಾವ್, ಬಿ.ಎ.
ಅವರಿಂದ

ಎಸ್. ಎಸ್. ಎನ್. ಬುಕ್ ಡಿಪೋ
ನ್ಯೂ ಮಾರ್ಕೆಟ್, ಬೆಂಗಳೂರು ಸಿಟಿ

# ಮುನ್ನುಡಿ

ಇಂಡಿಯದಲ್ಲಿ ಶತಮಾನಗಳಿಂದ ಬೆಳೆದು ಬಂದಿದ್ದ ಸಂಸ್ಕೃತಿಯನ್ನು ಹೊಸ ಹಾದಿಗೆ ತಿರುಗಿಸಿದ, ಸಂಪ್ರದಾಯದ ಜೊತೆಗೆ ವಿಚಾರಪರತೆಯನ್ನು ಹೊಂದಿಸಿದ, ಪೂರ್ವ ಮತ್ತು ಪಶ್ಚಿಮ ದೇಶಗಳ ಸಂಪರ್ಕವನ್ನು ಬೆಳೆಸಿದ, ಸರ್ಕಾರದ ಅಧಿಕಾರದೊಂದಿಗೆ ಪ್ರಜಾಭಿಪ್ರಾಯವನ್ನು ಜೊತೆಗೊಳಿಸಿದ ಭಾರತೀಯರಲ್ಲಿ ಮೊದಲನೆಯವರು ರಾಜಾ ರಾಮಮೋಹನರಾಯರು. ನಮ್ಮ ದೇಶದ ಈಚಿನ ಕಾಲದ ವಿಚಾರಪರ ವ್ಯಕ್ತಿಗಳಲ್ಲಿ ಅವರು ಅಗ್ರಗಣ್ಯರು. ಅವರು ಹಿಂದೂ ಧರ್ಮದ ನಿಯಮಗಳನ್ನು ಪುನರ್ವ್ಯವಸ್ಥೆಗೊಳಿಸಿದರು, ಸಾಮಾಜಿಕ ಪದ್ಧತಿಗಳನ್ನು ಪರಿಷ್ಕಾರಗೊಳಿಸಿದರು, ರಾಜ್ಯಾಡಳಿತದಲ್ಲಿ ಹೊಸನೀತಿಯನ್ನು ಪ್ರತಿಪಾದಿಸಿದರು. ಜನಜೀವನಕ್ಕೆ ಸಂಬಂಧಿಸಿದ ಎಲ್ಲ ರಂಗಗಳಲ್ಲಿಯೂ — ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ — ಅವರು ಫಲಕಾರಿಯಾದ ಉದ್ಯಮಗಳನ್ನು ನಡೆಸಿ ದೇಶವನ್ನು ಏಳಿಗೆಗೆ ತಂದರು. ಅವರದು ಸ್ಫೂರ್ತಿಯುತವಾದ ಕಾರ್ಯಮಯ ಜೀವನ. ದೇಶದ ಪ್ರಗತಿ ಚರಿತ್ರೆಯಲ್ಲಿ ಅಗ್ರಸ್ಥಾನಕ್ಕೆ ಅವರು ಪಾತ್ರರು. ಇಂಥವರು ನಡೆಸಿದ ಹೋರಾಟಗಳೂ, ಒದಗಿದ ಎಡರುಗಳನ್ನು ಅವರು ಪರಿಹರಿಸಿದ ರೀತಿಯೂ ಈಚಿನ ಸಮಾಜ ಸುಧಾರಕರಿಗೆ ಪ್ರೇರಕವಾಗದೆ ಇರದು.

ರಾಜಾ ರಾಮಮೋಹನರ ಚರಿತ್ರೆ ಮತ್ತು ಅವರ ಕಾರ್ಯಗಳಿಗೆ ಸಂಬಂಧಿಸಿದ ಗ್ರಂಥಗಳೂ ಅಧಿಕೃತ ಕಾಗದ ಪತ್ರಗಳೂ ಅನೇಕ ಪ್ರಕಟವಾಗಿವೆ. ಅವರ ಗ್ರಂಥಗಳ ಮತ್ತು ಲೇಖನಗಳ ಸಂಗ್ರಹವೂ ಹೆಚ್ಚಿನ ಪ್ರಮಾಣದಲ್ಲಿಯೇ ಇದೆ. ಅವುಗಳಲ್ಲಿ ಸಾಮಾನ್ಯವಾಗಿ ಚರಿತ್ರೆಯ ಗ್ರಂಥಗಳಿಂದ ತಿಳಿದು ಬರದ ಜನಜೀವನದ ಬಹು ಮುಖಕ್ಕೆ ಸೇರಿದ ಸ್ವಾರಸ್ಯವಾದ ವಿಷಯಗಳು ಅಡಗಿವೆ. ಅವುಗಳನ್ನೆಲ್ಲ ವಿವರಿಸಲು ಈ ಪುಸ್ತಕದ ಗಾತ್ರದ ಮೂರರಷ್ಟಾದರೂ ಸ್ಥಳಬೇಕು. ಇಲ್ಲಿ ಅಷ್ಟಕ್ಕೆ ಕೈಯಿಡದೆ ರಾಮಮೋಹನರ ಜೀವನಚರಿತ್ರೆ, ಕಾರ್ಯೋದ್ಯಮಗಳ ದೃಷ್ಟಿಯಿಂದ ಅವಶ್ಯಕವೂ ಮುಖ್ಯವೂ ಆದಷ್ಟನ್ನು ಮಾತ್ರ ಸಂಗ್ರಹಿಸಿದೆ.

ಈ ಪುಸ್ತಕದಲ್ಲಿನ 'ಸಾಹಿತ್ಯಸೇವೆ' ಎಂಬ ಪ್ರಕರಣವು ಕೆಲವು ವರ್ಷಗಳ ಕೆಳಗೆ ಕನ್ನಡ ಸಾಹಿತ್ಯಪರಿಷತ್ತಿನ ವಾರಪತ್ರಿಕೆಯಾದ 'ಕನ್ನಡ ನುಡಿ'ಯ ಸಂಚಿಕೆಗಳಲ್ಲಿ ಪ್ರಕಟವಾಯಿತು. ಅದನ್ನೀಗ ಹಾಗೆ ಪ್ರಕಟಿಸಲೂ ಮತ್ತು ಒಟ್ಟು ಪುಸ್ತಕದ ಹಸ್ತಪ್ರತಿಯನ್ನು ಓದಿ ಅಲ್ಲಲ್ಲಿ ತಿದ್ದುಪಡಿ ಸೂಚಿಸಿ ಪುಸ್ತಕವನ್ನು ಪ್ರಕಟಿಸಲೂ ಪ್ರೋತ್ಸಾಹವನ್ನು ಕೊಟ್ಟು ಸಹಾಯಮಾಡಿದ ಪೂಜ್ಯರಾದ ಶ್ರೀಮಾನ್ ವಿ. ಸೀತಾರಾಮಯ್ಯ ಎಂ. ಎ., ಅವರಿಗೆ ಕೃತಜ್ಞನಾಗಿದ್ದೇನೆ.

ಮೈಸೂರು
೫-೮-೧೯೫೫

ಡಿ. ವಿ. ಎಸ್.

## ಆಧಾರ ಗ್ರಂಥಗಳು

1 The Father of Modern India: Commemoration Volume of the Rammohun Roy Centenary Celebrations, 1933. Compiled and Edited by Satis Chandra Chakravarti, M. A.

2 Life and Letters of Raja Rammohun Roy, by Sophia Dobson Collect, Edited by Hem Chandra Sarkar, M. A., D D.

3 Raja Ram Mohun Roy by Nalin C Ganguly.

4 Raja Ram Mohun Roy: His Life, Writings and Speeches, G. A. Natesan and Co., Madras.

5 Selections from Official Letters and Documents relating to the Life of Raja Rammohun Roy, Vol 1 1791-1830. Edited by Rai Bahadur Ramaprasad Chandra and J. K. Majumdar.

6 Raja Rammohun Roy and the Progressive Movements in India. Edited by J. K. Majumdar, M., A., Ph., D.

7 English Works of Raja Rammohun Roy, Panini Office, Allahabad.

8 History of the Bramha Samaj by Sivanath Sastry in 2 Volumes.

9 Hindu Renaissance by D. S. Sarma.

10 Ram Mohun Roy and Modern India by Ramananda Chatterjee.

# ವಿಷಯ ಸೂಚನೆ

# ತಪ್ಪು ಸರಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೨೮ | ೨೦ | ನ್ಯಾಯನ್ನಾನ | ನ್ಯಾಯಸ್ಥಾನ |
| ೩೩ | ,, | ತನ್ನು | ತಮ್ಮ |
| ೪೨ | ೫ | ಪರಿಸ್ಕರಶ್ಯೋದ್ಯಮ | ಪರಿಷ್ಕರಣೋದ್ಯಮ |
| ೭೦ | ೨೦ | ಭಾನು ಬೆಳಿಗ್ಗೆ | ಭಾನುವಾರ ಬೆಳಗ್ಗೆ |
| ೭೯ | ೨೩ | “ಮಿರಾತ್-ಅಲ್-ಅಕ್ಬರ್” | “ಮಿರಾತ್-ಉಲ್-ಅಕ್ಬರ್” |
| ೧೦೫ | ೨೨ | ಶುದ್ಧ ಜೀವಮೂ | ಶುದ್ಧ ಜೀವನದ |
| ೧೩೫ | ೨೬ | ಅದರ್ಶಪ್ರಾಯ | ಆದರ್ಶಪ್ರಾಯ |
| ೧೩೭ | ೧೭ | ರಾಪ್ರಧಾಸಾವರಾಯ | ರಾಧಾಪ್ರಸಾವರಾಯ |
| ೧೪೧ | ೧೨ | ೀಗೆಹಿ | ಹೀಗೆ |
| ೧೪೬ | ೪ | ನೆಯ ಸಾಲಿನ “ಹಿಂದೂ ಕಾಲೇಜಿನ ವ್ಯವಸ್ಥಾಪಕರು” ಎಂಬುದನ್ನು ೫ ನೆಯ ಸಾಲಿನಲ್ಲಿನ “ಕೊಳ್ಳಬೇಕೆಂದು” ಎನ್ನುವ ಮುಂದೆ ಸೇರಿಸಿಕೊಳ್ಳುವುದು | |
| ೧೮೬ | ೧ | ಹೇಳಿದನು | ಹೇಳಿದರು |
| ೧೮೭ | ೧ | ಅವನ | ಅವರ |
| ,, | ೧೩ | ಬ್ರಾಹ್ಮಸಮಾಜದ | ಬ್ರಹ್ಮಸಮಾಜದ |
| ೧೮೯ | ೮ | ಸಾರ್ವಜನ | ಸರ್ವಜನ |
| ,, | ೨೧ | ಉಕ್ಕಿಸುತ್ತಿದ್ದುವು | ಉಕ್ಕೈಸುತ್ತಿದ್ದುವು |

# ರಾಜಾ ರಾಮಮೋಹನ ರಾಯರ ಜೀವಿತದ ಮುಖ್ಯ ಸಂಗತಿಗಳ ವಿವರ

೧೭೭೨ ಜನನ

೧೭೮೮ ಟಿಬೆಟ್ ದೇಶಕ್ಕೆ ಪ್ರಯಾಣ

೧೭೯೧ ಕಾಶಿಯಲ್ಲಿ ನೆಲಸಿದ್ದು

೧೮೦೩ ರಾಮಕಾಂತರಾಯನ ಮರಣ— ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಕೆಲಸ

೧೮೧೪ ಕಲ್ಕತ್ತೆಯಲ್ಲಿ ನಲಸಿದ್ದು

೧೮೧೫ ಸರ್ಕಾರಿ ಉದ್ಯೋಗದಿಂದ ನಿವೃತ್ತರಾದುದು "ಆತ್ಮೀಯ ಸಭ" ಯ ಸ್ಥಾಪನೆ

೧೮೧೬-೧೭ "ವೇದಾಂತ ಸಂಗ್ರಹ" ಮತ್ತು ಉಪನಿಷತ್ ಗ್ರಂಥಗಳ ಪ್ರಕಟನೆ

೧೮೨೦ 'ಏಸುಕ್ರಿಸ್ತನ ಉಪದೇಶಾವಳಿ" ಯ ಪ್ರಕಟನ

೧೮೨೧ "ಸಂವಾದ ಕೌಮುದಿ' ಪತ್ರಿಕೆಯ ಪ್ರಕಟನ

೧೮೨೨ ಮಿರತ್-ಉಲ್-ಅಕ್ಬರ್" ಪತ್ರಿಕೆ ಮತ್ತು ಸ್ತ್ರೀಯರ ಹಕ್ಕುಗಳನ್ನು ಕುರಿತ ಪ್ರಕಟನೆ

೧೮೨೩ ಪತ್ರಿಕಾ ಸ್ವಾತಂತ್ರ್ಯವನ್ನು ಕುರಿತು ಚಕ್ರವರ್ತಿಗಳಿಗೆ ಪ್ರಾರ್ಥನಾ ಪತ್ರ— "ಬ್ರಾಹ್ಮಣ ಪತ್ರಿಕ" ಯ ಪ್ರಕಟನೆ —ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕುರಿತು ಲಾರ್ಡ್ ಆಮ್‌ಹರ್ಸ್ಟ್‌ರಿಗೆ ಪತ್ರ

೧೮೨೮ ಬ್ರಹ್ಮಸಮಾಜದ ಮೊದಲನ ಸಭೆ ಮತ್ತು ಬ್ರಹ್ಮಸಮಾಜದ ಸ್ಥಾಪನೆ

೧೮೨೯ ವಿಲಿಯಂ ಬಂಟಿಂಕರ ಭೇಟಿ

೧೮೨೯ ಡಲ್ಲಿ ಚಕ್ರವರ್ತಿಯಿಂದ 'ರಾಜಾ" ಎಂಬ ಬಿರುದು ಬಂದದ್ದು

೧೮೩೦ ಇಂಗ್ಲೆಂಡಿಗ ಪ್ರಯಾಣ

೧೮೩೧ ಚಕ್ರವರ್ತಿಗಳ ಭೇಟಿ

೧೮೩೨ ಪ್ಯಾರಿಸ್ಸಿನಲ್ಲಿ ವಾಸ, ಫ್ರಾನ್ಸ್ ದೊರೆಯ ಪರಿಚಯ

೧೮೩೩ ಪಾರ್ಲಿಮೆಂಟು ಸಹಗಮನ ಪದ್ಧತಿಯನ್ನು ತೊಡೆದು ಹಾಕಿದ್ದು

೧೮೩೩ ಇಂಡಿಯಾ ರಾಜ್ಯಾಂಗ ಸುಧಾರಣೆಗಳು ಜಾರಿಗೆ ಬಂದುದು

೧೮೩೩ ಮರಣ

# Some Tributes

" In the dark gloom of India's degeneration Rammohun rose up, a luminous star in the firmament of India's history, with prophetic purity of vision, and unconquerable heroism of soul. He shed radiance all over the land; he rescued us from the penury of self-oblivion. Through the dynamic power of his personality, his uncompromising freedom of the spirit, he vitalized our national being with the urgency of creative endeavour, and launched it into the arduous adventure of realization. He is the great path-maker of this century."

" The only person in his time, in the whole world of Man, to realize completely the significance of the Modern Age- He knew that the ideal of human Civilization does not lie in the isolation of independence but in the brotherhood of interdependence, of individuals a well as of nations in all spheres of thought and activity."

*—Rabindranath Tagore*

" Regard Rammohun Roy as one of the greatest reforuners of his time. He was undoubtedly father of advanced liberal thought in Hinduism."

*—Mahatma Gandhi*

"The first to voice the aspirations of a spirit, which, rising from the 'troubled waters of the old world, takes the shape and lineaments of the new. So long as we are held in the grip of old traditions, while eager to learn, Rammohun Roy has a message for us."

*—Sir Radhakrishnan*

"His greatest thoughts have not yet found their full accomplishment in the history of India and the modern world."

*—C. F. Andrews*

೬೦

# ರಾಜಾ ರಾಮಮೋಹನ ರಾಯ್

## ಪ್ರಕರಣ ೧

### ಸಂಧಿಕಾಲ—ವಿಚಾರಪರತೆ—ಯುಗಪ್ರವರ್ತಕ

ಭಾರತಖಂಡದ ಚರಿತ್ರೆಯಲ್ಲಿ ಮೂರು ಮುಖ್ಯ ಘಟ್ಟಗಳನ್ನು ನೋಡಬಹುದು ಆರ್ಷೇಯ ಕಾಲದ ಋಷಿಗಳು ಭಗವಂತನ ದಿವ್ಯ ದರ್ಶನವನ್ನು ಅನುಭವ ಮಾಡಿದರು. ಅವರಿಗೆ ಸಾಕ್ಷಾತ್ತಾದ ಜ್ಞಾನದ ಸಾರವನ್ನು ವೇದ ಉಪನಿಷತ್ತುಗಳಲ್ಲಿ ಬೆಳಗಿಸಿದರು. ಅವು ಆಗಿನಿಂದಲೂ ಭಾರತಧರ್ಮಕ್ಕೆ ಸ್ಥಿರವಾದ ತಳಹದಿಯಾಗಿವೆ. ಅವುಗಳಲ್ಲಿನ ತತ್ತ್ವಸಾರವು ಭಾರತೀಯ ದರ್ಶನ ತತ್ತ್ವಕ್ಕೆ ಕಿರೀಟ ಪ್ರಾಯವಾಗಿ ಪ್ರಪಂಚದ ಎಲ್ಲ ಜನಾಂಗಗಳ ಮಾನ್ಯತೆಗೂ ಪಾತ್ರವಾಗಿದೆ ಋಷಿಗಳಿಂದ ಪ್ರಣೀತವಾದ ಹಿಂದೂ ಧರ್ಮದ ದಿವ್ಯ ತೇಜಸ್ಸಿಗೆ, ಶತಮಾನಗಳ ತರುವಾಯ, ಮಸಕು ಕವಿಯಿತು ಆಗ ಬೌದ್ಧ ಜೈನ ಮತಗಳು ತಲೆಯೆತ್ತಿದುವು ವೈದಿಕ ಮತ್ತು ಬೌದ್ಧ ಜೈನ ಮತಗಳ ಪ್ರಾಬಲ್ಯದ ಈ ಕಾಲವನ್ನು ಭರತಖಂಡದ ಚರಿತ್ರೆಯಲ್ಲಿ ಪ್ರಾಚೀನಕಾಲ ಅಥವಾ ಧರ್ಮಯುಗವೆನ್ನಬಹುದು. ಇದು ಮೊದಲನೆಯ ಘಟ್ಟ ಮಹಮ್ಮದೀಯರು ಈ ದೇಶಕ್ಕೆ ಕಾಲಿಟ್ಟಾಗಿನಿಂದ ಮತ್ತೊಂದು ಘಟ್ಟವು ಮೊದಲಾಯಿತೆನ್ನಬಹುದು. ಆ ಕಾಲದಲ್ಲಿ ಹಿಂದೂ ಮತಕ್ಕೆ ಪ್ರಬಲವಾದ ಆಘಾತ ಒದಗಿದ್ದು ಮಾತ್ರವಲ್ಲದೆ ದೇಶದ ಎಲ್ಲ ಭಾಗಗಳಲ್ಲಿಯೂ

ಅಲ್ಲಕಲ್ಲೋಲತೆ ತಲೆದೋರಿತು. ಪರ ದೇಶಗಳಿಂದ ಇಲ್ಲಿಗೆ ವಿಜಯಾರ್ಥಿವಾಗಿ ಬಂದ ಮಹಮ್ಮದೀಯರು ಹಿಂದೂ ಮತವನ್ನು ನಾಶ ಮಾಡುವುದಕ್ಕೂ ಅದರ ಸ್ಥಾನದಲ್ಲಿ ಇಸ್ಲಾಂ ಮತವನ್ನು ನೆಲೆಗೊಳಿಸುವುದಕ್ಕೂ ಯತ್ನಿಸಿದರು. ದೇಶದ ಸಂಪತ್ತನ್ನೂ ಕೊಳ್ಳೆಹೊಡೆದರು. ಈ ಕಾಲದಲ್ಲಿ ರಾಷ್ಟ್ರವು ಛಿದ್ರಛಿದ್ರವಾಗಿ, ಪ್ರಬಲರಾದವರು ಆಯಾ ಭಾಗಗಳಿಗೆ ತಾವು ತಾವೇ ಪ್ರಭುಗಳಾಗುತ್ತಿದ್ದರು. ಜನಜೀವನದಲ್ಲಿ ನೆಮ್ಮದಿಯಾಗಲಿ ಜೀವಕಳೆಯಾಗಲಿ ಇರಲಿಲ್ಲ. ಬ್ರಿಟಿಷರು ಈ ದೇಶಕ್ಕೆ ಬಂದು ಅವರ ಪ್ರಭಾವವು ಜನಜೀವನದಲ್ಲಿ ಪರಿಣಾಮಕಾರಿಯಾಗುವವರೆಗೆ ಈ ಸ್ಥಿತಿ ಇತ್ತು. ಬ್ರಿಟಿಷರ ಕಾಲದಿಂದ ಈಚಿನ ಕಾಲವನ್ನು ಮೂರನೆಯ ಘಟ್ಟ ಎಂದು ಹೇಳಬಹುದು. ಇದೇ ಭಾರತದ ನವೋದಯಕ್ಕೆ ತಳಹದಿ.

ಹದಿನೆಂಟನೆಯ ಶತಮಾನದ ಉತ್ತರಾರ್ಧವು ಭರತಖಂಡದ ಚರಿತ್ರೆಯಲ್ಲಿ ತೇಜೋಹೀನವೂ, ಸತ್ವರಹಿತವೂ ಆಗಿದೆ. ಆಗಿನ ಜನಜೀವನದಲ್ಲಿ ಜೀವನಾಡಿ ಮಿಡಿಯುತ್ತಿರಲಿಲ್ಲ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ— ಇವುಗಳಲ್ಲಿ ಯಾವ ದೃಷ್ಟಿಯಿಂದ ನೋಡಿದರೂ ಆ ಕಾಲವನ್ನು ಒಂದು ಸಂಧಿ ಸಮಯವೆನ್ನಬಹುದು. ರಾಜಕೀಯದಲ್ಲಿ ಒಂದು ಸಂಕ್ಷೋಭೆಯೆದ್ದಿತ್ತು. ಹಿಂದಿನಿಂದ ಬಂದ ಪ್ರಸಿದ್ಧವೂ ಸತ್ವಯುಕ್ತವೂ ಆದ ಹಿಂದೂ ರಾಜಮನೆತನಗಳು ಪದಚ್ಯುತವಾಗಿದ್ದುವು. ಡೆಲ್ಲಿಯಲ್ಲಿ ಸಾಮ್ರಾಜ್ಯ ಸೂತ್ರಗಳನ್ನು ಧರಿಸಿದ್ದ ಮೊಗಲರ ಆಳ್ವಿಕೆಯು ಹೆಸರಿಗೆ ಮಾತ್ರ ಜೀವಿಸಿತ್ತು. ದಕ್ಷಿಣದಲ್ಲಿ ಶಿವಾಜಿಯಿಂದ ಪ್ರಣೀತವಾಗಿ ಮಹಾ ಪೌರುಷಶಾಲಿಗಳಿಂದ ಏಳಿಗೆ ಹೊಂದಿದ ಮಹಾರಾಷ್ಟ್ರ ರಾಜವಂಶವು ಕೊನೆಗಾಣುತ್ತ ಬಂದಿತ್ತು. ಎಲ್ಲ ಕಡೆಗಳಲ್ಲಿಯೂ ಸಣ್ಣಪುಟ್ಟ ರಾಜ್ಯಗಳು ಅಧಿಕಾರವಹಿಸಿದ್ದುವು. ಅವುಗಳಿಗೆ ಹಿಂದಿನಿಂದ ಬಂದ ವಂಶದ ಹಿರಿಮೆಯಾಗಲಿ, ಸ್ವತಃ ಗಳಿಸಿದ ಬಲವಾಗಲಿ ಇಲ್ಲದ ಅವುಗಳ ಪ್ರಭುಗಳು ತಮಗಿಂತ ಬಲಿಷ್ಠರಾದವರ ಛಾಯಾವರ್ತಿಗಳಾಗಿದ್ದರು. ಹೊಸ ರಾಜ್ಯಗಳ ನಿರ್ಮಾಣವು ಎಷ್ಟು ಜಾಗ್ರತೆ ಆಗು

ತ್ತಿತ್ತೋ ಅವುಗಳ ಅಳಿವೂ ಅಷ್ಟೇ ಜಾಗ್ರತೆಯಲ್ಲಿ ಒದಗುತ್ತಿತ್ತು. ಇಲ್ಲಿಯೇ ನೆಲಸಿ ದೇಶದ ಅಂಗ ಭೂತರೆನಿಸಿದ ಹಿಂದೂ ಮುಹಮ್ಮದೀಯರ ಅವ್ಯಾಹತ ಹೋರಾಟಗಳಿಗೆ ಕಾರ್ಯಾರ್ಥವಾಗಿ ಇಲ್ಲಿಗೆ ಬಂದು ನೆಲಸಿದ ಪರಕೀಯರ ಹೋರಾಟಗಳೂ ಜೊತೆಗೂಡುತ್ತಿದ್ದುವು ಪಶ್ಚಿಮ ಖಂಡ ದಿಂದ ಇಲ್ಲಿಗೆ ವ್ಯಾಪಾರಕ್ಕಾಗಿ ಇಂಗ್ಲಿಷರು, ಫ್ರೆಂಚರು, ಡಚ್ಚರು ಮೊದ ಲಾದವರು ಬಂದಿದ್ದರು ಇವರೆಲ್ಲರೂ ಮೊದಲು ವ್ಯಾಪಾರೇಚ್ಛೆ ಯಿಂದಲೇ ಬಂದವರಾದರೂ ಕಾಲಕ್ರಮದಲ್ಲಿ ತಮ್ಮ ಸ್ವಂತ ರಕ್ಷಣೆಯ ಸಲುವಾಗಿ ಆಯುಧ ಧರಿಸಬೇಕಾಯಿತು ಕೊನೆಗೆ ಅವರು ದೇಶೀಯ ರಾಜರುಗಳ ಪಕ್ಷವನ್ನು ವಹಿಸಿದರು ರಾಜರುಗಳ ಸೋಲು ಗೆಲುವು ಗಳು ಅವರ ಸಾವು ಇರವುಗಳಾದುವು ಪಾಶ್ಚಾತ್ಯ ಜನಾಂಗಗಳವರ ಲ್ಲಿಯೇ ಪಕ್ಷ ಪ್ರತಿಪಕ್ಷಗಳು ಹುಟ್ಟಿಕೊಂಡು ಒಬ್ಬರನ್ನೊಬ್ಬರು ದೇಶದಿಂದ ಹೊರದೂಡುವ ಪ್ರಯತ್ನದಲ್ಲಿ ತೊಡಗಿದರು ಹೀಗಾಗಿ ರಾಜಕೀಯ ರಂಗದಲ್ಲಿ ಶಾಂತಿಯಿರಲಿಲ್ಲ ಯಾವ ಕ್ಷಣದಲ್ಲಿ ಎಲ್ಲಿಂದ ಉದ್ರೇಕ ಬರು ವುದು, ಅದರ ಪರಿಣಾಮವೇನಾದೀತೆಂದು ಹೇಳುವಂತಿರಲಿಲ್ಲ ಪೂರ್ವದ ರಾಜ್ಯವ್ಯವಸ್ಥೆಯು ನೆಲಕ್ಕುರುಳುವುದರಲ್ಲಿತ್ತು, ಅದರ ಸ್ಥಾನಕ್ಕೆ ಬೇರೊಂದು ಸಿದ್ಧವಾಗಿರಲಿಲ್ಲ

ಧಾರ್ಮಿಕರಂಗದಲ್ಲಿ ಆಗಿನ ಭಾರತವು ಮತಮತಾಂತರಗಳ ಹೋರಾಟಕ್ಕೆ ಸಿಕ್ಕಿತ್ತು ಹಿಂದೂಮತದ ಶುದ್ಧ ತತ್ತ್ವ ಜ್ಯೋತಿಗೆ ಮುಸಿ ಹಿಡಿದಿತ್ತು ವೇದ ಉಪನಿಷತ್ತುಗಳಿಂದ ಪ್ರಣೀತವಾದ ಧರ್ಮಕ್ಕೆ ಗ್ಲಾನಿ ತಟ್ಟಿತ್ತು ಅವುಗಳಲ್ಲಡಗಿರುವ ತತ್ತ್ವಗಳನ್ನು ತಿಳಿದಿದ್ದವರು ಕೆಲವು ಮಂದಿ ಮಾತ್ರವೇ ಇದ್ದರು ವೇದೋಪನಿಷತ್ತುಗಳಲ್ಲಿ ಉಕ್ತವಾದ 'ಏಕಮೇವಾದ್ವಿತೀಯಂ ಬ್ರಹ್ಮ'ನ ಉಪಾಸನೆಗೆ ಬದಲು ಅನೇಕಾನೇಕ ಹೊಸ ದೇವರುಗಳ ಪೂಜೆಯು ರೂಢಿಗೆ ಬಂದಿತ್ತು ವೇದಮತದಲ್ಲಿ ಜನರಿಗೆ ವಿಶ್ವಾಸ ತಗ್ಗಿತ್ತು ಅದಕ್ಕೆ ಬದಲು ಅರ್ಥವಿಲ್ಲದ ಆಚಾರ ಮೂಢಭಕ್ತಿ ನಂಬಿಕೆಗಳು ಹಬ್ಬಿದ್ದುವು ಭಕ್ತಿ ಪಂಥಗಳು ಹೆಚ್ಚು ಬಳ ಕೆಗೆ ಬಂದಿದ್ದುವು. ಆ ಪಂಥದಲ್ಲಿಯೇ ಅನೇಕ ಒಳ ಪಂಗಡಗಳು ಹುಟ್ಟಿ

ಕೊಂಡು ಒಂದಕ್ಕೊಂದು ವಿರೋಧವಾಗಿತ್ತು. ದೇಶದ ಬೇರೆ ಬೇರೆ ಭಾಗಗಳ ಭಾಷೆಗಳಲ್ಲಿ ಭಕ್ತಿ ಭಾವದ ಗೀತಸಾಹಿತ್ಯವು ಹುಟ್ಟಿತ್ತು. ಹದಿನೇಳನೆಯ ಶತಮಾನದಲ್ಲಿ ಚೈತನ್ಯ ಪಂಥವು ಪುನರುದ್ಧಾರವಾಗಿತ್ತು. ಹದಿನೆಂಟನೆಯ ಶತಮಾನದಲ್ಲಿ ಶಕ್ತಿ ಪಂಥವು ಪುನರುತ್ಥಾಪನೆಯಾಯಿತು. ಅದೇ ಶತಮಾನದ ಮಧ್ಯಕ್ಕೆ ಭಕ್ತಿ ಪಂಥಗಳು ಕೊನೆಗಂಡವು. ಹಿಂದೂ ಮತಕ್ಕೆ ಪ್ರತಿಕಕ್ಷಿಯಾಗಿ ಮಹಮ್ಮದೀಯ ಮತವು ಪ್ರಾಬಲ್ಯ ದೆಶೆಯಲ್ಲಿತ್ತು. ದಕ್ಷಿಣದಲ್ಲಿ ಸ್ಥಾಪಿತವಾದ ಮಹಾರಾಷ್ಟ್ರ ರಾಜ್ಯವೂ ಉತ್ತರದಲ್ಲಿನ ಸಿಕ್ಕರ ರಾಜ್ಯಸ್ಥಾಪನೆಯೂ ಕೊನೆ ಕೊನೆಯಲ್ಲಿ ಬಂದ ಮಹಮ್ಮದೀಯ ರಾಜರ ದರ್ಪ ಅಸಹಿಷ್ಣುತೆಗಳನ್ನು ತಡೆಗಟ್ಟಲು ಹೊರಟ ಹಿಂದೂ ರಾಷ್ಟ್ರೋದ್ಯಮಗಳು. ಹದಿನಾಲ್ಕು ಹದಿನೈದನೆಯ ಶತಮಾನಗಳಲ್ಲಿ ದಕ್ಷಿಣ ದೇಶದ ಮಹಮ್ಮದೀಯರ ಧಾಳಿಯನ್ನು ತಡೆಯಲು ಶ್ರೀ ವಿದ್ಯಾರಣ್ಯರಿಂದ ಪ್ರತಿಷ್ಠಿತವಾಗಿ ಪೋಷಿತವಾದ ವಿಜಯನಗರ ರಾಜ್ಯದಂತೆ ಹದಿನೆಂಟನೆಯ ಶತಮಾನದಲ್ಲಿ ಮಹಾರಾಷ್ಟ್ರ ಮತ್ತು ಸಿಕ್ ರಾಜ್ಯಗಳು ಹಿಂದೂ ಮತವನ್ನು ಊರ್ಜಿತಗೊಳಿಸಲು ಸಿದ್ಧವಾದುವು. ಅವು ಹಿಂದೂ ಧರ್ಮದ ಪುನರುಜ್ಜೀವನಕ್ಕಾಗಿಯೇ ಶ್ರಮಿಸಿದುವು. ಆದರೆ ಮೊಗಲ್ ಸಾಮ್ರಾಜ್ಯಾನಂತರ ರಾಜಕೀಯ ಅಧಿಕಾರ ವಹಿಸಿದ ಹಿಂದೂ ರಾಜ್ಯಗಳು ಹಿಂದೂ ಧರ್ಮೋದ್ಧರಣ ಕಾರ್ಯವನ್ನು ಕೈಗೊಳ್ಳಲಿಲ್ಲ. ಹೊಸ ವಿಚಾರ ಪರತೆಯಾಗಲಿ ಜೀವನ ಸಮಸ್ಯೆಗಳನ್ನು ಕುರಿತ ಹೊಸ ವಿವೇಚನೆಯಾಗಲಿ ಹಿಂದಿನ ಆಧ್ಯಾತ್ಮಿಕ ತತ್ತ್ವಗಳಿಗೆ ಹೊಸ ವ್ಯಾಖ್ಯಾನ ವಿವರಣೆಗಳಾಗಲಿ ಹುಟ್ಟಲಿಲ್ಲ. ಜೊತೆಗೆ ಪರದೇಶದಿಂದ ಇಲ್ಲಿಗೆ ಬಂದ ಜನಾಂಗಗಳವರ ಧರ್ಮವಾದ ಕ್ರೈಸ್ತ ಮತವೂ ತಲೆಹಾಕುತ್ತಿತ್ತು. ಆ ಮತದ ಪಾದ್ರಿಗಳು ಹಿಂದೂ ಮತವು ಅಜ್ಞಾನ ಜನ್ಯವೆಂದೂ ಅನಾಗರಿಕವೆಂದೂ ಬೋಧಿಸಿ ತಮ್ಮ ಮತದ ಕಡೆಗೆ ಜನರನ್ನು ಆಕರ್ಷಿಸುತ್ತಿದ್ದರು.

ಸಾಮಾಜಿಕ ಜೀವನವೂ ಅಂತೆಯೇ ಅನನ್ವಯುವಾಗಿತ್ತು. ಪ್ರಜೆಗಳಲ್ಲಿ ಜನಾಂಗದ ಭಾವನೆ ತಪ್ಪಿತ್ತು. ಜ್ಞಾನ ಪ್ರಚಾರ ಸಾಧಕಗಳಾದ

ಈಗಿನಂತಹ ವಿದ್ಯಾ ಪೀಠಗಳಿರಲಿಲ್ಲ. ಅಲ್ಲಲ್ಲಿ ಇದ್ದ ಚಿಕ್ಕ ಪಾಠಶಾಲೆ ಮುಕ್ತಾಬಾಗಳು ಮಾತ್ರವೇ ವಿದ್ಯಾಪ್ರಚಾರಕ ಸಂಸ್ಥೆಗಳಾಗಿದ್ದುವು ಅಲ್ಲಿ ಸಂಸ್ಕೃತ ಅರಬ್ಬಿ ಮತ್ತು ಪಾರ್ಸಿ ಭಾಷೆಗಳು ಬೋಧೆಯಾಗುತ್ತಿದ್ದುವೇ ಹೊರತು ಇಂಗ್ಲಿಷ್ ವ್ಯಾಸಂಗದ ಅವಶ್ಯಕತೆಯೂ ತನ್ಮೂಲಕವುಂಟಾಗಬಹುದಾದ ಜ್ಞಾನ ವೈಶಾಲ್ಯವೂ ಗೋಚರಕ್ಕೆ ಬಂದಿರಲಿಲ್ಲ ಪಾಶ್ಚಾತ್ಯರಲ್ಲಿ ಪ್ರಚಾರಕ್ಕೆ ಬರುತ್ತಿದ್ದ ವಿಜ್ಞಾನಶಾಸ್ತ್ರಗಳೂ ಸಮಾಜಶಾಸ್ತ್ರಗಳೂ ಭಾರತೀಯರು ಅರಿಯದವುಗಳಾಗಿದ್ದುವು ದೇಶವು ಜ್ಞಾನಪ್ರಭೆಯನ್ನು ಕಾಣದೆ ಅಜ್ಞಾನಾಂಧಕಾರದಲ್ಲಿ ಮುಳುಗಿತ್ತು ಸ್ತ್ರೀಯರ ಸ್ಥಿತಿಯಂತೂ ಬಹು ಶೋಚನೀಯವಾಗಿತ್ತು ಅವರಿಗೆ ವಿದ್ಯೆಯಿಲ್ಲದುದು ಮಾತ್ರವಲ್ಲದೆ ಸಾಮಾನ್ಯ ಸ್ವಾತಂತ್ರ್ಯವೂ ಇರಲಿಲ್ಲ ಬಾಲ್ಯವಿವಾಹವೂ ಬಹುಪತ್ನೀ ವಿವಾಹವೂ ಸಾಮಾನ್ಯ ಪದ್ಧತಿಗಳಾಗಿದ್ದುವು ಸ್ತ್ರೀಯು ವಿಧವೆಯಾದರೆ ಪತಿಯ ಜೊತೆಯಲ್ಲಿಯೇ ಅವಳೂ ಚಿತೆಯೇರಬೇಕಾಗಿತ್ತು ಅವಳಿಗೆ ಒಂದು ವೇಳೆ ಇಷ್ಟವಿಲ್ಲದಿದ್ದರೂ ಬಂಧುಗಳ ನಿರ್ಬಂಧಕ್ಕಾದರೂ ಸಹಗಮನವನ್ನಾಚರಿಸಬೇಕಾಗಿತ್ತು ಸ್ತ್ರೀಯರಿಗೆ ತಂದೆಯ ಆಸ್ತಿಪಾಸ್ತಿಗಳಲ್ಲಿ ಯಾವಹಕ್ಕೂ ಇರಲಿಲ್ಲ ರಾಜಕೀಯ ಧಾರ್ಮಿಕ ಜೀವನದಲ್ಲಿ ಹೇಗೆ ಒಂದು ಸಂಕ್ಷೋಭೆಯಿತ್ತೋ ಹಾಗೆಯೇ ಜನಜೀವನದಲ್ಲಿಯೂ ಸುಖಶಾಂತಿಗಳಿರಲಿಲ್ಲ ಮುಖ್ಯವಾದ ದೊಡ್ಡ ಪಟ್ಟಣಗಳಲ್ಲಿ ನಾನಾಜನಾಂಗಗಳ ಜನರನ್ನೂ ಅವರ ಬಗೆಬಗೆಯ ನಡತೆಗಳನ್ನೂ ನೋಡಬಹುದಾಗಿತ್ತು

ಆರ್ಥಿಕ ವಿಚಾರದಲ್ಲಂತೂ ದೇಶವು ಕ್ಷೀಣದೆಶೆಯಲ್ಲಿತ್ತೆಂದು ಹೇಳಬೇಕಾಗಿಲ್ಲ ಮಹಮ್ಮದೀಯ ಮತ್ತು ಮರಾಟೆ ಪ್ರಭುಗಳು ಸಾಧ್ಯವಿದ್ದಷ್ಟು ತೆರಿಗೆ ಕಂದಾಯಗಳನ್ನು ಹಾಕುತ್ತಿದ್ದುದರಿಂದ ಜನರು ನಿರ್ಗತಿಕರಾಗಿದ್ದರು ರಾಜರು ಅವ್ಯಾಹತವಾಗಿ ನಡೆಸುತ್ತಿದ್ದ ಹೋರಾಟಗಳಿಗೂ ಅವರವರ ವಿಲೋಲುಪತೆಗಳಿಗೂ ತಕ್ಕಂತೆ ಭಂಡಾರವನ್ನು ಬರಿದು ಮಾಡುತ್ತಿದ್ದರು ದೇಶದ ಸಂಪತ್ತನ್ನು ಹೆಚ್ಚಿಸಲು ಯಾರೂ ಗಮನವನ್ನೂ ಕೊಡಲಿಲ್ಲ, ಮತ್ತು ಅಂಥ ಯೋಜನೆಗಳಿಗೆ ಹಣವೂ ಇರಲಿಲ್ಲ

ಒಟ್ಟಿನಲ್ಲಿ, ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ನಮ್ಮ ದೇಶವು ರಾಜ್ಯವ್ಯವಸ್ಥೆ, ಧರ್ಮನಿಯಮ ಮತ್ತು ಸಂಸ್ಕೃತಿಗಳ ಹೋರಾಟದ ಸುಳಿಗೆ ಸಿಕ್ಕಿತ್ತೆಂದು ಹೇಳಬಹುದು. ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳೂ ಒಂದೊಂದು ಸಲ ಈ ಬಗೆಯ ಸುಳಿಗೆ ಸಿಕ್ಕಿತ್ತೆಂದು ಚರಿತ್ರೆಯಿಂದ ತಿಳಿದು ಬರುತ್ತದೆ. ಇಂತಹ ಪರಿಸ್ಥಿತಿಗೆ ಮಧ್ಯಯುಗದ ಸ್ಥಿತಿಯೆಂದು ಹೇಳುವುದುಂಟು. ನಮ್ಮ ದೇಶದಲ್ಲಿ ಮಹಮ್ಮದೀಯರ ರಾಜ್ಯಭಾರವು ಕೊನೆಗಂಡು ಬ್ರಿಟಿಷರ ಆಳಿಕೆಯು ಪ್ರಾರಂಭವಾಗುವ ಮೊದಲು ಇದ್ದ ಸ್ಥಿತಿಯನ್ನು ಮಧ್ಯಯುಗದ ಸ್ಥಿತಿಯೆಂದು ಹೇಳಬಹುದು.

ಪಾಶ್ಚಾತ್ಯರ, ಮುಖ್ಯವಾಗಿ ಇಂಗ್ಲಿಷರ, ಸಹವಾಸ ಪ್ರಭಾವಗಳಿಂದ ದೇಶವು ಹೊಸಯುಗದಲ್ಲಿ ಅಡಿಯಿಟ್ಟಿತು. ತತ್ಪೂರ್ವದ ಅಂಧಕಾರ ಮಯತೆಯು ತೊಲಗಿ ರಾಜಕೀಯ, ಧಾರ್ಮಿಕ, ಸಾಮಾಜಿಕ ರಂಗಗಳಲ್ಲಿ ಹೊಸಕಾಂತಿಮೂಡಿತು. ವಸಂತಋತುವಿನ ಆವಿರ್ಭಾವದಲ್ಲಿ ತರುಲತೆಗಳಲ್ಲಿ ಜೀವರಸ ಉಕ್ಕಿ ಹೊಸ ತಳಿರು ಪುಷ್ಪಗಳುದಿಸಿ ಕಳಕಳಿಸುವಂತೆ ಭಾರತದ ಜನಜೀವನ ನಾಡಿಯಲ್ಲಿ ಜೀವಕಳೆಯುಂಕುರಿಸಿ ನವಚೈತನ್ಯೋದಯವಾಯಿತು. ಈ ನವಚೈತನ್ಯದ ಮೂರ್ತಿಮತ್ತಾಗಿ ಅದರ ಪ್ರಭಾವ ಪ್ರಭೆಯನ್ನು ಬೆಳಗಿಸಿ ಜನತೆಯನ್ನು ಸ್ಫೂರ್ತಿಗೊಳಿಸಿದ ನವಭಾರತದ ಮೊದಲ ಮಾನ್ಯ ಪುತ್ರರೇ ರಾಜಾ ರಾಮಮೋಹನರಾಯರು.

ಭಾರತದಲ್ಲಿ ವಿಕಸಿಸಿದ ನವಚೈತನ್ಯಕುಸುಮವು ಈಕ್ಷೇತ್ರದಲ್ಲಿ ತಾನಾಗಿಯೇ ಹುಟ್ಟಿದುದಲ್ಲ. ಇಲ್ಲಿ ನೆಲಸಿದ ಇಂಗ್ಲಿಷರು ಅದರ ಬೆಳವಣಿಗೆಗೆ ನೆಪಮಾತ್ರ ಕಾರಣರು. ಅದರ ಬೀಜವು ಪಾಶ್ಚಾತ್ಯ ದೇಶಗಳಲ್ಲಿ ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳಲ್ಲಿ ಜರುಗುತ್ತಿದ್ದ ಮಹಾಘಟನೆಗಳಲ್ಲಡಗಿರುವುದು. ಅಲ್ಲಿ ತಲ್ಲಣಗೊಳಿಸುವಂತೆ ತ್ವರಿತದಿಂದ ಜರುಗುತ್ತಿದ್ದ ಮಹಾಘಟನೆಗಳ ಪರಿಣಾಮದ ಬಿರುಗಾಳಿಯು ಈ ದೇಶಕ್ಕೂ ಬೀಸಿತು. ಅದನ್ನು ತಡೆಯಲು ಯಾರಿಗೂ ಸಾಧ್ಯವಿರಲಿಲ್ಲ; ಮತ್ತು ಇಲ್ಲಿನ ಸಂದರ್ಭ ಸನ್ನಿವೇಶಗಳು ಅದರ ನೆಲೆಗೆ ಅನುಕೂಲವಾಗಿದ್ದು

ದರಿಂದ ಇಲ್ಲಿ ನವಚೈತನ್ಯದ ಬೀಜವು ಮೊಳಕೆಯಾಗುವಂತಾಯಿತು ಪಾಶ್ಚಾತ್ಯರು ಈ ದೇಶಕ್ಕೆ ಬಂದು ಇಲ್ಲಿ ಸ್ವಾಸ್ಥ್ಯಗಳನ್ನು ಸ್ಥಾಪಿಸಿದುದೇ ಅವರ ತೌರುರಾಷ್ಟ್ರಗಳಲ್ಲಿ ನಡೆಯುತ್ತಿದ್ದ ಮಹಾ ಘಟನೆಗಳ ಒಂದು ಪರಿಣಾಮವಾಗಿ

ಯೂರೋಪು ಖಂಡದ ಮುಖ್ಯ ರಾಷ್ಟ್ರಗಳಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮಹತ್ವಪೂರಿತವಾದ ಘಟನೆಗಳು ಜರುಗಿವೆ ಆ ಘಟನೆಗಳಿಂದ ಪ್ರಬಲ ರಾಷ್ಟ್ರಗಳಲ್ಲಿನ ರಾಜಕೀಯ ಸಾಮಾಜಿಕ ಪದ್ಧತಿಗಳೇ ಬದಲಾಗಿ ಅವು ಹೊಸ ರೀತಿ ನೀತಿಗಳನ್ನು ಅನುಸರಿಸಬೇಕಾಯಿತು. ರಾಷ್ಟ್ರೀಯ ಭಾವನೆಯೂ, ಎಲ್ಲಕ್ಷೇತ್ರಗಳಲ್ಲಿಯೂ ಸ್ವಾತಂತ್ರ್ಯಾಪೇಕ್ಷೆಯೂ, ಒಂದು ಹೊಸ ವಿಚಾರಪರದೃಷ್ಟಿಯೂ ಈ ಯುಗದ ಮುಖ್ಯ ಲಕ್ಷಣಗಳು

ಹದಿನೆಂಟನೆಯ ಶತಮಾನವು ವ್ಯಾಪಾರಾಭಿವೃದ್ಧಿಯಕಾಲ ಅದುವರೆಗೆ ಸಾಮಾನ್ಯವಾಗಿ ಎಲ್ಲ ದೇಶಗಳೂ ತಮಗೆ ಅವಶ್ಯವಾದ ಎಲ್ಲ ಪದಾರ್ಥಗಳನ್ನೂ ತಾವೇ ಸಿದ್ಧಗೊಳಿಸಿಕೊಂಡು ಪರಾವಲಂಬನವಿಲ್ಲದವರಾಗಿದ್ದರು, ಮತ್ತು ತಮ್ಮ ದೇಶದಿಂದ ಹೊರ ದೇಶಗಳಿಗೆ ಹಣ ಹರಿದು ಹೋಗದಂತೆ ಮಾಡುತ್ತಿದ್ದರು ಇದು ಆಗ ಅನುಸರಿಸುತ್ತಿದ್ದ ಒಂದು ವ್ಯಾಪಾರ ನಿಯಮ ಮುಖ್ಯವಾಗಿ ಧಾನ್ಯವನ್ನು ಯಾವದೇಶವೂ ಆಮದು ಮಾಡುತ್ತಿರಲಿಲ್ಲ ಹೇಗಾದರೂ ಮಾಡಿ ಒಟ್ಟು ವ್ಯಾಪಾರದಲ್ಲಿ ತಮ್ಮ ದೇಶಕ್ಕೇ ಹೆಚ್ಚು ಹಣ ಸಂದಾಯವಾಗಬೇಕೆಂದು ಪ್ರತಿಯೊಂದು ರಾಷ್ಟ್ರವೂ ಯತ್ನಿಸುತ್ತಿತ್ತು ಕೈಗಾರಿಕಗಳಿಗೆ ಹೆಸರು ಪಡೆದ ಎರಡು ಮುಖ್ಯ ರಾಷ್ಟ್ರಗಳಾದ ಇಂಗ್ಲೆಂಡ್ ಮತ್ತು ಫ್ರಾನ್ಸ್ ಒಂದರೊಡನೊಂದು ಹೆಚ್ಚು ವ್ಯಾಪಾರ ನಡೆಸಲಿಲ್ಲ ತಮ್ಮಲ್ಲಿ ಆದ ಸಾಮಾನುಗಳಿಗೆ ಪೈಪೋಟಿ ಕಲ್ಪಿಸಬಾರದೆಂದು ಅಷ್ಟು ಆತುರರಾಗಿದ್ದರು ಅವರು ಈ ವ್ಯಾಪಾರದಲ್ಲಿನ ಸ್ಪರ್ಧೆಯೇ ಯೂರೋಪಿನ ಮುಖ್ಯರಾಷ್ಟ್ರಗಳಲ್ಲಿ ತಮ್ಮ ದೇಶದಲ್ಲಿ ಮಾತ್ರವೇ ಅಲ್ಲದೆ ಆ ರಾಷ್ಟ್ರಗಳು ಹೊರದೇಶಗಳಲ್ಲಿ ಸ್ಥಾಪಿಸಿ

ಕೊಂಡಿದ್ದ ಸ್ವಾಸ್ಥ್ಯಗಳಲ್ಲಿಯೂ ಪರಸ್ಪರ ಕಲಹಗಳಿಗೆ ಕಾರಣವಾಯಿತು. ಇದರ ಪರಿಣಾಮವಾಗಿಯೇ ಇಂಡಿಯದಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಆಗಾಗ್ಗೆ ಕಲಹಗಳು ನಡೆಯುತ್ತಿದ್ದುದು. ಆ ಎಲ್ಲ ಕಲಹಗಳಲ್ಲಿಯೂ ಇಂಗ್ಲಿಷರಿಗೆ ಜಯವಾಯಿತು. ಅದಕ್ಕೆ ಪ್ರಬಲವಾದ ಕಾರಣವು ಬ್ರಿಟಿಷ್ ರಾಜಕೀಯ ವ್ಯವಸ್ಥೆಯಲ್ಲಿ ವ್ಯಾಪಾರಗಾರರು ಹೆಚ್ಚು ಪ್ರಭಾವ ಬೀರುತ್ತಿದ್ದುದು. ವರ್ತಕವರ್ಗದವರು ಹೆಚ್ಚಿದ್ದ ಸಂಪತ್ತನ್ನು ಪ್ರಯೋಜನಕರವಾಗಿ ಪುದುವಿಡುವ ಮಾರ್ಗಗಳನ್ನು ಹುಡುಕಿದರು. ಅದುವರೆಗೆ ವ್ಯವಸಾಯವೂ ಕುರಿ ಪೋಷಣೆಯೂ ಜನರ ಮುಖ್ಯ ಕಸಬುಗಳಾಗಿದ್ದುವು. ಕೈಗಾರಿಕೆಗಳಿರಲಿಲ್ಲವೆಂದೇ ಹೇಳಬಹುದು. ನೂಲುವುದು ನೇಯುವುದು ಮೊದಲಾದುವುಗಳನ್ನು ಮನೆಗಳಲ್ಲಿ ಯಂತ್ರ ಸಹಾಯವಿಲ್ಲದೆ ಕೈಯಿಂದಲೇ ನಡೆಸುತ್ತಿದ್ದರು. ಇದಕ್ಕೆ ಯಂತ್ರೋಪಕರಣಗಳನ್ನು ಉಪಯೋಗಿಸಬಹುದೇ ಎಂಬ ಶೋಧನೆಗಳು ನಡೆದುವು. ಯಂತ್ರಗಳಿಗೆ ಶಕ್ತಿಯು ಬೇಕಾಗಿತ್ತು. ಈ ಶಕ್ತಿಯನ್ನು ಹಬೆಯಿಂದ ಒದಗಿಸಬಹುದೆಂದು ತಿಳಿದುದು ಯಂತ್ರಯುಗಕ್ಕೆ ತಳಹದಿಯಾಯಿತು. ಕಬ್ಬಿಣ ಕಲ್ಲಿದ್ದಲು ಗಣಿಗಳು ಶೋಧನೆಗೆ ಬಂದು ಅತ್ಯದ್ಭುತ ರೀತಿಯ ಬದಲಾವಣೆಗಳಿಗೆ ಮೊದಲಾದುವು. ಈ ಲೋಹಗಳ ಮಿಶ್ರಣವು ಕೈಗಾರಿಕೆಗಳ ರಂಗದಲ್ಲಿ ಅದುವರೆಗೆ ಗೋಚರವಾಗದಿದ್ದ ಒಂದು ಹೊಸ ಪ್ರಪಂಚವನ್ನೇ ಹೊರಗಾಣಿಸಿತು. ಬಂಡವಾಳಗಾರರು ಪರಿಸ್ಥಿತಿಯ ಬದಲಾವಣೆಗೆ ಎಚ್ಚೆತ್ತುಕೊಂಡು ದೊಡ್ಡ ಕಾರ್ಖಾನೆಗಳನ್ನು ಏರ್ಪಡಿಸಿದರು. ಈ ಕಾರ್ಖಾನೆಗಳಲ್ಲಿ ನೂರಾರು ಜನ ಕೂಲಿಗಾರರು ಕೆಲಸಮಾಡುವಂತಾಯಿತು. ಹಿಂದಿನ ಪದ್ಧತಿಯಲ್ಲಿ ಆಗುತ್ತಿದ್ದ ಉತ್ಪತ್ತಿಗಿಂತ ನೂರರಷ್ಟು ಹೆಚ್ಚು ಉತ್ಪತ್ತಿಯಾಗುವಂತಾಯಿತು. ಅನೇಕರಿಗೆ ಉದ್ಯೋಗಗಳು ದೊರೆಯುವಂತಾಯಿತು. ಮೊದಲು ಹಳ್ಳಿಗಳಾಗಿದ್ದುವು ದೊಡ್ಡದೊಡ್ಡ ಕಾರ್ಖಾನೆಗಳ ಕೇಂದ್ರಗಳಾಗಿ ಜನಭರಿತವಾದ ಪಟ್ಟಣಗಳಾದುವು. ಫ್ರಾನ್ಸಿನಲ್ಲಿ ಲಿಯಾನ್ಸ್ ಇಂಗ್ಲೆಂಡಿನಲ್ಲಿ ಮಾನ್‌ಚೆಸ್ಟರ್ ಕಾರ್ಖಾನೆಗಳ ಕೇಂದ್ರಗಳಾದುವು. ಯಂತ್ರೋಪಕರಣಗಳ ಸಾಧನದಿಂದ ದೇಶದ ಸಂಪತ್ತು ವಿಶೇಷ ಹೆಚ್ಚಿತು. ಯಂತ್ರೋಪಕರಣಗಳ ಆರಂಭದಿಂದ ಆದ ಸ್ಥಿತಿವಿಪರ್ಯಾಸಕ್ಕೆ

ಓಂ

# ರಾಜಾ ರಾಮಮೋಹನ ರಾಯ್

## ಪ್ರಕರಣ ೧

### ಸಂಧಿಕಾಲ — ವಿಚಾರಪರತೆ — ಯುಗಪ್ರವರ್ತಕ

ಭಾರತಖಂಡದ ಚರಿತ್ರೆಯಲ್ಲಿ ಮೂರು ಮುಖ್ಯ ಘಟ್ಟಗಳನ್ನು ನೋಡಬಹುದು ಆರ್ಷೇಯ ಕಾಲದ ಋಷಿಗಳು ಭಗವಂತನ ದಿವ್ಯ ದರ್ಶನವನ್ನು ಅನುಭವ ಮಾಡಿದರು ಅವರಿಗೆ ಸಾಕ್ಷಾತ್ತಾದ ಜ್ಞಾನದ ಸಾರವನ್ನು ವೇದ ಉಪನಿಷತ್ತುಗಳಲ್ಲಿ ಬೆಳಗಿಸಿದರು ಅವು ಆಗಿನಿಂದಲೂ ಭಾರತಧರ್ಮಕ್ಕೆ ಸ್ಥಿರವಾದ ತಳಹದಿಯಾಗಿವೆ ಅವುಗಳಲ್ಲಿನ ತತ್ತ್ವಸಾರವು ಭಾರತೀಯ ದರ್ಶನ ತತ್ತ್ವಕ್ಕೆ ಕಿರೀಟ ಪ್ರಾಯವಾಗಿ ಪ್ರಪಂಚದ ಎಲ್ಲ ಜನಾಂಗಗಳ ಮಾನ್ಯತೆಗೂ ಪಾತ್ರವಾಗಿದೆ. ಋಷಿಗಳಿಂದ ಪ್ರಣೀತವಾದ ಹಿಂದೂ ಧರ್ಮದ ದಿವ್ಯ ತೇಜಸ್ಸಿಗೆ, ಶತಮಾನಗಳ ತರುವಾಯ, ಮಸಕು ಕವಿಯಿತು ಆಗ ಬೌದ್ಧ ಜೈನ ಮತಗಳು ತಲೆಯೆತ್ತಿದುವು ವೈದಿಕ ಮತ್ತು ಬೌದ್ಧ ಜೈನ ಮತಗಳ ಪ್ರಾಬಲ್ಯದ ಈ ಕಾಲವನ್ನು ಭರತಖಂಡದ ಚರಿತ್ರೆಯಲ್ಲಿ ಪ್ರಾಚೀನಕಾಲ ಅಥವಾ ಧರ್ಮಯುಗವೆನ್ನಬಹುದು. ಇದು ಮೊದಲನೆಯ ಘಟ್ಟ ಮಹಮ್ಮದೀಯರು ಈ ದೇಶಕ್ಕೆ ಕಾಲಿಟ್ಟಾಗಿನಿಂದ ಮತ್ತೊಂದು ಘಟ್ಟವು ಮೊದಲಾಯಿತೆನ್ನಬಹುದು ಆ ಕಾಲದಲ್ಲಿ ಹಿಂದೂ ಮತಕ್ಕೆ ಪ್ರಬಲವಾದ ಆಘಾತ ಒದಗಿದ್ದು ಮಾತ್ರವಲ್ಲದೆ ದೇಶದ ಎಲ್ಲ ಭಾಗಗಳಲ್ಲಿಯೂ

ಅಲ್ಲಕಲ್ಲೋಲತೆ ತಲೆದೋರಿತು. ಪರ ದೇಶಗಳಿಂದ ಇಲ್ಲಿಗೆ ವಿಜಯಾರ್ಥವಾಗಿ ಬಂದ ಮಹಮ್ಮದೀಯರು ಹಿಂದೂ ಮತವನ್ನು ನಾಶ ಮಾಡುವುದಕ್ಕೂ ಅದರ ಸ್ಥಾನದಲ್ಲಿ ಇಸ್ಲಾಂ ಮತವನ್ನು ನೆಲೆಗೊಳಿಸುವುದಕ್ಕೂ ಯತ್ನಿಸಿದರು. ದೇಶದ ಸಂಪತ್ತನ್ನೂ ಕೊಳ್ಳೆಹೊಡೆದರು. ಈ ಕಾಲದಲ್ಲಿ ರಾಷ್ಟ್ರವು ಛಿದ್ರಛಿದ್ರವಾಗಿ, ಪ್ರಬಲರಾದವರು ಆಯಾ ಭಾಗಗಳಿಗೆ ತಾವು ತಾವೇ ಪ್ರಭುಗಳಾಗುತ್ತಿದ್ದರು. ಜನಜೀವನದಲ್ಲಿ ನೆಮ್ಮದಿಯಾಗಲಿ ಜೀವಕಳೆಯಾಗಲಿ ಇರಲಿಲ್ಲ. ಬ್ರಿಟಿಷರು ಈ ದೇಶಕ್ಕೆ ಬಂದು ಅವರ ಪ್ರಭಾವವು ಜನಜೀವನದಲ್ಲಿ ಪರಿಣಾಮಕಾರಿಯಾಗುವವರೆಗೆ ಈ ಸ್ಥಿತಿ ಇತ್ತು. ಬ್ರಿಟಿಷರ ಕಾಲದಿಂದ ಈಚಿನ ಕಾಲವನ್ನು ಮೂರನೆಯ ಘಟ್ಟ ಎಂದು ಹೇಳಬಹುದು. ಇದೇ ಭಾರತದ ನವೋದಯಕ್ಕೆ ತಳಹದಿ.

ಹದಿನೆಂಟನೆಯ ಶತಮಾನದ ಉತ್ತರಾರ್ಧವು ಭರತಖಂಡದ ಚರಿತ್ರೆಯಲ್ಲಿ ತೇಜೋಹೀನವೂ, ಸತ್ವರಹಿತವೂ ಆಗಿದೆ. ಆಗಿನ ಜನಜೀವನದಲ್ಲಿ ಜೀವನಾಡಿ ಮಿಡಿಯುತ್ತಿರಲಿಲ್ಲ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ—ಇವುಗಳಲ್ಲಿ ಯಾವ ದೃಷ್ಟಿಯಿಂದ ನೋಡಿದರೂ ಆ ಕಾಲವನ್ನು ಒಂದು ಸಂಧಿ ಸಮಯವೆನ್ನಬಹುದು. ರಾಜಕೀಯದಲ್ಲಿ ಒಂದು ಸಂಕ್ಷೋಭೆಯೆದ್ದಿತ್ತು. ಹಿಂದಿನಿಂದ ಬಂದ ಪ್ರಸಿದ್ಧವೂ ಸತ್ವಯುಕ್ತವೂ ಆದ ಹಿಂದೂ ರಾಜಮನೆತನಗಳು ಪದಚ್ಯುತವಾಗಿದ್ದುವು. ಡೆಲ್ಲಿಯಲ್ಲಿ ಸಾಮ್ರಾಜ್ಯ ಸೂತ್ರಗಳನ್ನು ಧರಿಸಿದ್ದ ಮೊಗಲರ ಆಳಿಕೆಯು ಹಸರಿಗೆ ಮಾತ್ರ ಜೀವಿಸಿತ್ತು. ದಕ್ಷಿಣದಲ್ಲಿ ಶಿವಾಜಿಯಿಂದ ಪ್ರಣೀತವಾಗಿ ಮಹಾ ಪೌರುಷಶಾಲಿಗಳಿಂದ ಏಳಿಗೆ ಹೊಂದಿದ ಮಹಾರಾಷ್ಟ್ರ ರಾಜವಂಶವು ಕೊನೆಗಾಣುತ್ತ ಬಂದಿತ್ತು. ಎಲ್ಲ ಕಡೆಗಳಲ್ಲಿಯೂ ಸಣ್ಣಪುಟ್ಟ ರಾಜ್ಯಗಳು ಅಧಿಕಾರವಹಿಸಿದ್ದುವು. ಅವುಗಳಿಗೆ ಹಿಂದಿನಿಂದ ಬಂದ ವಂಶದ ಹಿರಿಮೆಯಾಗಲಿ, ಸ್ವತಃ ಗಳಿಸಿದ ಬಲವಾಗಲಿ ಇಲ್ಲದ ಅವುಗಳ ಪ್ರಭುಗಳು ತಮಗಿಂತ ಬಲಿಷ್ಠರಾದವರ ಛಾಯಾವರ್ತಿಗಳಾಗಿದ್ದರು. ಹೊಸ ರಾಜ್ಯಗಳ ನಿರ್ಮಾಣವು ಎಷ್ಟು ಜಾಗ್ರತೆ ಆಗು

ತ್ತಿತ್ತು. ಅವುಗಳ ಅಳಿವೂ ಅಷ್ಟೇ ಜಾಗ್ರತೆಯಲ್ಲಿ ಒದಗುತ್ತಿತ್ತು. ಇಲ್ಲಿಯೇ ನೆಲಸಿ ದೇಶದ ಅಂಗ ಭೂತರೆನಿಸಿದ ಹಿಂದೂ ಮಹಮ್ಮದೀಯರ ಅವ್ಯಾಹತ ಹೋರಾಟಗಳಿಗೆ ಕಾರ್ಯಾರ್ಥವಾಗಿ ಇಲ್ಲಿಗೆ ಬಂದು ನೆಲಸಿದ ಪರಕೀಯರ ಹೋರಾಟಗಳೂ ಜೊತೆಗೂಡುತ್ತಿದ್ದುವು. ಪಶ್ಚಿಮ ಖಂಡ ದಿಂದ ಇಲ್ಲಿಗೆ ವ್ಯಾಪಾರಕ್ಕಾಗಿ ಇಂಗ್ಲಿಷರು, ಫ್ರೆಂಚರು, ಡಚ್ಚರು ಮೊದ ಲಾದವರು ಬಂದಿದ್ದರು ಇವರೆಲ್ಲರೂ ಮೊದಲು ವ್ಯಾಪಾರೇಚ್ಛೆ ಯಿಂದಲೇ ಬಂದವರಾದರೂ ಕಾಲಕ್ರಮದಲ್ಲಿ ತಮ್ಮ ಸ್ವಂತ ರಕ್ಷಣೆಗು ಸಲುವಾಗಿ ಆಯುಧ ಧರಿಸಬೇಕಾಯಿತು ಕೊನೆಗೆ ಅವರು ದೇಶೀಯ ರಾಜರುಗಳ ಪಕ್ಷವನ್ನು ವಹಿಸಿದರು ರಾಜರುಗಳ ಸೋಲು ಗೆಲುವು ಗಳು ಅವರ ಸಾವು ಇರವುಗಳಾದುವು ಪಾಶ್ಚಾತ್ಯ ಜನಾಂಗಗಳವರ ಲ್ಲಿಯೇ ಪಕ್ಷ ಪ್ರತಿಪಕ್ಷಗಳು ಹುಟ್ಟಿಕೊಂಡು ಒಬ್ಬರನ್ನೊಬ್ಬರು ದೇಶದಿಂದ ಹೊರದೂಡುವ ಪ್ರಯತ್ನದಲ್ಲಿ ತೊಡಗಿದರು ಹೀಗಾಗಿ ರಾಜಕೀಯ ರಂಗದಲ್ಲಿ ಶಾಂತಿಯಿರಲಿಲ್ಲ ಯಾವ ಕ್ಷಣದಲ್ಲಿ ಎಲ್ಲಿಂದ ಉದ್ರೇಕ ಬರು ವುದು, ಅದರ ಪರಿಣಾಮವೇನಾದೀತೆಂದು ಹೇಳುವಂತಿರಲಿಲ್ಲ ಪೂರ್ವದ ರಾಜ್ಯವ್ಯವಸ್ಥೆಯು ನೆಲಕ್ಕುರುಳುವುದರಲ್ಲಿತ್ತು. ಅದರ ಸ್ಥಾನಕ್ಕೆ ಬೇರೊಂದು ಸಿದ್ಧವಾಗಿರಲಿಲ್ಲ

ಧಾರ್ಮಿಕರಂಗದಲ್ಲಿ ಆಗಿನ ಭಾರತವು ಮತಮತಾಂತರಗಳ ಹೋರಾಟಕ್ಕೆ ಸಿಕ್ಕಿತ್ತು ಹಿಂದೂಮತದ ಶುದ್ಧ ತತ್ತ್ವ ಜ್ಯೋತಿಗೆ ಮುಸಿ ಹಿಡಿದಿತ್ತು ವೇದ ಉಪನಿಷತ್ತುಗಳಿಂದ ಪ್ರಣೀತವಾದ ಧರ್ಮಕ್ಕೆ ಗ್ಲಾನಿ ತಟ್ಟಿತ್ತು ಅವುಗಳಲ್ಲಡಗಿರುವ ತತ್ತ್ವಗಳನ್ನು ತಿಳಿದಿದ್ದವರು ಕೆಲವು ಮಂದಿ ಮಾತ್ರವೇ ಇದ್ದರು ವೇದೋಪನಿಷತ್ತುಗಳಲ್ಲಿ ಉಕ್ತವಾದ 'ಏಕಮೇವಾದ್ವಿತೀಯಂ ಬ್ರಹ್ಮ'ನ ಉಪಾಸನೆಗೆ ಬದಲು ಅನೇಕಾನೇಕ ಹೊಸ ದೇವರುಗಳ ಪೂಜೆಯು ರೂಢಿಗೆ ಬಂದಿತ್ತು ವೇದಮತದಲ್ಲಿ ಜನರಿಗೆ ವಿಶ್ವಾಸ ತಗ್ಗಿತ್ತು ಅದಕ್ಕೆ ಬದಲು ಅರ್ಥವಿಲ್ಲದ ಆಚಾರ ಮೂಢಭಕ್ತಿ ನಂಬಿಕೆಗಳು ಹೆಚ್ಚಿದ್ದುವು ಭಕ್ತಿ ಪಂಥಗಳು ಹೆಚ್ಚು ಬಳ ಕೆಗೆ ಬಂದಿದ್ದುವು ಆ ಪಂಥದಲ್ಲಿಯೇ ಅನೇಕ ಒಳ ಪಂಗಡಗಳು ಹುಟ್ಟಿ

ಕೊಂಡು ಒಂದಕ್ಕೊಂದು ವಿರೋಧವಾಗಿತ್ತು. ದೇಶದ ಬೇರೆ ಬೇರೆ ಭಾಗಗಳ ಭಾಷೆಗಳಲ್ಲಿ ಭಕ್ತಿ ಭಾವದ ಗೀತಸಾಹಿತ್ಯವು ಹುಟ್ಟಿತ್ತು. ಹದಿನೇಳನೆಯ ಶತಮಾನದಲ್ಲಿ ಚೈತನ್ಯ ಪಂಥವು ಪುನರುದ್ಧಾರವಾಗಿತ್ತು. ಹದಿನೆಂಟನೆಯ ಶತಮಾನದಲ್ಲಿ ಶಕ್ತಿ ಪಂಥವು ಪುನರುತ್ಥಾಪನೆಯಾಯಿತು. ಅದೇ ಶತಮಾನದ ಮಧ್ಯಕ್ಕೆ ಭಕ್ತಿ ಪಂಥಗಳು ಕೊನೆಗಂಡವು. ಹಿಂದೂ ಮತಕ್ಕೆ ಪ್ರತಿಕಕ್ಷಿಯಾಗಿ ಮಹಮ್ಮದೀಯ ಮತವು ಪ್ರಾಬಲ್ಯ ದೆಶೆಯುಲ್ಲಿತ್ತು. ದಕ್ಷಿಣದಲ್ಲಿ ಸ್ಥಾಪಿತವಾದ ಮಹಾರಾಷ್ಟ್ರ ರಾಜ್ಯವೂ ಉತ್ತರದಲ್ಲಿನ ಸಿಕ್ಕರ ರಾಜ್ಯಸ್ಥಾಪನೆಯೂ ಕೊನೆ ಕೊನೆಯಲ್ಲಿ ಬಂದ ಮಹಮ್ಮದೀಯ ರಾಜರ ದರ್ಪ ಅಸಹಿಷ್ಣುತೆಗಳನ್ನು ತಡೆಗಟ್ಟಲು ಹೊರಟ ಹಿಂದೂ ರಾಷ್ಟ್ರೋದ್ಯಮಗಳು. ಹದಿನಾಲ್ಕು ಹದಿನೈದನೆಯ ಶತಮಾನಗಳಲ್ಲಿ ದಕ್ಷಿಣ ದೇಶದ ಮಹಮ್ಮದೀಯರ ಧಾಳಿಯನ್ನು ತಡೆಯಲು ಶ್ರೀ ವಿದ್ಯಾರಣ್ಯರಿಂದ ಪ್ರತಿಷ್ಠಿತವಾಗಿ ಪೋಷಿತವಾದ ವಿಜಯನಗರ ರಾಜ್ಯದಂತೆ ಹದಿನೆಂಟನೆಯ ಶತಮಾನದಲ್ಲಿ ಮಹಾರಾಷ್ಟ್ರ ಮತ್ತು ಸಿಕ್ ರಾಜ್ಯಗಳು ಹಿಂದೂ ಮತವನ್ನು ಊರ್ಜಿತಗೊಳಿಸಲು ಸಿದ್ಧವಾದುವು ಅವು ಹಿಂದೂ ಧರ್ಮದ ಪುನರುಜ್ಜೀವನಕ್ಕಾಗಿಯೇ ಶ್ರಮಿಸಿದುವು. ಆದರೆ ಮೊಗಲ್ ಸಾಮ್ರಾಜ್ಯಾನಂತರ ರಾಜಕೀಯ ಅಧಿಕಾರ ವಹಿಸಿದ ಹಿಂದೂ ರಾಜ್ಯಗಳು ಹಿಂದೂ ಧರ್ಮೋದ್ಧರಣ ಕಾರ್ಯವನ್ನು ಕೈಗೊಳ್ಳಲಿಲ್ಲ. ಹೊಸ ವಿಚಾರ ಪರತೆಯಾಗಲಿ ಜೀವನ ಸಮಸ್ಯೆಗಳನ್ನು ಕುರಿತ ಹೊಸ ವಿವೇಚನೆಯಾಗಲಿ ಹಿಂದಿನ ಆಧ್ಯಾತ್ಮಿಕ ತತ್ತ್ವಗಳಿಗೆ ಹೊಸ ವ್ಯಾಖ್ಯಾನ ವಿವರಣೆಗಳಾಗಲಿ ಹುಟ್ಟಲಿಲ್ಲ. ಜೊತೆಗೆ ಪರದೇಶದಿಂದ ಇಲ್ಲಿಗೆ ಬಂದ ಜನಾಂಗಗಳವರ ಧರ್ಮವಾದ ಕ್ರೈಸ್ತ ಮತವೂ ತಲೆಹಾಕುತ್ತಿತ್ತು. ಆ ಮತದ ಪಾದ್ರಿಗಳು ಹಿಂದೂ ಮತವು ಅಜ್ಞಾನ ಜನ್ಯವೆಂದೂ ಅನಾಗರಿಕವೆಂದೂ ಬೋಧಿಸಿ ತಮ್ಮ ಮತದ ಕಡೆಗೆ ಜನರನ್ನು ಆಕರ್ಷಿಸುತ್ತಿದ್ದರು.

ಸಾಮಾಜಿಕ ಜೀವನವೂ ಅಂತೆಯೇ ಅನನ್ವಯುವಾಗಿತ್ತು. ಪ್ರಜೆಗಳಲ್ಲಿ ಜನಾಂಗದ ಭಾವನೆ ತಪ್ಪಿತ್ತು. ಜ್ಞಾನ ಪ್ರಚಾರ ಸಾಧಕಗಳಾದ

ಈಗಿನಂತಹ ವಿದ್ಯಾ ಪೀಠಗಳಿರಲಿಲ್ಲ ಅಲ್ಲಲ್ಲಿ ಇದ್ದ ಚಿಕ್ಕ ಪಾಠಶಾಲೆ ಮುಕ್ತಾಬಾಗಳು ಮಾತ್ರವೇ ವಿದ್ಯಾಪ್ರಚಾರಕ ಸಂಸ್ಥೆಗಳಾಗಿದ್ದುವು. ಅಲ್ಲಿ ಸಂಸ್ಕೃತ, ಅರಬ್ಬಿ ಮತ್ತು ಪಾರ್ಸಿ ಭಾಷೆಗಳು ಬೋಧೆಯಾಗುತ್ತಿದ್ದುವೇ ಹೊರತು ಇಂಗ್ಲಿಷ್ ವ್ಯಾಸಂಗದ ಅವಶ್ಯಕತೆಯೂ ತನ್ಮೂಲಕವುಂಟಾಗ ಬಹುದಾದ ಜ್ಞಾನ ವೈಶಾಲ್ಯವೂ ಗೋಚರಕ್ಕೆ ಬಂದಿರಲಿಲ್ಲ ಪಾಶ್ಚಾತ್ಯ ರಲ್ಲಿ ಪ್ರಚಾರಕ್ಕೆ ಬರುತ್ತಿದ್ದ ವಿಜ್ಞಾನಶಾಸ್ತ್ರಗಳೂ ಸಮಾಜಶಾಸ್ತ್ರಗಳೂ ಭಾರತೀಯರು ಅರಿಯದವುಗಳಾಗಿದ್ದುವು ದೇಶವು ಜ್ಞಾನಪ್ರಭೆಯನ್ನು ಕಾಣದೆ ಅಜ್ಞಾನಾಂಧಕಾರದಲ್ಲಿ ಮುಳುಗಿತ್ತು ಸ್ತ್ರೀಯರ ಸ್ಥಿತಿಯಂತೂ ಬಹು ಶೋಚನೀಯವಾಗಿತ್ತು ಅವರಿಗೆ ವಿದ್ಯೆಯಿಲ್ಲದುದು ಮಾತ್ರವಲ್ಲದೆ ಸಾಮಾನ್ಯ ಸ್ವಾತಂತ್ರ್ಯವೂ ಇರಲಿಲ್ಲ ಬಾಲ್ಯವಿವಾಹವೂ ಬಹು ಪತ್ನೀ ವಿವಾಹವೂ ಸಾಮಾನ್ಯ ಪದ್ಧತಿಗಳಾಗಿದ್ದುವು ಸ್ತ್ರೀಯು ವಿಧವೆ ಯಾದರೆ ಪತಿಯ ಜೊತೆಯಲ್ಲಿಯೇ ಅವಳೂ ಚಿತೆಯೇರಬೇಕಾಗಿತ್ತು ಅವಳಿಗೆ ಒಂದು ವೇಳೆ ಇಷ್ಟವಿಲ್ಲದಿದ್ದರೂ ಬಂಧುಗಳ ನಿರ್ಬಂಧಕ್ಕಾದರೂ ಸಹಗಮನವನ್ನಾಚರಿಸಬೇಕಾಗಿತ್ತು ಸ್ತ್ರೀಯರಿಗೆ ತಂದೆಯ ಆಸ್ತಿಪಾಸ್ತಿ ಗಳಲ್ಲಿ ಯಾವಹಕ್ಕೂ ಇರಲಿಲ್ಲ ರಾಜಕೀಯ ಧಾರ್ಮಿಕ ಜೀವನದಲ್ಲಿ ಹೇಗೆ ಒಂದು ಸಂಕ್ಷೋಭೆಯಿತ್ತೋ ಹಾಗೆಯೇ ಜನಜೀವನದಲ್ಲಿಯೂ ಸುಖ ಶಾಂತಿಗಳಿರಲಿಲ್ಲ ಮುಖ್ಯವಾದ ದೊಡ್ಡ ಪಟ್ಟಣಗಳಲ್ಲಿ ನಾನಾಜನಾಂಗ ಗಳ ಜನರನ್ನೂ ಅವರ ಬಗೆಬಗೆಯ ನಡತೆಗಳನ್ನೂ ನೋಡಬಹುದಾಗಿತ್ತು

ಆರ್ಥಿಕ ವಿಚಾರದಲ್ಲಂತೂ ದೇಶವು ಕ್ಷೀಣದೆಶೆಯಲ್ಲಿತ್ತೆಂದು ಹೇಳಬೇಕಾಗಿಲ್ಲ ಮಹಮ್ಮದೀಯ ಮತ್ತು ಮರಾಟ ಪ್ರಭುಗಳು ಸಾಧ್ಯವಿದ್ದಷ್ಟು ತೆರಿಗೆ ಕಂದಾಯಗಳನ್ನು ಹಾಕುತ್ತಿದ್ದುದರಿಂದ ಜನರು ನಿರ್ಗತಿಕರಾಗಿದ್ದರು ರಾಜರು ಅವ್ಯಾಹತವಾಗಿ ನಡೆಸುತ್ತಿದ್ದ ಹೋರಾಟ ಗಳಿಗೂ ಅವರವರ ವಿಲೋಲುಪತೆಗಳಿಗೂ ತಕ್ಕಂತೆ ಭಂಡಾರವನ್ನು ಬರಿದು ಮಾಡುತ್ತಿದ್ದರು ದೇಶದ ಸಂಪತ್ತನ್ನು ಹೆಚ್ಚಿಸಲು ಯಾರೂ ಗಮನವನ್ನೂ ಕೊಡಲಿಲ್ಲ, ಮತ್ತು ಅಂಥ ಯೋಜನೆಗಳಿಗೆ ಹಣವೂ ಇರಲಿಲ್ಲ

ಒಟ್ಟಿನಲ್ಲಿ, ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ನಮ್ಮ ದೇಶವು ರಾಜ್ಯವ್ಯವಸ್ಥೆ, ಧರ್ಮನಿಯಮ ಮತ್ತು ಸಂಸ್ಕೃತಿಗಳ ಹೋರಾಟದ ಸುಳಿಗೆ ಸಿಕ್ಕಿತ್ತೆಂದು ಹೇಳಬಹುದು. ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳೂ ಒಂದೊಂದು ಸಲ ಈ ಬಗೆಯ ಸುಳಿಗೆ ಸಿಕ್ಕಿತ್ತೆಂದು ಚರಿತ್ರೆಯಿಂದ ತಿಳಿದು ಬರುತ್ತದೆ. ಇಂತಹ ಪರಿಸ್ಥಿತಿಗೆ ಮಧ್ಯಯುಗದ ಸ್ಥಿತಿಯೆಂದು ಹೇಳುವುದುಂಟು. ನಮ್ಮ ದೇಶದಲ್ಲಿ ಮುಹಮ್ಮದೀಯರ ರಾಜ್ಯಭಾರವು ಕೊನೆಗಂಡು ಬ್ರಿಟಿಷರ ಆಳಿಕೆಯು ಪ್ರಾರಂಭವಾಗುವ ಮೊದಲು ಇದ್ದ ಸ್ಥಿತಿಯನ್ನು ಮಧ್ಯಯುಗದ ಸ್ಥಿತಿಯೆಂದು ಹೇಳಬಹುದು.

ಪಾಶ್ಚಾತ್ಯರ, ಮುಖ್ಯವಾಗಿ ಇಂಗ್ಲಿಷರ, ಸಹವಾಸ ಪ್ರಭಾವಗಳಿಂದ ದೇಶವು ಹೊಸಯುಗದಲ್ಲಿ ಅಡಿಯಿಟ್ಟಿತು. ತತ್ಪೂರ್ವದ ಅಂಧಕಾರ ಮಯತೆಯು ತೊಲಗಿ ರಾಜಕೀಯ, ಧಾರ್ಮಿಕ, ಸಾಮಾಜಿಕ ರಂಗಗಳಲ್ಲಿ ಹೊಸಕಾಂತಿಮೂಡಿತು. ವಸಂತಋತುವಿನ ಆವಿರ್ಭಾವದಲ್ಲಿ ತರುಲತೆಗಳಲ್ಲಿ ಜೀವರಸ ಉಕ್ಕಿ ಹೊಸ ತಳಿರು ಪುಷ್ಪಗಳುದಿಸಿ ಕಳಕಳಿಸುವಂತೆ ಭಾರತದ ಜನಜೀವನ ನಾಡಿಯಲ್ಲಿ ಜೀವಕಳೆಯುಂಕುರಿಸಿ ನವಚೈತನ್ಯೋದಯವಾಯಿತು. ಈ ನವಚೈತನ್ಯದ ಮೂರ್ತಿಮತ್ತಾಗಿ ಅದರ ಪ್ರಭಾವ ಪ್ರಭೆಯನ್ನು ಬೆಳಗಿಸಿ ಜನತೆಯನ್ನು ಸ್ಫೂರ್ತಿಗೊಳಿಸಿದ ನವಭಾರತದ ಮೊದಲ ಮಾನ್ಯ ಪುತ್ರರೇ ರಾಜಾ ರಾಮಮೋಹನರಾಯರು.

ಭಾರತದಲ್ಲಿ ವಿಕಸಿಸಿದ ನವಚೈತನ್ಯಕುಸುಮವು ಈಕ್ಷೇತ್ರದಲ್ಲಿ ತಾನಾಗಿಯೇ ಹುಟ್ಟಿದುದಲ್ಲ. ಇಲ್ಲಿ ನೆಲಸಿದ ಇಂಗ್ಲಿಷರು ಅದರ ಬೆಳೆವಣಿಗೆಗೆ ನೆಪಮಾತ್ರ ಕಾರಣರು. ಅದರ ಬೀಜವು ಪಾಶ್ಚಾತ್ಯ ದೇಶಗಳಲ್ಲಿ ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳಲ್ಲಿ ಜರುಗುತ್ತಿದ್ದ ಮಹಾಘಟನೆಗಳಲ್ಲಡಗಿರುವುದು. ಅಲ್ಲಿ ತಲ್ಲಣಗೊಳಿಸುವಂತೆ ತ್ವರಿತದಿಂದ ಜರುಗುತ್ತಿದ್ದ ಮಹಾಘಟನೆಗಳ ಪರಿಣಾಮದ ಬಿರುಗಾಳಿಯು ಈ ದೇಶಕ್ಕೂ ಬೀಸಿತು. ಅದನ್ನು ತಡೆಯಲು ಯಾರಿಗೂ ಸಾಧ್ಯವಿರಲಿಲ್ಲ; ಮತ್ತು ಇಲ್ಲಿನ ಸಂದರ್ಭ ಸನ್ನಿವೇಶಗಳು ಅದರ ನೆಲೆಗೆ ಅನುಕೂಲವಾಗಿದ್ದು

ದರಿಂದ ಇಲ್ಲಿ ನವಚೈತನ್ಯದ ಬೀಜವು ಮೊಳಕೆಯಾಗುವಂತಾಯಿತು ಪಾಶ್ಚಾತ್ಯರು ಈ ದೇಶಕ್ಕೆ ಬಂದು ಇಲ್ಲಿ ಸ್ವಾಸ್ಥ್ಯಗಳನ್ನು ಸ್ಥಾಪಿಸಿದುದೇ ಅವರ ತೌರುರಾಷ್ಟ್ರಗಳಲ್ಲಿ ನಡೆಯುತ್ತಿದ್ದ ಮಹಾ ಘಟನೆಗಳ ಒಂದು ಪರಿಣಾಮವಾಗಿ

ಯೂರೋಪು ಖಂಡದ ಮುಖ್ಯ ರಾಷ್ಟ್ರಗಳಲ್ಲಿ ಹದಿನೆಂಟನೆಯ ಶತಮಾನದಲ್ಲಿ ಮಹತ್ವಪೂರಿತವಾದ ಘಟನೆಗಳು ಜರುಗಿವೆ ಆ ಘಟನೆಗಳಿಂದ ಪ್ರಬಲ ರಾಷ್ಟ್ರಗಳಲ್ಲಿನ ರಾಜಕೀಯ ಸಾಮಾಜಿಕ ಪದ್ಧತಿಗಳೇ ಬದಲಾಗಿ ಅವು ಹೊಸ ರೀತಿ ನೀತಿಗಳನ್ನು ಅನುಸರಿಸಬೇಕಾಯಿತು. ರಾಷ್ಟ್ರೀಯ ಭಾವನೆಯೂ, ಎಲ್ಲಕ್ಷೇತ್ರಗಳಲ್ಲಿಯೂ ಸ್ವಾತಂತ್ರ್ಯಾಪೇಕ್ಷೆಯೂ, ಒಂದು ಹೊಸ ವಿಚಾರಪರದೃಷ್ಟಿಯೂ ಈ ಯುಗದ ಮುಖ್ಯ ಲಕ್ಷಣಗಳು

ಹದಿನೆಂಟನೆಯ ಶತಮಾನವು ವ್ಯಾಪಾರಾಭಿವೃದ್ಧಿಯಕಾಲ ಅದು ವರೆಗೆ ಸಾಮಾನ್ಯವಾಗಿ ಎಲ್ಲ ದೇಶಗಳೂ ತಮಗೆ ಅವಶ್ಯವಾದ ಎಲ್ಲ ಪದಾರ್ಥಗಳನ್ನೂ ತಾವೇ ಸಿದ್ಧಗೊಳಿಸಿಕೊಂಡು ಪರಾವಲಂಬನವಿಲ್ಲದವರಾಗಿದ್ದರು, ಮತ್ತು ತಮ್ಮ ದೇಶದಿಂದ ಹೊರ ದೇಶಗಳಿಗೆ ಹಣ ಹರಿದು ಹೋಗದಂತೆ ಮಾಡುತ್ತಿದ್ದರು ಇದು ಆಗ ಅನುಸರಿಸುತ್ತಿದ್ದ ಒಂದು ವ್ಯಾಪಾರ ನಿಯಮ ಮುಖ್ಯವಾಗಿ ಧಾನ್ಯವನ್ನು ಯಾವದೇಶವೂ ಆಮದು ಮಾಡುತ್ತಿರಲಿಲ್ಲ ಹೇಗಾದರೂ ಮಾಡಿ ಒಟ್ಟು ವ್ಯಾಪಾರದಲ್ಲಿ ತಮ್ಮ ದೇಶಕ್ಕೇ ಹೆಚ್ಚು ಹಣ ಸಂದಾಯವಾಗಬೇಕೆಂದು ಪ್ರತಿಯೊಂದು ರಾಷ್ಟ್ರವೂ ಯತ್ನಿಸುತ್ತಿತ್ತು ಕೈಗಾರಿಕಗಳಿಗೆ ಹೆಸರು ಪಡೆದ ಎರಡು ಮುಖ್ಯ ರಾಷ್ಟ್ರಗಳಾದ ಇಂಗ್ಲೆಂಡ್ ಮತ್ತು ಫ್ರಾನ್ಸ್ ಒಂದರೊಡನೊಂದು ಹೆಚ್ಚು ವ್ಯಾಪಾರ ನಡೆಸಲಿಲ್ಲ ತನ್ಮೂಲಕ ಆದ ಸಾಮಾನುಗಳಿಗೆ ಪೈಪೋಟಿ ಕಲ್ಪಿಸಬಾರದೆಂದು ಅಷ್ಟು ಆತುರರಾಗಿದ್ದರು ಅವರು ಈ ವ್ಯಾಪಾರದಲ್ಲಿನ ಸ್ಪರ್ಧೆಯೇ ಯೂರೋಪಿನ ಮುಖ್ಯರಾಷ್ಟ್ರಗಳಲ್ಲಿ ತಮ್ಮ ದೇಶದಲ್ಲಿ ಮಾತ್ರವೇ ಅಲ್ಲದೆ ಆ ರಾಷ್ಟ್ರಗಳು ದೂರದೇಶಗಳಲ್ಲಿ ಸ್ಥಾಪಿಸಿ

ಕೊಂಡಿದ್ದ ಸ್ವಾಸ್ಥ್ಯಗಳಲ್ಲಿಯೂ ಪರಸ್ಪರ ಕಲಹಗಳಿಗೆ ಕಾರಣವಾಯಿತು. ಇದರ ಪರಿಣಾಮವಾಗಿಯೇ ಇಂಡಿಯದಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಆಗಾಗ್ಗೆ ಕಲಹಗಳು ನಡೆಯುತ್ತಿದ್ದುದು. ಆ ಎಲ್ಲ ಕಲಹಗಳಲ್ಲಿಯೂ ಇಂಗ್ಲಿಷರಿಗೆ ಜಯವಾಯಿತು. ಅದಕ್ಕೆ ಪ್ರಬಲವಾದ ಕಾರಣವು ಬ್ರಿಟಿಷ್ ರಾಜಕೀಯ ವ್ಯವಸ್ಥೆಯಲ್ಲಿ ವ್ಯಾಪಾರಗಾರರು ಹೆಚ್ಚು ಪ್ರಭಾವ ಬೀರುತ್ತಿದ್ದುದು. ವರ್ತಕವರ್ಗದವರು ಹೆಚ್ಚಿದ್ದ ಸಂಪತ್ತನ್ನು ಪ್ರಯೋಜನಕರವಾಗಿ ಪುದುವಿಡುವ ಮಾರ್ಗಗಳನ್ನು ಹುಡುಕಿದರು. ಅದುವರೆಗೆ ವ್ಯವಸಾಯವೂ ಕುರಿ ಪೋಷಣೆಯೂ ಜನರ ಮುಖ್ಯ ಕಸಬುಗಳಾಗಿದ್ದುವು. ಕೈಗಾರಿಕೆಗಳಿರಲಿಲ್ಲವೆಂದೇ ಹೇಳಬಹುದು. ನೂಲುವುದು ನೇಯುವುದು ಮೊದಲಾದುವುಗಳನ್ನು ಮನೆಗಳಲ್ಲಿ ಯಂತ್ರ ಸಹಾಯವಿಲ್ಲದೆ ಕೈಯಿಂದಲೇ ನಡೆಸುತ್ತಿದ್ದರು. ಇದಕ್ಕೆ ಯಂತ್ರೋಪಕರಣಗಳನ್ನು ಉಪಯೋಗಿಸಬಹುದೇ ಎಂಬ ಶೋಧನೆಗಳು ನಡೆದುವು. ಯಂತ್ರಗಳಿಗೆ ಶಕ್ತಿಯು ಬೇಕಾಗಿತ್ತು. ಈ ಶಕ್ತಿಯನ್ನು ಹಬೆಯಿಂದ ಒದಗಿಸಬಹುದೆಂದು ತಿಳಿದುದು ಯಂತ್ರಯುಗಕ್ಕೆ ತಳಹದಿಯಾಯಿತು. ಕಬ್ಬಿಣ ಕಲ್ಲಿದ್ದಲು ಗಣಿಗಳು ಶೋಧನೆಗೆ ಬಂದು ಅತ್ಯದ್ಭುತ ರೀತಿಯ ಬದಲಾವಣೆಗಳಿಗೆ ಮೊದಲಾದುವು. ಈ ಲೋಹಗಳ ಮಿಶ್ರಣವು ಕೈಗಾರಿಕೆಗಳ ರಂಗದಲ್ಲಿ ಅದುವರೆಗೆ ಗೋಚರವಾಗದಿದ್ದ ಒಂದು ಹೊಸ ಪ್ರಪಂಚವನ್ನೇ ಹೊರಗಾಣಿಸಿತು. ಬಂಡವಾಳಗಾರರು ಪರಿಸ್ಥಿತಿಯ ಬದಲಾವಣೆಗೆ ಎಚ್ಚತ್ತುಕೊಂಡು ದೊಡ್ಡ ಕಾರ್ಖಾನೆಗಳನ್ನು ಏರ್ಪಡಿಸಿದರು. ಈ ಕಾರ್ಖಾನೆಗಳಲ್ಲಿ ನೂರಾರು ಜನ ಕೂಲಿಗಾರರು ಕೆಲಸಮಾಡುವಂತಾಯಿತು. ಹಿಂದಿನ ಪದ್ಧತಿಯಲ್ಲಿ ಆಗುತ್ತಿದ್ದ ಉತ್ಪತ್ತಿಗಿಂತ ನೂರರಷ್ಟು ಹೆಚ್ಚು ಉತ್ಪತ್ತಿಯಾಗುವಂತಾಯಿತು. ಅನೇಕರಿಗೆ ಉದ್ಯೋಗಗಳು ದೊರೆಯುವಂತಾಯಿತು. ಮೊದಲು ಹಳ್ಳಿಗಳಾಗಿದ್ದುವು ದೊಡ್ಡದೊಡ್ಡ ಕಾರ್ಖಾನೆಗಳ ಕೇಂದ್ರಗಳಾಗಿ ಜನಭರಿತವಾದ ಪಟ್ಟಣಗಳಾದುವು. ಫ್ರಾನ್ಸಿನಲ್ಲಿ ಲಿಯಾನ್ಸ್ ಇಂಗ್ಲೆಂಡಿನಲ್ಲಿ ಮಾನ್‌ಚೆಸ್ಟರ್ ಕಾರ್ಖಾನೆಗಳ ಕೇಂದ್ರಗಳಾದುವು. ಯಂತ್ರೋಪಕರಣಗಳ ಸಾಧನದಿಂದ ದೇಶದ ಸಂಪತ್ತು ವಿಶೇಷ ಹೆಚ್ಚಿತು. ಯಂತ್ರೋಪಕರಣಗಳ ಆರಂಭದಿಂದ ಆದ ಸ್ಥಿತಿವಿಪರ್ಯಾಸಕ್ಕೆ

"ಕೈಗಾರಿಕೆಯ ಕ್ರಾಂತಿ" ಅಥವಾ "ಔದ್ಯೋಗಿಕ ವಿಪ್ಲವ" ಎಂದು ಹೇಳುವರು ಈ ಕ್ರಾಂತಿಯಾದುದು ಇಂಗ್ಲೆಂಡಿನಲ್ಲಿ

ವ್ಯಾಪಾರವೂ, ಕಾರ್ಖಾನೆಗಳೂ, ಹೆಚ್ಚಿದುದರಿಂದ ಯಾನಮಾರ್ಗಗಳೊ, ಅಂಚೆ ವ್ಯವಸ್ಥೆಯೂ ಉತ್ತಮಗೊಂಡುವು ಸ್ಥಳದಿಂದ ಸ್ಥಳಕ್ಕೆ ಹೆಚ್ಚು ವಿಳಂಬವಿಲ್ಲದೆ ಹೋಗುವ ಸೌಕರ್ಯಗಳೂ ಒದಗುತ್ತ ಬಂದುವು. ಮೇಲಾಗಿ, ಕಾರ್ಖಾನೆಗಳು ಹೆಚ್ಚಿದುದರಿಂದ ಹೊಸ ಹೊಸ ಮಾರ್ಪಾಟುಗಳೂ ಸಮಸ್ಯೆಗಳೂ ಜನಜೀವನದಲ್ಲಿಯೂ ರಾಜಕೀಯದಲ್ಲಿಯೂ ತಲೆಹಾಕಿದುವು

ಯೂರೋಪಿನಲ್ಲಿ ರಾಜರುಗಳು ಬಹುಮಟ್ಟಿಗೆ ದರ್ಪವುಳ್ಳವರಾಗಿದ್ದರು ರಾಜ್ಯಭಾರವು ಸ್ವಯಂತ್ರ ವಿಚಾರವೆಂಬ ಭಾವನೆಯಿತ್ತು, ಅಲ್ಲದೆ ರಾಜನಿಗೆ ಅಧಿಕಾರವು ಸ್ವವಾಯತ್ತವಾದುದೆಂಬ ಒಂದು ಅಭಿಪ್ರಾಯವು ಅಂತಹ ಭಾವನೆಗೆ ಪೋಷಕವಾಗಿತ್ತು "ಫ್ಯೂಡಲ್" ಸಂಸ್ಥೆಗಳು—ನಮ್ಮ ದೇಶದಲ್ಲಿನ ಪಾಳೆಯಪಟ್ಟುಗಳಂತಹವು—ಇಲ್ಲದಿದ್ದರೂ ಶ್ರೀಮಂತ ವರ್ಗದವರಲ್ಲಿ ಉಳಿದಿದ್ದ ಹಿಂದಿನ ಅಧಿಕಾರ, ಬಲ, ವೈಭವಗಳು ತಗ್ಗಲು ಮೊದಲಾಯಿತು ಅವರು ರಾಜಕೀಯದಲ್ಲಿ ಅಧಿಕಾರ ಸ್ಥಾನವನ್ನು ಪಡೆಯಲಿಲ್ಲ ಅವರ ಅಧಿಕಾರವೇನಿದ್ದರೂ ಅವರ ಭೂಸ್ವಾಸ್ಥ್ಯದ ಬೇಸಾಯಗಾರರ ಮೇಲಿತ್ತು ಅವರಿಂದ ದ್ರವ್ಯ ಸಹಾಯವನ್ನೂ ನಿರ್ಬಂಧ ಊಳಿಗವನ್ನೂ ನಿರೀಕ್ಷಿಸುತ್ತಿದ್ದರು ಅವರು ಸಾಮಾನ್ಯ ಜನವರ್ಗದೊಂದಿಗೂ ವರ್ತಕವರ್ಗದೊಂದಿಗೂ ಸೇರಿ ರಾಜನ ದರ್ಪವನ್ನು ಕಡಿಮೆ ಮಾಡಿ ದೇಶವನ್ನು ಹೆಚ್ಚು ಪ್ರಜಾದೃಷ್ಟಿಯಿಂದ ಆಳಲು ಯತ್ನಿಸುತ್ತಿದ್ದರು ವರ್ತಕ ವರ್ಗದವರು ಪ್ರಾಮುಖ್ಯಕ್ಕೆ ಬರುತ್ತಿದ್ದರು ಅವರು ಶ್ರೀಮಂತರ ಸ್ಥಾನ ಗೌರವಗಳನ್ನು ಗಳಿಸಿಕೊಳ್ಳುತ್ತಿದ್ದರು ಅವರಲ್ಲಿ ವಿದ್ಯೆ ಬಳೆದು ಅವರೂ, ವಕೀಲಿ ವೃತ್ತಿಯವರೂ ಸರ್ಕಾರದಲ್ಲಿ ಮಾನ್ಯಸ್ಥಾನಗಳನ್ನು ಆಕ್ರಮಿಸಿಕೊಳ್ಳಲು ಮೊದಲು ಮಾಡಿದರು ಬಂಡವಾಳಗಾರರಲ್ಲಿ ಕಲವರು ನಯ ನಾಜೂಕುಗಳಿಲ್ಲದವರಿದ್ದರೂ ಅನೇಕರು ಶ್ರೀಮಂತ ವರ್ಗದವರಂತೆಯೇ ಅಟ್ಟಹಾಸದಿಂದ ಜೀವಿಸುತ್ತಿದ್ದರು. ಅವ

ರಿಗೆ ಸರ್ಕಾರದಲ್ಲಿ ಪ್ರಾತಿನಿಧ್ಯ ಬೇಕಾಯಿತು. ಇಂಗ್ಲೆಂಡಿನಲ್ಲಿ ಪ್ರಜೆಗಳೂ ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆಯಲು ಹೋರಾಡಿದರು. ಅವರಲ್ಲಿ ರಾಷ್ಟ್ರೀಯ ಭಾವನೆ ಮೂಡುತ್ತಿತ್ತು. ಸರ್ಕಾರದ ಆಡಳಿತದಲ್ಲಿ ಹೆಚ್ಚು ಪ್ರಜೆಗಳು ಆಸಕ್ತರಾದರು. ಅಭಿಮತ ಕೊಡುವ ಹಕ್ಕನ್ನು ಹೆಚ್ಚು ಜನಕ್ಕೆ ಒದಗಿಸಲಾಯಿತು. ಕಾರ್ಖಾನೆಗಳಲ್ಲಿನ ಕಾರ್ಮಿಕ ವರ್ಗದವರೂ ರಾಜಕೀಯದಲ್ಲಿ ಸ್ಥಾನ ಬಯಸುತ್ತ ಬಂದರು. ಪ್ರಜಾಪ್ರಭುತ್ವಕ್ಕೆ ಸಾಧನೆಯಾಯಿತು.

ಶ್ರೀಮಂತ ವರ್ಗದವರನ್ನು ಅನುಕರಿಸಿ ಬಂಡವಾಳಗಾರರೂ ವ್ಯಾಪಾರಗಾರರೂ ದುಂದುವೆಚ್ಚ ಮಾಡುತ್ತ ಅಟ್ಟಹಾಸದ ಜೀವನ ನಡೆಸಲು ಮೊದಲು ಮಾಡಿದರು. ಸಮಾಜದಲ್ಲಿ ನೀತಿಯ ಕಟ್ಟುಗಳಿಗಿಂತಲೂ ಔಪಚಾರಿಕ ಮರ್ಯಾದೆಯು ನಿಯಮವೇರ್ಪಟ್ಟಿತು. ಸಮಾಜದ ಒಂದು ವರ್ಗದವರು ಹೀಗಿದ್ದರೆ ಅವರಿಗೆ ಪ್ರತಿಯಾಗಿ ಬಡವರು ಒರಟರೂ ಅಸಭ್ಯರೂ ನಾಜೂಕಿಲ್ಲದವರೂ ಆಗಿದ್ದರು. ಅವರು ವಾಸಿಸುತ್ತಿದ್ದ ಕೊಳೆ ಮನೆಗಳು ಶ್ರೀಮಂತರ ದಿವ್ಯಭವನಗಳಿಗೆ ಪ್ರತಿಯಾಗಿದ್ದುವು. ಅವರ ಉಡಿಗೆ ತೊಡಿಗೆಗಳಲ್ಲಿಯೂ ಹೀಗೆಯೇ ವೈಪರೀತ್ಯವಿತ್ತು.

ಹದಿನೆಂಟನೆಯ ಶತಮಾನದ ಉತ್ತರಾರ್ಧದ ಘಟನೆಗಳಲ್ಲೆಲ್ಲ ಅತಿ ಮಹತ್ವವಾದ್ದು ವಿಚಾರ ಪರತೆಯ ಬೆಳವಣಿಗೆ. ಮತಾಚಾರಗಳಲ್ಲಿ, ರಾಜಕೀಯದಲ್ಲಿ, ವ್ಯವಹಾರದಲ್ಲಿ—ಎಲ್ಲದರಲ್ಲಿಯೂ ಸ್ವತಂತ್ರ ಸತ್ಯಾನ್ವೇಷಣ ಬುದ್ಧಿ ಹುಟ್ಟಿತು. ಹಿಂದಿನಿಂದ ಬಂದ ಸಿದ್ಧಾಂತಗಳಲ್ಲಿ, ಪೂರ್ವಿಕರ ಆಚಾರ ನಡವಳಿಕೆಗಳಲ್ಲಿ, ನಂಬಿಕೆ ಕದಲಿತು. ಬಾಹ್ಯ ಪ್ರಪಂಚದಲ್ಲಿ ರಾಜನ, ಆಧ್ಯಾತ್ಮಿಕ ಪ್ರಪಂಚದಲ್ಲಿ ಮತಾಧಿಪತಿಯ, ಸ್ವತಂತ್ರ ಅಧಿಕಾರವನ್ನು ಪ್ರತಿಭಟಿಸುವ ಕೆಲವು ಮಹನೀಯರು ಜನಜೀವನದಲ್ಲಿ ವಿಚಾರ ಪರತೆಯ ಆಂದೋಳನವನ್ನೆಬ್ಬಿಸಿದರು. ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ ಸಂಸ್ಥೆಗಳು ಹೇಗಿರಬೇಕೆಂಬುವಕ್ಕೆ ಹೊಸ ಸೂತ್ರಗಳನ್ನು ಕಲ್ಪಿಸಿದರು. ಹೀಗೆ ಮಾಡಿದವರಲ್ಲಿ ಫ್ರಾನ್ಸ್ ದೇಶದ ವಾಲ್ಟೇರ್ ಒಬ್ಬ. ಅವನು ತನ್ನ ಇಪ್ಪತ್ತನೆಯ ವರ್ಷದಿಂದ ಲೇಖನಗಳನ್ನು ಬರೆಯಲು

ಮೊದಲು ಮಾಡಿ ಚರಿತ್ರೆ, ಪ್ರಬಂಧ ಪದ್ಯ, ನಾಟಕ ಮೊದಲಾದ ಎಲ್ಲ ಸಾಹಿತ್ಯ ರೂಪಗಳಲ್ಲಿಯೂ ಗ್ರಂಥಗಳನ್ನು ರಚಿಸಿದನು ಆಗಿನ ರಾಜಕೀಯ, ಸಾಮಾಜಿಕ ಪದ್ಧತಿಗಳನ್ನೂ ಶ್ರೀಮಂತರ ರೀತಿನೀತಿಗಳನ್ನೂ ಅಪಹಾಸ್ಯಕ್ಕೆ ಗುರಿಮಾಡಿದನು ಅವನ ಬರವಣಿಗೆಯ ತೀಕ್ಷ್ಣತೆಯು ಖಡ್ಗದ ತೀಕ್ಷ್ಣತೆಯನ್ನೂ ಮೀರಿಸಿತ್ತು ಅವನು ಕ್ರಾಂತಿಯ ವಿಚಾರವಾಗಿ ಮಾತನಾಡಿದರೂ ಕ್ರಾಂತಿಕಾರನಾಗಿರಲಿಲ್ಲ ಅವನು ರಾಜನ ಸ್ವತಂತ್ರ ಸರ್ವಾಧಿಕಾರವನ್ನು ಒಪ್ಪಿದನು ಆದರೆ ಆ ಸರ್ವಾಧಿಕಾರವುಳ್ಳ ರಾಜನು ವಿವೇಕಿಯಾಗಿದ್ದು ಪ್ರಕೃತಿನಿಯಮಾನುಸಾರವಾಗಿ ಆಳಬೇಕು—ಎಂದರೆ ಹಿಂದಿನ ರಾಜರುಗಳು ಮಾಡಿದ ಸ್ವಚ್ಛಂದ ನಿಯಮಗಳಂತಲ್ಲ, ಅಥವಾ ತನ್ನ ಸ್ವಂತ ಇಚ್ಛೆಯಂತೆಯೂ ಅಲ್ಲ ಆದರೆ ಸ್ಪಷ್ಟವಾಗಿ ವಿವರಿಸಿದ ಮತ್ತು ನ್ಯಾಯಬದ್ಧವಾದ ನಿಯಮಗಳಂತೆ ಆಳಬೇಕು ಅವಿವೇಕಿಗಳ ಸ್ವಚ್ಛಂದ ವೃತ್ತಿಗೆ ಒಳಗಾಗದವರಿಗೆ ಆ ನಿಯಮಗಳು ಯುಕ್ತವೂ ಸ್ವಾಭಾವಿಕವೂ ಆಗಿರುವಂತಹುದಾಗಬೇಕು ವಾಲ್ಟೇರ್ ಎಲ್ಲಕಡೆಯೂ ಕಂಡ ಅನ್ಯಾಯಗಳನ್ನು ಖಂಡಿಸಿದನು ಸರ್ಕಾರದ ಆಡಳಿತದಲ್ಲಿನ ಮತ್ತು ನ್ಯಾಯವಿಮರ್ಶೆಯಲ್ಲಿನ ದೋಷಗಳನ್ನು ಖಂಡಿಸಿದನು ಅವನು ಮತ ಸಂಸ್ಥೆಗಳನ್ನೂ ವಿರೋಧಿಸಿದನು ಅವು ಅನುಸರಿಸಿದ ತತ್ತ್ವಗಳಿಗಾಗಿ ಅಲ್ಲ, ಆದರೆ ಅವುಗಳ ಅಧಿಕಾರ, ಐಶ್ವರ್ಯಗಳಿಗಾಗಿ ಅವನು ರಚನಾತ್ಮಕ ಯೋಜನೆಯನ್ನು ನಿರೂಪಿಸದಿದ್ದರೂ ಕ್ರಾಂತಿಕಾರರಲ್ಲಿ ಮುಖ್ಯನು ಇತರರು ಅವನ ಮಾರ್ಗವನ್ನು ಅನುಸರಿಸಿದರು ಮಾಂಟೆಸ್ಕ್ಯೂ ಎಂಬುವನು ಮತ್ತೊಬ್ಬ ಫ್ರಾನ್ಸಿನ ವಿಚಾರಪರ ಅವನು ಅನುಸರಿಸಿದ ರೀತಿಯಲ್ಲಿಯೂ ಅವನ ಸಿದ್ಧಾಂತಗಳಲ್ಲಿಯೂ ಅವನು ಆ ಕಾಲದ ಇತರ ಫ್ರೆಂಚ್ ಲೇಖಕರಿಗಿಂತ ಬೇರೆಯಾಗಿದ್ದಾನೆ ಅವರು ಫ್ರಾನ್ಸಿನಲ್ಲಿ ಒದಗಿದ ಮಹಾಕ್ರಾಂತಿಗೆ ಆಚಾರ್ಯರಾದರ ಅವನು ಮುಂದೆ ರೂಪುಗೊಳ್ಳಬೇಕಾದ ಕಾನೂನು ಬದ್ಧವಾದ ರಾಜ್ಯವ್ಯವಸ್ಥೆಗೆ ಗುರುವಾದ ಇತರರು ಕಠಿಣವಾದ ತತ್ತ್ವಗಳನ್ನು ಎಲ್ಲ ಸಂಸ್ಥೆಗಳಿಗೂ ಅನ್ವಯಿಸಿ ಅವುಗಳ ಯೋಗ್ಯತಾಯೋಗ್ಯತೆಗಳನ್ನು ನಿರ್ಣಯಿಸಿದರು ಅವನು ಸಿದ್ಧಾಂತ ದೃಷ್ಟಿಯಿಂದ ನೋಡದೆ ವ್ಯವಹಾರ ದೃಷ್ಟಿ

ಯಿಂದ ಪರೀಕ್ಷಿಸಿದ. ಆಚರಣೆಗೆ ಯಾವುದು ಉತ್ತಮವೆಂದು ಪರಿಗಣಿಸಿದನು. ಅವನಿಗೂ ಸ್ವಾತಂತ್ರ್ಯದಲ್ಲಿ ಅಭಿಮಾನವಿತ್ತು. ಅವನು ಇಂಗ್ಲೆಂಡಿನ ರಾಜಕೀಯ ವ್ಯವಸ್ಥೆಯನ್ನು ನೋಡಿ ರಾಜ್ಯಕ್ಕೆ ಸಂಬಂಧಿಸಿದ ಮೂರು ಭಾಗಗಳೂ ಬೇರೆಬೇರೆ ಇರುವುದರ ಆವಶ್ಯಕತೆಯನ್ನು ಗ್ರಹಿಸಿದನು. ರಾಜ್ಯದ ಮೊದಲನೆಯ ಕರ್ತವ್ಯವು ಶಾಸನ ಮಾಡುವುದು. ಆದುದರಿಂದ ಶಾಸನಾಂಗವು ಪ್ರಜೆಗಳಿಂದ ಆರಿಸಿದ ಸಭೆಯ ಅಧೀನವಾಗಿರಬೇಕು. ಎರಡನೆಯದು ಶಾಸನಗಳನ್ನು ಕಾರ್ಯರೂಪಕ್ಕೆ ತರುವುದು; ಈ ಅಧಿಕಾರವು ರಾಜ ಅಥವಾ ಪ್ರಜಾಧ್ಯಕ್ಷ ಮತ್ತು ಸಚಿವ ಮಂಡಲಿಗೆ ಸೇರಿರಬೇಕು. ಮೂರನೆಯದು ಶಾಸನವ್ಯಾಖ್ಯಾನ ಅಥವಾ ನ್ಯಾಯ ತೀರ್ಪು; ಈ ಅಧಿಕಾರವು ಶಾಸನಾಂಗ ಅಥವಾ ಕಾರ್ಯಾಂಗದವರ ಅಧೀನಕ್ಕಾಗಲಿ ಪ್ರಲೋಭನೆಗಳಿಗಾಗಲಿ ಸಿಕ್ಕದ ನ್ಯಾಯಾಧೀಶರಲ್ಲಿರಬೇಕು. ಈ ಅಭಿಪ್ರಾಯಗಳು ಇಂಗ್ಲೆಂಡಿನಲ್ಲಿದ್ದ ಪ್ರತ್ಯಕ್ಷ ಸ್ಥಿತಿಗಿಂತಲೂ ಅವನ ಕಲ್ಪನೆಯಿಂದ ಮೂಡಿದ್ದುವು. ಈ ಅಭಿಪ್ರಾಯಗಳು ಅಮೆರಿಕ ಮತ್ತು ಫ್ರಾನ್ಸ್ ದೇಶಗಳಲ್ಲಿನ ಕ್ರಾಂತಿಕಾರರಿಗೆ ಪ್ರೇರಣೆಕೊಟ್ಟುವು.

ಡಿಡಿರೋ ಮುಂತಾದ ಕೆಲವರು ಪ್ರಪಂಚದ ಮೇಲಿನ ಜ್ಞಾನ ಭಂಡಾರವನ್ನು ಒಟ್ಟಿಗೆ ಸಂಗ್ರಹಿಸುವ ಉದ್ದೇಶದಿಂದ "ವಿವಿಧ ಜ್ಞಾನ ಕೋಶ" ಎಂಬ ಲೇಖನ ಮಾಲಿಗಳನ್ನು ಪ್ರಕಟಿಸಿದರು. ಸ್ವತಂತ್ರಾಭಿಪ್ರಾಯದ ಬೆಳವಣಿಗೆಗೆ ಇದರಿಂದ ಪ್ರಬಲವಾದ ಪ್ರೇರಣೆಯೊದಗಿತು. ಇದು ಹಿಂದಿನ ವ್ಯವಸ್ಥೆಗಳಲ್ಲಿನ ಲೋಪದೋಷಗಳನ್ನು ವಿವರವಡಿಸಿತು. ಶ್ರೀಮಂತ ವರ್ಗದವರ ಅನ್ಯಾಯಗಳನ್ನು ಕುರಿತು ಅದೇ ವರ್ಗಕ್ಕೆ ಸೇರಿದವರು ವಿಮರ್ಶಿಸುವಂತಾಯಿತು. ಸಾಮಾನ್ಯ ಪ್ರಜೆಗಳೂ ಅದನ್ನೇ ಅನುಸರಿಸಿದರು. ಹೀಗೆ ಪ್ರಜಾಭಿಪ್ರಾಯವು ನಿರ್ಮಾಣವಾಯಿತು. ಪ್ಯಾರಿಸ್ ಪಟ್ಟಣವು ಸ್ವತಂತ್ರಾಭಿಪ್ರಾಯಕ್ಕೆ ಕೇಂದ್ರವಾಯಿತು. ಅನೇಕ ಶ್ರೀಮಂತರೂ ಅಧಿಕಾರಿ ವರ್ಗದವರೂ ತಮ್ಮ ಅಧಿಕಾರ ಅಂತಸ್ತುಗಳನ್ನೂ ಮರೆತು ಬಹಿರಂಗವಾಗಿಯೇ ಆಡಳಿತದಲ್ಲಿನ ಕುಂದುಗಳನ್ನು ವಿಮರ್ಶಿಸಲೂ ಆಕ್ಷೇಪಿಸಲೂ ತೊಡಗಿ ಹೇಗೆ ಪರಿಸ್ಥಿತಿಯನ್ನು ಉತ್ತಮಗೊಳಿಸಬಹುದೆಂದು ತರ್ಕಿಸುತ್ತಿದ್ದರು.

ರೂಸೋ ಎಂಬ ಲೇಖಕನು ೧೭೬೨ರಲ್ಲಿ "ಸಾಮಾಜಿಕ ಒಪ್ಪಂದ" ಎಂಬ ಅತಿಮಹತ್ವದ ಪುಸ್ತಕವನ್ನು ಬರೆದನು. "ಎಮಿಲೆ" ಎಂಬುದು ಅವನ ಇನ್ನೊಂದು ಗ್ರಂಥ. ಅವನು "ಮನುಷ್ಯನು ಜನ್ಮತಃ ಸ್ವತಂತ್ರನು, ಆದರೆ ಎಲ್ಲೆಲ್ಲಿಯೂ ಬಂಧನದಲ್ಲಿದ್ದಾನೆ" ಎಂದು ಉದ್ಘೋಷಿಸಿದನು. ಬಂಧನವನ್ನು ಪ್ರತಿಭಟಿಸಿ ತನ್ನನ್ನು ತೊಡರಿರುವ ಕಟ್ಟನ್ನು ಕಳಚಿಕೊಂಡು ಕಳೆದುಹೋದ ಸ್ವಾತಂತ್ರ್ಯವನ್ನು ಗಳಿಸಬೇಕಾದುದು ಮಾನವನ ಕರ್ತವ್ಯವೆಂದು ಸಾರಿದನು. ನಾಗರಿಕತೆಯು ಬಂಧನವು. ಅರಣ್ಯದ ಅನಾಗರಿಕನನ್ನು ತೊಡರುವುದಕ್ಕೆ ಮೊದಲು ಅವನು ಸ್ವತಂತ್ರನಾಗಿದ್ದ. ಅಂಥ ಅನಾಗರಿಕತೆಯು ಸುಂದರವಾಗಿದ್ದರೂ ಈಗ ಆ ಸ್ಥಿತಿಗೆ ಹಿಂದಡಿಯಿಡುವುದು ಸಾಧ್ಯವಿಲ್ಲ. ಆದುದರಿಂದ ಬಂಧನವಿಲ್ಲದ ಒಂದು ಹೊಸ ನಾಗರಿಕತೆಯನ್ನು ಸೃಷ್ಟಿಸುವುದೇ ಸದ್ಯದ ಕೆಲಸ. ಇದಕ್ಕಾಗಿ ಪ್ರತಿಜನಾಂಗದ ಒಟ್ಟು ಜನಾಭಿಪ್ರಾಯವನ್ನು ಪ್ರತಿಬಿಂಬಿಸುವ ರಾಜ್ಯವ್ಯವಸ್ಥೆಯನ್ನು ನಿರ್ಮಾಣ ಮಾಡಬೇಕೆಂಬುದೇ ರೂಸೋನಿನ ಮತ. ಅವನು ವೈಯಕ್ತಿಕ ಹಕ್ಕು ಬಾಧ್ಯತೆಗಳನ್ನು ಕುರಿತು ಸಿದ್ಧಾಂತ ಮಾಡಿದನು. ರೂಸೋನಿನ ಅಭಿಪ್ರಾಯಗಳು ಜನರ ಮನಸ್ಸನ್ನು ಕಲಕಿ ಉದ್ವೇಗಗೊಳಿಸಿದುವು. ಅವನ ತರುವಾಯ ಫ್ರೆಂಚರಿಗೆ ಸಮತೆ ಸ್ವಾತಂತ್ರ್ಯಗಳಲ್ಲಿ ಅತಿಮೋಹ ಹುಟ್ಟಿತು.

ಫ್ರಾನ್ಸಿನ ವಿಚಾರಪರ ವ್ಯಕ್ತಿಗಳ ನೂತನ ತತ್ವಗಳಿಂದ ಕದಡಿ ಆ ದೇಶವು ವಿಪ್ಲವದ ಕಡೆಗೆ ಮುನ್ನುಗ್ಗುತ್ತಿರುವಷ್ಟರಲ್ಲಿಯೇ ಅಮೆರಿಕದಲ್ಲಿ ಆ ತತ್ವಗಳು ಕಾರ್ಯರೂಪಕ್ಕೆ ತಿರುಗಿದುವು. ಹದಿನೇಳನೆಯ ಶತಮಾನದಲ್ಲಿ ಬ್ರಿಟನ್ ಜನರು ಅಮೆರಿಕ ಖಂಡಕ್ಕೆ ಹೋಗಿ ನೆಲಸಿದರು. ಅಲ್ಲಿ ಅವರು ಸ್ಥಾಪಿಸಿದ ಹದಿಮೂರು ರಾಷ್ಟ್ರಗಳು ಬ್ರಿಟಿಷ್ ರಾಜ್ಯಕ್ಕೆ ವಿಧೇಯವಾಗಿದ್ದುವು. ಆದರೆ ಕ್ರಮೇಣ ಬ್ರಿಟಿಷರ ಅಧಿಕಾರದಲ್ಲಿ ಸಹನೆ ತಪ್ಪಿತು. ತೀರ ಪ್ರದೇಶದಲ್ಲಿನ ರಾಷ್ಟ್ರಗಳು ಬ್ರಿಟಿಷ್ ವರ್ತಕರು ಹೊಸ ನೌಕಾ ಕಾನೂನುಗಳನ್ನು ವಿಧಿಸುತ್ತಿದ್ದುದನ್ನು ಒಪ್ಪದಲಿಲ್ಲ. ಎಲ್ಲಕ್ಕಿಂತ ಮೇಲಾಗಿ ಬ್ರಿಟಿಷ್ ಶಾಸನ ಸಭೆಯು (ಪಾರ್ಲಿಮೆಂಟು) ಅಮೆರಿಕದ ರಾಷ್ಟ್ರಗಳ ಮೇಲೆ, ಆ ರಾಷ್ಟ್ರಗಳ ಅನುಮತಿಯಿಲ್ಲದೆ, ೧೭೬೪-೬೬

ರಲ್ಲಿ ಎರಡು ತೆರಿಗೆಗಳನ್ನು ವಿಧಿಸಿತು. ತತ್ತ್ವದೃಷ್ಟಿಯಿಂದಲೂ ಸೌಕರ್ಯದೃಷ್ಟಿಯಿಂದಲೂ ರಾಷ್ಟ್ರಗಳು ಆ ತೆರಿಗೆಗಳನ್ನು ವಿರೋಧಿಸಿದುವು. “ಪ್ರಾತಿನಿಧ್ಯವಿಲ್ಲದೆ ತೆರಿಗೆಯಿಲ್ಲ” ಎಂಬ ರಾಜನೀತಿಸೂತ್ರವೇ ಅವರ ವಿರೋಧಕ್ಕೆ ಪ್ರೇರಣೆ ಕೊಟ್ಟಿದ್ದುದು. ಯುದ್ಧವು ಮೊದಲಾಯಿತು. ಆ ಯುದ್ಧಕ್ಕೆ “ಅಮೇರಿಕದ ಸ್ವಾತಂತ್ರ್ಯ ಸಂಗ್ರಾಮ” ಎಂದು ಹೆಸರು. ಸರಟೋಗ ಎಂಬಲ್ಲಿ ೧೭೭೭ ರಲ್ಲಿ ನಡೆದ ಯುದ್ಧದಲ್ಲಿ ಬ್ರಿಟನ್ನಿಗೆ ಸೋಲಾಯಿತು. ಅಲ್ಲಿಂದ ಮುಂದೆ ಅಮೇರಿಕದ ರಾಷ್ಟ್ರಗಳು ಸ್ವತಂತ್ರವಾದುವು. ಅವುಗಳ ಮೇಲೆ ಬ್ರಿಟನ್ನಿನ ಅಧಿಕಾರ ತಪ್ಪಿತು; ತಾಯಿನಾಡಿಗೂ ಅವಕ್ಕೂ ಇದ್ದ ಪೋಷಕ ಪೋಷ್ಯಭಾವವು ಹರಿಯಿತು. ಆ ರಾಷ್ಟ್ರಗಳು ಪ್ರಜಾಧಿಪತ್ಯವನ್ನು ಏರ್ಪಡಿಸಿಕೊಂಡುವು. ಅಮೇರಿಕದ ಚರಿತ್ರೆಯಲ್ಲಿ ಮತ್ತು ಅವರ ಸ್ವಾತಂತ್ರ್ಯ ಸಾಧನೆಯಲ್ಲಿ ಇದು ಒಂದು ಮುಖ್ಯ ಘಟ್ಟ. ಅಮೇರಿಕವು ಈಗ ಒಂದು ಸಂಯುಕ್ತ ರಾಷ್ಟ್ರ. ಸಂಪತ್ತಿನಲ್ಲಿಯೂ ನಾಗರಿಕತೆಯಲ್ಲಿಯೂ ಪ್ರಪಂಚದಲ್ಲೆಲ್ಲ ಬಹು ಪ್ರಧಾನವಾದುದು.

ಫ್ರಾನ್ಸಿನ ವಿಚಾರಪರ ವ್ಯಕ್ತಿಗಳ ನೂತನ ತತ್ತ್ವಗಳಿಂದ ಆ ದೇಶದಲ್ಲಿನ ವಾತಾವರಣ ಮಾತ್ರವಲ್ಲದೆ ಒಟ್ಟು ಯೂರೋಪಿನ ವಾತಾವರಣವೇ ವಿಪ್ಲವದ ಸೂಚನೆಗಳಿಂದ ತುಂಬಿದ್ದುವು. ಲೇಖನಿಯ ಶಕ್ತಿಯು ಖಡ್ಗಶಕ್ತಿಗಿಂತಲೂ ಕಠಿಣತರವಾದುದೆಂಬುದು ಪ್ರಮಾಣಪೂರ್ವಕವಾಗಿ ಸಿದ್ಧಾಂತಕ್ಕೆ ಬಂತು. ಆದರೂ ಹದಿನೆಂಟನೆಯ ಶತಮಾನದ ಘಟನೆಗಳಲ್ಲೆಲ್ಲ ಬಹು ಮಹತ್ತ್ವವಾದ ವಿಪ್ಲವವು ಫ್ರಾನ್ಸಿನಲ್ಲಿ ಮೊದಲು ನಡೆಯಿತು. ರಾಜಕೀಯದಲ್ಲಿ, ಸಮಾಜದಲ್ಲಿ, ಮನುಷ್ಯರ ಭಾವನೆಗಳಲ್ಲಿ, ಉಳಿದ ಎಲ್ಲ ದೇಶಗಳಿಗಿಂತ, ಅಲ್ಲಿ ವಿಪ್ಲವಕ್ಕೆ ಬೇಕಾದ ಎಲ್ಲ ಸಿದ್ಧತೆಗಳೂ ಒದಗಿದ್ದುವು. ಆದುದರಿಂದ ಅಲ್ಲಿ ಪ್ರಪಂಚದ ಇತಿಹಾಸದಲ್ಲೇ ಹೆಸರಾಗಿರುವ “ಮಹಾಕ್ರಾಂತಿ” ನಡೆಯಿತು. ಎಲ್ಲೆಲ್ಲಿಯೂ ಸ್ವಾತಂತ್ರ್ಯ, ಸಮಾನತೆ, ಸೋದರತೆ ಎಂಬ ಮಾತುಗಳು ಉದ್ಘೋಷಿತವಾದುವು. ಆಗಿನ ರಾಜನಾದ ಹದಿನಾರನೆಯ ಲೂಯಿಯ ತಲೆ ವಿಪ್ಲವಕಾರರ ಕತ್ತಿಗೆ ತುತ್ತಾಯಿತು. ರಕ್ತಪ್ರವಾಹವಾಗಿ ಅದುವರೆಗೆ ಏಕರಾಜ್ಯಾಧಿಪತ್ಯವಿದ್ದುದು ತಪ್ಪಿ ಪ್ರಜಾಪ್ರಭುತ್ವದ ಕಡೆಗೆ ತಿರುಗಿತು.

ರೂಸೋ ಮೊದಲಾದ ವಿಚಾರಪರರ ಅಭಿಪ್ರಾಯಗಳು ಜರ್ಮನಿಯ ಪ್ರಸಿದ್ಧ ದಾರ್ಶನಿಕನಾದ ಕ್ಯಾಂಟ್ ಎಂಬವನನ್ನು ಅವನ ಮಧ್ಯಾಹ್ನದ ಗಾಳಿಸಂಚಾರವನ್ನು ಮರೆಯುವಂತೆ ಮಾಡಿ, ಅವನನ್ನು ರಾಜಕೀಯದ ಕಡೆಗೆ ಸೆಳೆಯಿತಂತೆ

ಇಂಗ್ಲಂಡಿನಲ್ಲಿ ಟಾಮ್ ಪಯಿನ್ ಎಂಬಾತನು ಹೊಸ ಅಭಿಪ್ರಾಯಗಳ ಸಂಚಾಲಕನಾದನು ಅಲ್ಲಿ ರಾಜಕೀಯ ಕ್ಷೇತ್ರದಲ್ಲಿ ಹೊಸ ಪದ್ಧತಿಗಳು ಆಚರಣೆಗೆ ಬರಲು ಆರಂಭವಾಗಿದ್ದುದರಿಂದ ವಿಪ್ಲವ ಒದಗಲಿಲ್ಲ ಅಲ್ಲಿ ರಾಜಕೀಯಕ್ಕಿಂತಲೂ ಆರ್ಥಿಕ ವಿಚಾರಗಳಲ್ಲಿಯೇ ವಿಪ್ಲವ ಒದಗಿದುದು ಇದು ಫ್ರಾನ್ಸಿನ ಮಹಾಕ್ರಾಂತಿಯಂತೆ ಅತಿರಭಸದಿಂದ ನಡೆಯದ ಸಾವಕಾಶವಾಗಿ ರೂಪಗೊಂಡಿತು

ಯೂರೋಪು ಅಮೆರಿಕ ಖಂಡಗಳಲ್ಲಿ ನಡೆದ ಈ ಗಮನಾರ್ಹವಾದ ಘಟನೆಗಳಿಗೆಲ್ಲ ಮುಖ್ಯವಾದ ಕಾರಣ, ಮೇಲೆ ಸೂಚಿಸಿದಂತೆ, ವೈಜ್ಞಾನಿಕ ಮನೋಭಾವ, ನಿರ್ದಾಕ್ಷಿಣ್ಯವಾದ ವಿಮರ್ಶನಶೀಲ ಮತ್ತು ವಿಚಾರಪರತೆ ಇವು ಜನಾಂಗದ ಸ್ಫೂರ್ತಿವಂತರಾದ ಕೆಲವೇ ವ್ಯಕ್ತಿಗಳಿಂದ ಪ್ರಾರಂಭವಾದರೂ ಅವರ ಅಭಿಪ್ರಾಯಗಳು ಬಹು ಜನಕ್ಕೆ ಆದರಣೀಯವಾಗಿ ದೇಶದೇಶವನ್ನೇ ಆಂದೋಳನಗೊಳಿಸಿತು ಬ್ರಿಟಿಷರು ನಮ್ಮ ದೇಶಕ್ಕೆ ಬಂದಾಗ ಇಲ್ಲಿದ್ದ ಸ್ಥಿತಿಗತಿಗಳನ್ನು ನೋಡಿ ವಿವರಿಸಿದ ಆ ಸನ್ನಿವೇಶದಲ್ಲಿ ಇಲ್ಲಿಯೂ ಪ್ರಭಾವಯುತವಾದ ವಿಚಾರಪರತೆಯ ಆಂದೋಳನವು ಆವಶ್ಯವಾಗಿತ್ತು ಪಾಶ್ಚಾತ್ಯ ಜನಾಂಗಗಳವರ ದೆಸೆಯಿಂದ ಅಲ್ಲಿನ ವಿದ್ಯಮಾನಗಳು ದೇಶೀಯರಲ್ಲಿ ಪ್ರಚಲಿತವಾಗಲು ಮೊದಲಾಯಿತು ಅದರ ಫಲವಾಗಿ ದೇಶೀಯರಲ್ಲಿ ತಮ್ಮ ಮತಾಚಾರ ಮೊದಲಾದ ಹಿಂದಿನ ಪದ್ಧತಿಗಳಲ್ಲಿ ಗೌರವ ನಂಬಿಕೆಗಳು ಹೋಗಿ ನಾಸ್ತಿಕಭಾವವಂಕುರಿಸುವಂತಾಯಿತು ಆ ನಾಸ್ತಿಕ ಭಾವನೆಯು ಅಜ್ಞಾನ ಜನ್ಯವಾದುದೇ ಹೊರತು ಶಾಸ್ತ್ರಜ್ಞಾನ ಮತ್ತು ಕೂಲಂಕಷ ಪರಿಶೋಧನೆಗಳಿಂದ ಹುಟ್ಟಿದುದಲ್ಲ ಇಂತಹ ನಾಸ್ತಿಕತೆಯು ಜನಾಂಗದ ಸಂಸ್ಕೃತಿಯ ನಾಶಕ್ಕೆ

ಕಾರಣ. ಈ ವೈಪರೀತ್ಯವನ್ನು ತಪ್ಪಿಸಿ ಜನಾಂಗವನ್ನು ಉದ್ಧರಿಸಲು ಸುಸ್ಪಷ್ಟಶಾಸ್ತ್ರಜ್ಞಾನದ ಬೆಳಕಿನಲ್ಲಿ ಆಗಿನ ಹಿಂದೂ ಧರ್ಮದ ಆಚಾರ ವ್ಯವಹಾರಗಳಲ್ಲಿನ ಲೋಪದೋಷಗಳನ್ನು ಗ್ರಹಿಸಿ ವಿಚಾರ ಪೂರ್ಣತೆಯಿಂದ ಪರಿಷ್ಕರಿಸುವುದು ಆವಶ್ಯಕವಾಗಿತ್ತು. ಇದನ್ನು ಕೈಗೊಳ್ಳುವ ವ್ಯಕ್ತಿಯಲ್ಲಿ ಅಸಾಧಾರಣ ಬುದ್ಧಿ ಶಕ್ತಿಯ ಜೊತೆಗೆ ಜನಾಂಗವನ್ನು ಪ್ರೇರಿಸುವ ವ್ಯಕ್ತಿಪ್ರಭಾವವಿರುವುದು ಅಗತ್ಯ. ಹಿಂದಿನ ಮತಾಚಾರ್ಯರಲ್ಲಿಯೂ ಮತಸಂಸ್ಕಾರಕರಲ್ಲಿಯೂ ಇಂತಹ ಗುಣಗಳಿದ್ದುವು. ನವೀನ ಭಾರತದಲ್ಲಿ ವಿಚಾರಪರತೆಯ ಆಂದೋಳನವನ್ನೆಬ್ಬಿಸಿ ಜನರು ತಮ್ಮ ಸ್ಥಿತಿಗೆ ಜಾಗೃತವಾಗುವಂತೆ ಮಾಡಿದ ಮೊದಲ ವ್ಯಕ್ತಿಯೇ ರಾಮಮೋಹನರು. ಹೊಸ ಆರ್ಥಿಕ ಉದ್ಯಮ, ರಾಜಕೀಯ ವ್ಯವಸ್ಥೆ, ವಿಜ್ಞಾನಾಭಿವೃದ್ಧಿ, ಮತಪರಿಷ್ಕರಣ—ಇವುಗಳ ಪರಿಣಾಮವಾಗಿ ಚೇತನಗೊಂಡ ಪಾಶ್ಚಾತ್ಯ ನವಸಂಸ್ಕೃತಿಯು ಕ್ಷೀಣದೆಶೆಯಲ್ಲಿದ್ದ ಭಾರತದ ಪ್ರಾಚೀನ ಸಂಸ್ಕೃತಿಯ ಜೊತೆಯಲ್ಲಿ ಸಂಗಮವಾಯಿತು. ಈ ಸಂಸ್ಕೃತಿಗಳೆರಡೂ ಲಕ್ಷಣದಲ್ಲಿಯೂ ವ್ಯಾಪನೆಯಲ್ಲಿಯೂ ಭಿನ್ನವಾಗಿ ಪರಸ್ಪರ ವಿರೋಧವಾಗಿದ್ದುವು. ಇಂಥ ಎರಡು ಸಂಸ್ಕೃತಿಗಳಿಗೊದಗಿದ ಘರ್ಷಣದಲ್ಲಿ ಯಾವ ಒಂದನ್ನೇ ಆಗಲಿ ಗೌರವಿಸದ ಅಥವಾ ನಿರ್ಲಕ್ಷಿಸದ ದೇಶದ ಸ್ಥಿತಿಗತಿಗಳಿಗೆ ಹೊಂದುವಂತೆ, ಆವಶ್ಯಕವಾದಂತೆ, ಎರಡನ್ನೂ ಸಮನ್ವಯಮಾಡಿ ಹೊಸ ಒಂದು ಸಂಸ್ಕೃತಿಯನ್ನು ಸಿದ್ಧಮಾಡಿಕೊಳ್ಳಬೇಕಾಗಿತ್ತು. ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಘರ್ಷಣೆಯ ಪರ್ವಕಾಲದಲ್ಲಿ ಉದಿಸಿ, ಎರಡರ ಸತ್ವದಿಂದಲೂ ಬೆಳೆದು, ಎರಡು ಸಂಸ್ಕೃತಿಗಳ ಸಮನ್ವಯದಿಂದ ಹೊಸವನ್ನು ರೂಪುಗೊಳಿಸಿದ ವಿಭೂತಿಯೇ ರಾಮಮೋಹನರು. ಅವರನ್ನು ನವೀನ ಭಾರತದ ಯುಗ ಪ್ರವರ್ತಕರೆಂದು ಕರೆಯಬಹುದು. ದೇಶದ ಚರಿತ್ರೆಗೆ ಯಾವ ಒಬ್ಬ ವ್ಯಕ್ತಿಯ ಹೆಸರನ್ನಾದರೂ ಕೊಡಬಹುದಾದರೆ ನವಭಾರತದ ಸಂಸ್ಥಾಪಕರೆಂಬ ಹೆಸರು ರಾಮಮೋಹನರಿಗೆ ಚೆನ್ನಾಗಿ ಒಪ್ಪುತ್ತದೆ. ಅವರು ಭರತಖಂಡದ ಇತಿಹಾಸದ ಸಂಧಿಸಮಯದಲ್ಲಿ ರಾಷ್ಟ್ರೀಯ ಜೀವನದಲ್ಲಿನ ಎಲ್ಲ ಉದ್ಯಮಗಳನ್ನೂ ಹೊಸಹಾದಿಗಳಿಗೆ ತಿರುಗಿಸಲು ಅವತಾರಮಾಡಿದ್ದ ಪ್ರತಿಭಾಸಂಪನ್ನರು.

ಸಾಮಾನ್ಯವಾಗಿ ದೇಶದ ವಾತಾವರಣವು ಮಹಾ ವ್ಯಕ್ತಿಗಳ ಜನನಕ್ಕೆ ಪ್ರೇರಣೆ ಕೊಡುವುದುಂಟು. ದಿಣ್ಣೆಯು ಪ್ರದೇಶವು ಎತ್ತರವಾಗುತ್ತ ಆಗುತ್ತ ಕೊನೆಗೆ ಬೆಟ್ಟವಾಗಿ ಪರಿಣಮಿಸುವಂತೆ ವ್ಯಕ್ತಿಯು ವಾತಾವರಣದ ಸಲ್ಲಕ್ಷಣಗಳನ್ನೆಲ್ಲ ಹೀರಿ ಅದಕ್ಕೆ ಪ್ರಧಾನ ಪ್ರತಿನಿಧಿಯಂತೆ, ಆ ಸಮಾಜಕ್ಕೆ ಕಳಶದಂತೆ, ಆಗುವುದುಂಟು. ಆದರೆ ರಾಮಮೋಹನರ ವಿಷಯದಲ್ಲಿ ಹೀಗಾಗದಿರುವುದೇ ಒಂದು ವಿಶೇಷ. ಅಧೋಗತಿಯಲ್ಲಿದ್ದ ಇಂಡಿಯದ ವಾತಾವರಣವು ಅವರ ಮಹತ್ವಕ್ಕೆ ಹೇಗೆ ಕಾರಣವಾದೀತು! ಅವರು ವಾತಾವರಣದಿಂದ ಮೂಡಿಬಂದು ಅದರ ಸೂಂಕಿಗೆ ಸಿಕ್ಕಲಿಲ್ಲ, ಅಲ್ಲದೆ ತಾವೇ ಒಂದು ನೂತನ ವಾತಾವರಣವನ್ನು ಸೃಷ್ಟಿಸಿಕೊಂಡು ಅದು ಇತರರಿಗೂ ತಾಕುವಂತೆ ಮಾಡಿದರು. ಯುಗಸ್ಥಿತಿಯಿಂದ ಸಂಜನಿಸದೆ ತಾವೇ ನೂತನ ಯುಗ ಕಾರಕರಾದುದು ಅವರ ಮಹತ್ವ. ಪರ್ವತ ಶಿಖರದಲ್ಲಿ ನಿಂತು ಸುತ್ತಲಿನ ಪ್ರದೇಶವನ್ನು ಸಮೀಕ್ಷಿಸುವಂತೆ ರಾಮಮೋಹನರು ಆಗಿನ ಪರಿಸ್ಥಿತಿಗಿಂತ ಎತ್ತರ ಏರಿ ಅದನ್ನು ನಿಷ್ಪಕ್ಷಪಾತದಿಂದಲೂ, ದೂರದರ್ಶಿತೆಯಿಂದಲೂ ನೋಡಿದರು. ಅಲ್ಲದೆ, ರಾಮಮೋಹನರ ಸಂಸ್ಕೃತಿಯನ್ನೂ ಆಗಿನ ಸ್ಥಿತಿಯನ್ನೂ ಹೋಲಿಸಿದರೆ ಅವರ ಆಲೋಚನೆಗಳ ಮತ್ತು ಕಾರ್ಯಗಳ ಓಟವನ್ನು ಮೋಟಾರ್ ಬಂಡಿಯ ವೇಗಕ್ಕೂ, ಅಗಿನ ಕಾಲಗತಿಯನ್ನು ಎತ್ತಿನ ಬಂಡಿಯ ವೇಗಕ್ಕೂ ಸ್ಫುರಿತೂಗಿಸಬಹುದು. ಅವರು ವಿಚಾರಪರತೆಯಲ್ಲಿಯೂ ಆಶಯಗಳಲ್ಲಿಯೂ ಅವರ ಕಾಲಕ್ಕಿಂತ ಬಹುಮುಂದೆ, ಬಹುವೇಗವಾಗಿ ನಡೆದಿದ್ದರು.

ರಾಮಮೋಹನರು ಪ್ರಭಾವ ಬೀರದ ದೇಶಹಿತ ಸಾಧಕವಾದ ಕಾರ್ಯಕ್ಷೇತ್ರ ಒಂದಿಲ್ಲ. ಧಾರ್ಮಿಕ ಮತ್ತು ಸಾಮಾಜಿಕ ಪರಿಷ್ಕರಣವು ಅವರ ಕಾರ್ಯಪಥದಲ್ಲಿ ಪ್ರಮುಖಸ್ಥಾನ ಪಡೆದಿದ್ದರೂ ದೇಶದ ಆಡಳಿತ, ವಿದ್ಯಾಭ್ಯಾಸ, ಸಂಪದಭಿವೃದ್ಧಿ, ನ್ಯಾಯತೀರ್ಪು — ಈ ವಿಚಾರಗಳೂ ಅವರ ಗಮನವನ್ನು ಆಕರ್ಷಿಸದ ಇರಲಿಲ್ಲ. ಈ ಎಲ್ಲ ಉದ್ಯಮಗಳಲ್ಲಿಯೂ ಅವರು ತೋರ್ಪಡಿಸಿದ ಸೂಕ್ಷ್ಮಬುದ್ಧಿ ಮತ್ತು ವಿಚಾರಪರತೆಗಳೂ, ಅವರ ಸ್ವಾತಂತ್ರ್ಯಾವೇಶವೂ, ಅವರ ವ್ಯವಹಾರ ನೀತಿಯೂ ಎಲ್ಲ ಪಕ್ಷಗಳಲ್ಲಿನ ಸೌಹಾರ್ದ ಮತ್ತು ನಿಷ್ಪಕ್ಷಪಾತತೆಯೂ ಅನನ್ಯಸಾಧಾರಣವಾ

ದುವು. ಅವರ ಕಾಲದಲ್ಲಿ ಅವರ ಎಲ್ಲ ಅಮೋಘ ಮಾನಸಿಕ ಗುಣಗಳ ಸಂಪೂರ್ಣ ಉಪಯೋಗಕ್ಕೆ ಅವಕಾಶ ದೊರೆಯಲಿಲ್ಲ. ಅವರು ನಿಸ್ಸಂದೇಹವಾಗಿಯೂ ಭರತಖಂಡದ ರಾಜ್ಯತಂತ್ರ ನಿಪುಣರಲ್ಲಿ ಬಹು ಮುಖ್ಯರಾದವರು. ನ್ಯಾಯವಿಮರ್ಶೆಯಲ್ಲಿಯೂ ರಾಜ್ಯಾಡಳಿತ ವಿಚಾರಗಳಲ್ಲಿಯೂ ಅವರು ಹುಟ್ಟುಹಾಕಿದ ಸಮಸ್ಯೆಗಳು ಇಂದಿಗೂ ಗಮನಾರ್ಹವಾಗಿವೆ.

ರಾಮಮೋಹನರು ಆರಂಭಿಸಿದ, ಹೋರಾಡಿದ, ಸಾಧಿಸಿದ, ಅನೇಕ ಕಾರ್ಯಗಳು ಇಂದಿನ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ಜೀವನಕ್ಕೆ ತಳಹದಿಯಾಗಿವೆ. ಅವು ಇಂದಿನ ಜೀವನದಲ್ಲಿ ಅಂತರ್ಗತವಾಗಿ ಗೋಚರಕ್ಕೆ ಬರದಿರುವುದರಿಂದ ಅವುಗಳ ಉಪಯೋಗವನ್ನು ನಿರ್ಲಕ್ಷಿಸಲಾಗದು. ದಿವ್ಯ ಭವನಕ್ಕೆ ತಳಹದಿಯೆಷ್ಟು ಅವಶ್ಯವೆಂದೂ ಅದು ಎಷ್ಟು ಆಳವಾಗಿಯೂ ಭದ್ರವಾಗಿಯೂ ಇರಬೇಕೆಂದೂ ಹೇಳಬೇಕಾದುದಿಲ್ಲ. ಈವತ್ತು ನಮ್ಮ ದೇಶವು ಪುಷ್ಟವಾಗಿ ಬಲಿಷ್ಠವಾಗಿದ್ದರೆ ಅದು ಹಿಂದೆ ನಾವು ಪಡೆದ ಪೋಷಣೆಯ ಫಲವಲ್ಲವೆ? ನವ ಭಾರತದ ದಿವ್ಯ ಸೌಧಕ್ಕೆ ಭದ್ರವಾದ ತಳಹದಿಯಿಟ್ಟ ರಾಮಮೋಹನರನ್ನು ಮರೆಯಲಾದೀತೆ? ಅವರು ಅನನ್ಯಸಾಧಾರಣ ಬುದ್ಧಿಶಕ್ತಿ, ಕಾರ್ಯಸಾಧನೆಗಳಿಂದ ಮಾತ್ರವಲ್ಲದೆ ಸಭ್ಯ ಶೀಲತೆ ಸದ್ವರ್ತನೆಗಳಿಂದಲೂ ಭಾರತೀಯರಿಗೆಲ್ಲ ಹಿರಿಯರು, ಸಂಮಾನ್ಯರು.

---

*

# ಪ್ರಕರಣ ೨

## ಜನನ—ವಿದ್ಯಾಭ್ಯಾಸ—ದೇಶಸಂಚಾರ

ರಾಮಮೋಹನರಾಯರ ಪೂರ್ವಿಕರು ಉತ್ತಮ ವರ್ಗದ ಸಾಂಪ್ರದಾಯಿಕ ಬ್ರಾಹ್ಮಣ ಪಂಗಡಕ್ಕೆ ಸೇರಿದವರು ಅವರು ಬಂಗಾಳ ಪ್ರಾಂತದ ಮುರ್ಷಿದಾಬಾದ ಜಿಲ್ಲೆಗೆ ಸೇರಿದ ಸಂಕಶವೆಂಬ ಒಂದು ಕುಗ್ರಾಮದಲ್ಲಿ ವಾಸಿಸುತ್ತಿದ್ದರು ರಾಮ ಮೋಹನರಾಯರ ಮುತ್ತಜ್ಜನಾದ ಕೃಷ್ಣಚಂದ್ರ ಬಾನರ್ಜಿಯು ಪ್ರಸಿದ್ಧಿ ಪಡೆದಿದ್ದನು ಈತನ ತಂದೆ ಪೂರ್ವದಿಂದ ಬಂದಿದ್ದ ವೈದಿಕವೃತ್ತಿಯನ್ನು ತ್ಯಜಿಸಿ ಮೊಗಲ್ ರಾಜನಾದ ಅವರಂಗಜೇಬನ ಆಳಿಕೆಯಲ್ಲಿ ಸರ್ಕಾರಿ ಉದ್ಯೋಗವನ್ನು ಕೈಕೊಂಡನಂತೆ ಕೃಷ್ಣಚಂದ್ರನೂ ತನ್ನ ತಂದೆಯನ್ನೇ ಅನುಸರಿಸಿ ಬಂಗಾಳದ ನವಾಬನಲ್ಲಿ ಉದ್ಯೋಗ ವಹಿಸಿದನು ಈತನ ಕಾರ್ಯದಕ್ಷತೆಗೆ ಮೆಚ್ಚಿ ಸರ್ಕಾರದವರು ಈತನಿಗೆ "ರಾಯ" ಎಂಬ ಬಿರುದನ್ನು ದಯಪಾಲಿಸಿದರು ಈ ಬಿರುದು ವಂಶಪಾರಂಪರ್ಯವಾಯಿತು ಈ ಬಿರುದು ಬಂದಮೇಲೆ ಕೃಷ್ಣಚಂದ್ರನಿಗೆ ಹೂಗ್ಲಿ ಮತ್ತು ಬರ್ದವಾನ್ ಜಿಲ್ಲಗಳ ತೆರಿಗೆ ವಸೂಲಿಯ ಕೆಲಸವಾದುದರಿಂದ ಈತನು ತನ್ನ ವಾಸಸ್ಥಾನವನ್ನು ಹೂಗ್ಲಿ ಜಿಲ್ಲೆಯಲ್ಲಿನ ಕನಕೂಲ್-ಕೃಷ್ಣನಗರಿಯ ಸಮೀಪದಲ್ಲಿನ ರಾಧಾನಗರವೆಂಬ ಒಂದು ಹಳ್ಳಿಗೆ ಬದಲಾಯಿಸಿದನು ಆ ಹಳ್ಳಿಯಲ್ಲಿ ಕಾನದಾರಕೇಶ್ವರ ನದಿಯ ದಡದಲ್ಲಿ ಒಂದು ಮನೆಯನ್ನು ಕಟ್ಟಿ ಸಂಸಾರವನ್ನು ಅಲ್ಲಿಗೆ ಕರೆತಂದನು. ರಾಧಾನಗರದಲ್ಲಿ ಈತನು ಸಿಲ್ಕಿಲು ಮತ್ತೂ ಒಂದು ಕಾರಣವಿತ್ತೆಂದು ತೋರುವುದು ವೈಷ್ಣವ ಭಕ್ತನಾದ ಅಭಿರಾಮ ಗೋಸ್ವಾಮಿಯು ಪ್ರತಿಷ್ಠಿಸಿದ್ದ ಗೋಪೀನಾಥ ದೇವಾಲಯವು ರಾಧಾನಗರಕ್ಕೆ ಸಮೀಪವಾಗಿತ್ತು ಕೃಷ್ಣಚಂದ್ರನು ವಿಷ್ಣುಭಕ್ತನಾಗಿದ್ದುದರಿಂದ ರಾಧಾನಗರದಿಂದ ದೇವಾಲಯಕ್ಕೆ ಹೋಗಲು ಅನುಕೂಲಿಸಿತು.

ಕೃಷ್ಣಚಂದ್ರನಿಗೆ ಮೂವರು ಮಕ್ಕಳಿದ್ದರು—ಅಮರಚಂದ್ರ, ಹರಿಪ್ರಸಾದ, ಪ್ರಜವಿನೋದ. ಅವರಲ್ಲಿ ಕೊನೆಯವನಾದ ಪ್ರಜವಿನೋದನು ತಂದೆಯಂತೆಯೇ ಸರ್ಕಾರಿ ಉದ್ಯೋಗವನ್ನು ಸೇರಿ ಸಿರಾಜುದ್ದೌಲನಲ್ಲಿ ನೌಕರನಾಗಿದ್ದನು. ಆತನು ನಿಷ್ಠನಾದ ಬ್ರಾಹ್ಮಣನೂ ಶ್ರೀಮಂತನೂ ಉದಾರಿಯೂ ಆಗಿದ್ದನು. ಸಚ್ಚರಿತನೆಂದು ಹೆಸರು ಪಡೆದಿದ್ದನು. ಆತನಿಗೆ ನೌಕರಿಯಲ್ಲೊದಗಿದ ಅನ್ಯಾಯಕ್ಕಾಗಿ ನೌಕರಿಗೆ ರಾಜನಾಮೆ ಕೊಟ್ಟು ರಾಧಾನಗರದಲ್ಲಿ ವಾಸಿಸುತ್ತಿದ್ದನು. ತಂದೆಯಂತೆಯೇ ವ್ರಜವಿನೋದನೂ ನಿಷ್ಠನಾದ ವಿಷ್ಣುಭಕ್ತನಾಗಿದ್ದನು. ಅಂತ್ಯಕಾಲವು ಸಮಿಾಪಿಸಿದಾಗ ಆತನನ್ನು ಗಂಗಾನದಿಯ ಪಕ್ಕಕ್ಕೆ ತಂದರು--ಮರಣಕಾಲದಲ್ಲಿ ಗಂಗೆಯ ಸಂಪರ್ಕದಿಂದಲೂ ನೋಟದಿಂದಲೂ ಪರಿಶುದ್ಧನಾಗಲೆಂಬ ಉದ್ದೇಶದಿಂದ. ಆ ಸಮಯದಲ್ಲಿ ನೆರೆಯ ಗ್ರಾಮದ ವೈದಿಕ ವರ್ಗಕ್ಕೆ ಸೇರಿದ್ದ ಶ್ಯಾಮಭಟ್ಟಾಚಾರ್ಯನೆಂಬೊಬ್ಬನು ಬಂದು ಒಂದು ಭಿಕ್ಷೆ ಬೇಡಿದನು. ಪ್ರಜವಿನೋದನಿಗೆ ಆತನ ಪ್ರಾರ್ಥನೆಯನ್ನು ನಿರಾಕರಿಸಲು ಮನಸ್ಸಿಪ್ಪಲಿಲ್ಲ, ಅದರಲ್ಲೂ ತಾನು ಇಹಲೋಕಯಾತ್ರೆಯನ್ನು ಮುಗಿಸುವುದರಲ್ಲಿದ್ದುದರಿಂದ. ಆದರೂ ಆತನ ಇಷ್ಟಕ್ಕೆ ಒಪ್ಪುವುದೂ ಸುಲಭವಾಗಿರಲಿಲ್ಲ. ಏಕೆಂದರೆ, ತನ್ನ ಮಗಳನ್ನು ಪ್ರಜವಿನೋದನ ಮಕ್ಕಳಲ್ಲಿ ಒಬ್ಬನಿಗೆ ಮದುವೆ ಮಾಡಿಕೊಳ್ಳಬೇಕೆಂಬುದೇ ಆತನ ಕೋರಿಕೆಯಾಗಿತ್ತು. ಅವರಿಬ್ಬರ ಪಂಗಡಗಳ ಅಂತಸ್ತು ಒಂದೇ ಆಗಿರಲಿಲ್ಲ. ವ್ರಜವಿನೋದನು ವೈಷ್ಣವನೂ ಕುಲೀನನೂ ಆಗಿದ್ದನು ; ಆದರೆ ಭಟ್ಟಾಚಾರ್ಯನು ಶಾಕ್ತೇಯನು, ಅಷ್ಟು ಕುಲೀನನೂ ಆಗಿರಲಿಲ್ಲ. ಆದರೂ ವ್ರಜವಿನೋದನು ಭಟ್ಟಾಚಾರ್ಯನ ಕೋರಿಕೆಯನ್ನು ಸಲ್ಲಿಸಿದನು. ಆತನಿಗಿದ್ದ ಏಳು ಜನ ಗಂಡು ಮಕ್ಕಳಲ್ಲಿ ಐದನೆಯವನಾದ ರಾಮಕಾಂತನು ತಂದೆಯ ಪ್ರೀತಿಗೆ ಪಾತ್ರನಾಗಿದ್ದನು. ತಂದೆಯ ಮರಣಕಾಲದ ವಾಗ್ದಾನವನ್ನು ನೆರವೇರಿಸಲು ರಾಮಕಾಂತನು ಭಟ್ಟಾಚಾರ್ಯನ ಮಗಳನ್ನು ಮದುವೆಯಾದನು. ಆಕೆಯ ಹೆಸರು ತಾರಿಣೀದೇವಿ. ಆಕೆಯನ್ನು ರಾಯರ ಮನೆಯವರು "ಫೂಲ ಠಾಕೂರಾಣಿ" (ಐದನೆಯ ಮಗನ ಹೆಂಡತಿ) ಎಂದು ಕರೆಯುತ್ತಿದ್ದರು. ಆಕೆಯ ಜೊತೆಗೆ ರಾಮಕಾಂತರಾಯನಿಗೆ ಸುಭದ್ರಾದೇವಿ

ಎಂಬ ಹಿರಿಯ ಹೆಂಡತಿಯೂ, ರಾಮಣಿದೇವಿ ಎಂಬ ಕಿರಿಯ ಹೆಂಡತಿಯೂ ಇದ್ದರು ತಾರಿಣೀದೇವಿಯೇ ಮನೆಗೆ ಯಜಮಾನಿಯಾಗಿ ಗೃಹಕೃತ್ಯವನ್ನು ನಡೆಸುತ್ತಿದ್ದಳು

ರಾಮಕಾಂತನು ತಂದೆಯಂತೆಯೇ ಮುರ್ಷಿದಾಬಾದಿನ ನವಾಬ್ ಸಿರಾಜುದ್ದೌಲನಲ್ಲಿ ಕೆಲಸಕ್ಕೆ ಸೇರಿದನು ತಂದೆಯಂತೆ ಆತನಿಗೂ ನೌಕರಿಯಲ್ಲಿ ಜುಗುಪ್ಸೆ ಹುಟ್ಟಿ ಅದರಿಂದ ನಿವೃತ್ತಿ ಹೊಂದಿದನು ಸುಮಾರು ಕ್ರಿ ಶ ೧೭೬೦ರ ವೇಳೆಗೆ ಆತನು ಬರ್ದವಾನ್ ಮಹಾರಾಜರ ಭೂಸ್ಥಿತಿಯ ಆಡಳಿತವನ್ನು ಪಡೆದನು ಆ ಕಾಲದಲ್ಲಿ ರಾಮಕಾಂತನು ತಕ್ಕಮಟ್ಟಿಗೆ ಸ್ವಂತ ಆಸ್ತಿಪಾಸ್ತಿಗಳನ್ನು ಮಾಡಿಕೊಂಡನು ಆದರೆ ಆತನ ಸಂಪದ್ಭಶಿಯು ಬಹುಕಾಲ ಉಳಿಯಲಿಲ್ಲ ಬರ್ದವಾನ್ ಮಹಾರಾಜರು ರಾಮಕಾಂತರಾಯನ ಮೇಲೆ ಯಾವುದೋ ಕಾರಣದಿಂದ ನ್ಯಾಯಸ್ಥಾನದಲ್ಲಿ ವ್ಯವಹಾರ ಹೂಡಿದ್ದರ ಪರಿಣಾಮವಾಗಿ ಆತನ ಆಸ್ತಿ ಎಲ್ಲ ಸಂಪೂರ್ಣವಾಗಿ ನಾಶವಾಯಿತು

ರಾಮಕಾಂತನಿಗೆ ತಾರಿಣೀದೇವಿಯಲ್ಲಿ ಒಬ್ಬ ಹೆಣ್ಣು ಮಗಳೂ ಇಬ್ಬರು ಗಂಡು ಮಕ್ಕಳೂ ಹುಟ್ಟಿದರು ಆ ಇಬ್ಬರು ಗಂಡು ಮಕ್ಕಳಲ್ಲಿ ಹಿರಿಯವನು ಜಗಮೋಹನ, ಕಿರಿಯವನು ರಾಮಮೋಹನ ರಾಮಮೋಹನರು ಕ್ರಿಸ್ತಶಕ ೧೭೭೨ರ ಮೇ ೨೨ರಲ್ಲಿ ರಾಧಾನಗರದಲ್ಲಿ ಜನ್ಮವೆತ್ತಿದರು

ರಾಮಕಾಂತನು ಪ್ರಾಮಾಣಿಕನಾಗಿಯೂ ಮಾನ್ಯನಾಗಿಯೂ ಇದ್ದನು ಆತನು ನಿತ್ಯನಾದ ವಿಷ್ಣುಭಕ್ತ ಮನಸ್ಸಿಗೆ ಅಶಾಂತಿಯುಂಟಾದಾಗ ನಿರ್ಜನ ವನದಲ್ಲಿ ಕುಳಿತು ಹರಿನಾಮ ಜಪ ಮಾಡುತ್ತಿದ್ದನಂತೆ ತಾರಿಣೀದೇವಿಯೂ ನಿತ್ಯಳೂ ಗುಣವಂತೆಯೂ ದೃಢಮನಸ್ಕಳೂ ಆಗಿದ್ದಳು ಶಾಕ್ತೇಯ ವಂಶದಲ್ಲಿ ಹುಟ್ಟಿದವಳಾದರೂ ಪತಿಯನ್ನನುಸರಿಸಿ ವೈಷ್ಣವ ಪಂಥವನ್ನು ಹಿಡಿದಳು ಆಕೆಯು ಉತ್ತಮ ಗೃಹಿಣಿಯೂ ಆದರ್ಶ ಮಾತೆಯೂ ಆಗಿದ್ದಳು. ಕಾಠಿಣ್ಯವನ್ನು ತೋರಿದರೂ ದಯಾಮಯಳಾ

ಪ್ರೇಮಪೂರಿತಳೂ ಆಗಿದ್ದಳು. ಮಾತೃಪ್ರೇಮಕ್ಕೆ ಎಡೆಗೊಟ್ಟು ಕರ್ತವ್ಯ ಲೋಪಕ್ಕೆ ಒಪ್ಪುತ್ತಿರಲಿಲ್ಲ. ಆಕೆಯ ಬುದ್ಧಿ ಸೂಕ್ಷ್ಮತೆಯು ಆ ಕಾಲದ ಸ್ತ್ರೀಯರಲ್ಲಿ ಅಸಾಮಾನ್ಯವಾಗಿತ್ತು. ತಾಯಿಯ ಈ ಸದ್ಗುಣಗಳು ಮಗ ರಾಮಮೋಹನರಲ್ಲಿ ಪ್ರಭಾವವನ್ನು ಬೀರದೆ ಹೋಗಲಿಲ್ಲ; ತಾಯಿಯ ಗುಣಗಳೆಲ್ಲ ಅವರಲ್ಲಿ ನಾಟಿಕೊಂಡವು. ತಾರಿಣೀದೇವಿಗೆ ವಯಸ್ಸಾದ ಮೇಲೆ ಮಗನ ಮನೋಭಾವಗಳೂ ಅವನ ಅಭಿಪ್ರಾಯಗಳೂ ತಿಳಿದು ಅವುಗಳ ವಾಸ್ತವಾಂಶಗಳನ್ನು ಒಪ್ಪಿದಳು; ಆದರೆ ತಾನು ಬಹುಕಾಲದಿಂದ ಸಂಪ್ರದಾಯ ಮಾರ್ಗದಲ್ಲಿಯೇ ಬೆಳೆದವಳಾದುದರಿಂದ ತನ್ನ ಅಭಿಪ್ರಾಯ ಗಳನ್ನು ಬದಲಾಯಿಸಲು ಒಪ್ಪಲಿಲ್ಲ.

ಇಂಥ ಭಗವದ್ಭಕ್ತರೂ ಸದಾಚಾರಸಂಪನ್ನರೂ ಆದವರಲ್ಲಿ ಹುಟ್ಟಿದ ವರು ರಾಮಮೋಹನರು. ರಾಮಕಾಂತನು ಐಶ್ವರ್ಯ ಸ್ಥಿತಿಯಲ್ಲಿದ್ದುದ ರಿಂದ ಮಗನ ವಿದ್ಯಾಭ್ಯಾಸಕ್ಕೆ ಧಾರಾಳವಾಗಿ ಹಣ ವೆಚ್ಚ ಮಾಡಿದನು. ರಾಮಮೋಹನರು ಚಿಕ್ಕಂದಿನಲ್ಲಿಯೇ ತೀಕ್ಷ್ಣಬುದ್ಧಿಯುಳ್ಳವರಾಗಿದ್ದರು. ಅವರ ಮೇಧಾ ಶಕ್ತಿಯೂ ಜ್ಞಾಪಕ ಶಕ್ತಿಯೂ ಅದ್ಭುತವಾಗಿದ್ದುವು. ಈಗಿನಂತಹ ವಿದ್ಯಾಪೀಠಗಳು ಆಗ ಇರಲಿಲ್ಲ. ಆಗಿನ ಹಿಂದೂ ವಿದ್ಯಾಪೀಠ ಗಳಿಗೆ ಪಾಠಶಾಲೆಗಳೆಂದು ಹೆಸರಿತ್ತು. ಹಳ್ಳಿಯ ಪಾಠಶಾಲೆಯೊಂದರಲ್ಲಿ ರಾಮಮೋಹನರು ಬಂಗಾಳಿ ಭಾಷೆಯನ್ನು ಕಲಿಯಲು ಆರಂಭಿಸಿದರು. ಆದರೆ ಆಗ ಬರಿ ಬಂಗಾಳಿ ಅಭ್ಯಾಸದಿಂದಲೇ ಹೆಚ್ಚು ಉಪಯೋಗವಾಗು ತ್ತಿರಲಿಲ್ಲ. ಪಾರ್ಸಿ ಭಾಷೆಯು ರಾಜಭಾಷೆಯಾಗಿದ್ದುದರಿಂದ ಗಣ್ಯತೆ ಯನ್ನು ಬಯಸುತ್ತಿದ್ದವರೆಲ್ಲ ಪಾರ್ಸಿ ಅರಬ್ಬಿ ಭಾಷೆಗಳನ್ನು ಕಲಿಯಬೇಕಾ ಗಿತ್ತು. ರಾಮಕಾಂತನು ಮಗನಿಗೆ ಪಾರ್ಸಿ ಅರಬ್ಬಿಗಳನ್ನು ಮೌಲ್ವಿಗ ಳಿಂದ ಕಲಿಸಿದನು. ಒಂಬತ್ತು ವಯಸ್ಸಾಗುವ ವೇಳೆಗೆ ರಾಮಮೋಹನರು ಬಂಗಾಳಿ, ಪಾರ್ಸಿ, ಅರಬ್ಬಿ ಭಾಷೆಗಳಲ್ಲಿ ತಕ್ಕಮಟ್ಟಿನ ಪಾಂಡಿತ್ಯವನ್ನು ಪಡೆ ದರು. ಪಾಟ್ನಾ ಪಟ್ಟಣವು ಅರಬ್ಬಿ ಭಾಷಾಭ್ಯಾಸಕ್ಕೂ ಇಸ್ಲಾಂ ಸಂಸ್ಕೃ ತಿಗೂ ಕೇಂದ್ರಸ್ಥಾನವಾಗಿತ್ತು. ರಾಮಕಾಂತನು ಮಗನ ವಿದ್ಯಾಭ್ಯಾಸ ವನ್ನು ಮುಂದುವರಿಸಲು ಅವನನ್ನು ಪಾಟ್ನಾ ನಗರಕ್ಕೆ ಕಳುಹಿಸಿದನು. ಸಹಜವಾಗಿದ್ದ ಸೂಕ್ಷ್ಮ ಬುದ್ಧಿಶಕ್ತಿಯಿಂದಲೂ, ಗ್ರಹಣ ಶಕ್ತಿಯಿಂದಲೂ

ರಾಮಮೋಹನರು ಪಾಟ್ನಾದಲ್ಲಿದ್ದ ಸುಮಾರು ಮೂರು ವರ್ಷಗಳಲ್ಲಿ ಅಲ್ಲಿನ ಮೌಲ್ವಿಗಳಿಂದ ಪಾಂಡಿತ್ಯ ಸಂಪಾದಿಸಿದರು. ಪಾರ್ಸಿ ಭಾಷೆಯಲ್ಲಿದ್ದ ರೇಖಾಗಣಿತ ಮತ್ತು ಅರಿಸ್ಟಾಟಲ್ ಎಂಬ ಗ್ರೀಕ್ ತತ್ತ್ವಜ್ಞಾನ ಗ್ರಂಥಗಳನ್ನು ಓದಿದರು. ಹಾಗೆಯೇ ಇಸ್ಲಾಂ ಮತ ಸಂಪ್ರದಾಯವನ್ನೂ ಮತ ತತ್ತ್ವವನ್ನೂ ಮೌಲ್ವಿಗಳಿಂದ ಕಲಿತರು. ಕೊರಾನನ್ನು ಓದಿ ಅದರ ಗೂಢವನ್ನು ಗ್ರಹಿಸಿದರು. ಪಾರ್ಸಿ ಸಾಹಿತ್ಯದಲ್ಲಿ ಪ್ರಸಿದ್ಧರಾಗಿದ್ದ ಹಾಫಿಸ್, ರೂಮಿ, ಸಾದಿ ಮೊದಲಾದ ಕವಿಗಳ ಕಾವ್ಯಗಳನ್ನು ಓದಿ ಅವರ ತತ್ತ್ವಗಳನ್ನು ಗ್ರಹಿಸಿದರು. ಆ ಕವಿಗಳ ಕವನಗಳನ್ನು ಪದೇ ಪದೇ ಉದಾಹರಿಸುತ್ತಿದ್ದರು. ಪಾರ್ಸಿ ಭಾಷೆಯಲ್ಲಿ ಪಡೆದ ಪಾಂಡಿತ್ಯದಿಂದ ಅವರನ್ನು "ಮೌಲ್ವಿ ರಾಮಮೋಹನ" ಎಂದು ಕರೆಯುತ್ತಿದ್ದರು. ಪಾರ್ಸಿ ಕವಿಗಳ ರಹಸ್ಯ ವೇದಾಂತ ಮಾರ್ಗವು ಅವರಲ್ಲಿ ಹೆಚ್ಚು ಪ್ರಭಾವವನ್ನುಂಟು ಮಾಡಿತು. ಸೂಫಿ ಮತ ತತ್ತ್ವವು ಅವರ ಮನಸ್ಸುಟ್ಟಿ ಅವರಿಗೆ ಮೆಚ್ಚಾಯಿತು. ಕೆಲವು ವರ್ಷಗಳ ಮೇಲೆ ಆಧ್ಯಾತ್ಮಿಕ ವಿಚಾರಗಳಲ್ಲಿ ಅವರಿಗೆ ತೋರಿದ ಒಂದು ಹೊಸ ಮಾರ್ಗಕ್ಕೆ ಇದು ತಳಹದಿಯಾಯಿತು. ಹಾಗೆಯೇ ಹಿಂದೂ ಮತದ ವೇದಾಂತ ಸಾರವನ್ನು ತಿಳಿದಾಗ ಸೂಫಿ ತತ್ತ್ವವನ್ನು ಅದರೊಂದಿಗೆ ತುಲನ ಮಾಡುವುದೂ ಸಾಧ್ಯವಾಯಿತು.

ರಾಮಮೋಹನರು ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿ ಸಂಸ್ಕೃತ ವ್ಯಾಸಂಗಕ್ಕಾಗಿ ಕಾಶಿಯನ್ನು ಸೇರಿದರು. ಕಾಶಿಯು ವೈದಿಕ ಧರ್ಮಕ್ಕೂ ಸಂಸ್ಕೃತ ಭಾಷೆಗೂ ಮೊದಲಿನಿಂದಲೂ ಮಾತೃಸ್ಥಾನವಾಗಿತ್ತು. ಕಾಶಿಯಲ್ಲಿ ನಾಲ್ಕು ವರ್ಷಗಳು ಅತಿ ಶ್ರದ್ಧೆಯಿಂದ ವ್ಯಾಸಂಗ ಮಾಡಿ ಸಂಸ್ಕೃತ ಭಾಷೆಯಲ್ಲಿಯೂ ಹಿಂದೂಮತ ತತ್ತ್ವಗಳಲ್ಲಿಯೂ ಪಾರಂಗತರಾದರು. ವೇದ ಉಪನಿಷತ್ತುಗಳ ಸಾರವನ್ನು ಹೀರಿದರು. ಕಾಶಿಯಲ್ಲಿ ಕಳೆದ ಕಾಲವು ಅವರ ಜೀವನದಲ್ಲಿ ಬಹು ಮುಖ್ಯವಾದುದೆಂದು ಹೇಳಬಹುದು. ರಾಮಕಾಂತನ ಬೋಧೆಯಿಂದ ರಾಮಮೋಹನರಿಗೆ ಚಿಕ್ಕಂದಿನಲ್ಲಿ ಹಿಂದೂ ಮತಾಚರಣೆಗಳಲ್ಲಿ ವಿಶೇಷವಾದ ಭಕ್ತಿ ನಂಬಿಕೆಗಳಿದ್ದುವು. ಅವರ ವಿಷ್ಣು ಭಕ್ತಿಯು ಎಷ್ಟು ಆಂತರವಾಗಿತ್ತೆಂದರೆ ಭಾಗವತದಲ್ಲಿ ಒಂದು ಅಧ್ಯಾಯವನ್ನು ಪಾರಾಯಣಮಾಡದೆ ಒಂದು ಬಟ್ಟಲು ನೀರನ್ನು ಸೇವಿಸು

ತ್ತಿರಲಿಲ್ಲ. ತಂದೆಯು ಪೂಜಿಸುತ್ತಿದ್ದ ದೇವರುಗಳಲ್ಲಿ ಅಸಾಧಾರಣ ಭಕ್ತಿಯಿತ್ತು. ಅವರ ಹದಿನಾಲ್ಕನೆಯ ವಯಸ್ಸಿನಲ್ಲಿ ಸಂನ್ಯಾಸಿಯಾಗಬೇಕೆಂದು ಯೋಚಿಸಿದರಂತೆ. ತಾಯಿ ಬೇಡಿಕೊಂಡಮೇಲೆ ಆ ಯೋಚನೆಯನ್ನು ಬಿಟ್ಟರಂತೆ. ಈ ಚಿತ್ತವೃತ್ತಿಯುವರಿಗೆ ಕಾಶಿಯಲ್ಲಿನ ವ್ಯಾಸಂಗದ ಪರಿಣಾಮವಾಗಿ ಅವರ ಮನೋಭಾವವೇ ವ್ಯತ್ಯಾಸವಾಯಿತು. ಆ ಮೊದಲೇ ಇಸ್ಲಾಂ ಧರ್ಮವನ್ನು ತಿಳಿದಿದ್ದವರಿಗೆ ಹಿಂದೂ ಧರ್ಮವೂ ತಿಳಿದಂತಾಯಿತು. ಈ ಎರಡು ಸಂಸ್ಕೃತಿಗಳ ಸಂಯೋಜನೆಯಿಂದ ಅವರ ಮನಸ್ಸಿನಲ್ಲಿ ಹೊಸ ತತ್ತ್ವತರಂಗಗಳು ಆವಿರ್ಭವಿಸಿದುವು. ಪ್ರಚಾರದಲ್ಲಿದ್ದ ಧರ್ಮಾಚರಣೆಗಳಲ್ಲಿ ಲೋಪದೋಷಗಳು ಕಾಣಿಸಿದುವು. ಆಕಾಲದ ಹಿಂದೂ ಧರ್ಮವು ಶಾಸ್ತ್ರವಿಧಿಗೆ ಅನುಸಾರವಾಗಿರದೆ ಅನೇಕ ಕುಂದು ಕೊರತೆಗಳಿಂದ ಕೂಡಿದೆಯೆಂದೂ, ವೇದಾಂತ ಗ್ರಂಥಗಳು ಬೋಧಿಸುವ ಬ್ರಹ್ಮಜ್ಞಾನದ ಸ್ಥಾನದಲ್ಲಿ ಉಪಯೋಗವಿಲ್ಲದ ಶುಷ್ಕ ವಿಗ್ರಹಾರಾಧನೆ, ಅರ್ಥವಿಲ್ಲದ ಆಚಾರ, ಮೂಢನಂಬಿಕೆಗಳು ನೆಲಸಿರುವುವೆಂದೂ ಸಾರಿದರು. ಅಲ್ಲಿಂದ ಮುಂದೆ ಅವರ ಜೀವನವು ಹೊಸದಾರಿಯನ್ನು ಹಿಡಿಯಿತು.

ವೇದ ವೇದಾಂತಗಳ ಸಾರದಿಂದ ಭರಿತರಾಗಿ ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಹಳ್ಳಿಗೆ ಹಿಂತಿರುಗಿದರು. ತಮ್ಮ ಮನಸ್ಸಿನಲ್ಲಿ ಹೊಮ್ಮಿದ್ದ ನೂತನ ಅಭಿಪ್ರಾಯಗಳನ್ನು ಜನರಲ್ಲಿ ವ್ಯಕ್ತಪಡಿಸಿದರು. ಸೂಫಿ ಕವಿಗಳ ಭಕ್ತಿಮತದ ಆಧಾರದ ಮೇಲೆ ಹಿಂದೂ ವೇದಾಂತದಿಂದ ದೃಢವಾಗಿ ಬೆಳೆದ ಭಕ್ತಿ ಮಾರ್ಗದಿಂದ ಅವರ ಮನಸ್ಸು ಸಂಪೂರ್ಣವಾಗಿ ಕಲಕಿತ್ತು. ವಿಗ್ರಹಾರಾಧನೆ ಮೊದಲಾದ ಆಚಾರಗಳಲ್ಲಿ ಗೌರವವು ತಗ್ಗಿತು. ಹೀಗಿರುವಲ್ಲಿ ಸಂಪ್ರದಾಯ ಶರಣನಾದ ತಂದೆಗೂ ನವಚೇತನದಿಂದ ಪೂರಿತನಾದ ಮಗನಿಗೂ ವೈಮನಸ್ಯ ಹುಟ್ಟಲು ಬಹುಕಾಲ ಬೇಕಾಗಲಿಲ್ಲ. ಆದರೆ ರಾಮಮೋಹನರೇ ತಂದೆಯ ಜೊತೆಯಲ್ಲಿ ವಾದಕ್ಕೆ ನಿಲ್ಲುತ್ತಿರಲಿಲ್ಲ. ವಿಗ್ರಹಾರಾಧನೆಯ ವಿಚಾರವಾಗಿಯೂ ಇತರ ಮತವಿಷಯಗಳಲ್ಲಿಯೂ ಶಾಸ್ತ್ರನಿರ್ಧಾರವೇನೆಂಬುದನ್ನು ತಂದೆಯಿಂದ ತಿಳಿಯುತ್ತಿದ್ದರು. ಅದು ಅವರಿಗೆ ತೃಪ್ತಿಕರವಾಗಿ ತೋರುತ್ತಿರಲಿಲ್ಲ. ತಂದೆಯು ತನ್ನ ವಿವರಣೆಯನ್ನೆಲ್ಲ ಮುಗಿಸಿದ ಮೇಲೆ ಮಗನ ಪ್ರತಿಪಕ್ಷವನ್ನು ಸಾವಧಾನವಾಗಿ ಕೇಳುತ್ತಿದ್ದನಂತೆ.

ಮಗನು ತಂದೆಯ ವಿವರಣೆಯಲ್ಲಿ ಸಂಗತವಾದ ಭಾಗವನ್ನು ಒಪ್ಪಿ ಆಮೇಲೆ ತನ್ನ ಪ್ರತಿಪಕ್ಷವನ್ನು "ಕಿಂತು" ಎಂಬುದರಿಂದ ಪ್ರಾರಂಭಿಸುತ್ತಿದ್ದನಂತೆ "ನೀವು ಹೇಳುವುದೆಲ್ಲ ಯುಕ್ತವಾದರೂ ನಿಮ್ಮ ಧರ್ಮ ಸಿದ್ಧಾಂತಗಳು ಸಿದ್ಧಿಸಲಾರವು" ಎನ್ನುತ್ತಿದ್ದರಂತೆ ಈ ವಿತರ್ಕಕ್ಕಾಗಿ ತಂದೆಗೆ ಕೋಪಬರುತ್ತಿತ್ತಂತೆ ಒಂದಾವರ್ತಿಯಂತೂ ರಾಮಕಾಂತನು ಮನನೊಂದು ಮಗನ ಮೇಲೆ ವಿಶೇಷ ರೋಷಗೊಂಡು "ನನ್ನ ಯಾವ ಬಗೆಯ ವಾದಕ್ಕೂ ನಿನಗೆ ಯಾವಾಗಲೂ ನಿನ್ನ "ಕಿಂತು" ವೂ, ನಿನ್ನ ವಿತರ್ಕವೂ, ಪ್ರತಿಪಕ್ಷವೂ, ಪ್ರತಿಸಿದ್ಧಾಂತವೂ ಇದ್ದೇ ಇವೆ" ಎಂದು ಹೇಳಿದನಂತೆ ರಾಮಮೋಹನರು ಲಂಡನ್ನಿಗೆ ಹೋಗಿದ್ದಾಗ ಈ ಸಂದರ್ಭವನ್ನು ನೆನಸಿಕೊಂಡು ಒಬ್ಬ ಸ್ನೇಹಿತರಲ್ಲಿ ಹೇಳಿದ್ದನ್ನು ಅವರು ಬರೆದಿಟ್ಟಿದ್ದಾರೆ

ರಾಮಮೋಹನರು ತಮ್ಮ ಹದಿನಾರನೆಯ ವಯಸ್ಸಿನಲ್ಲಿಯೇ ವಿಗ್ರಹಾರಾಧನೆಯು ಹಿಂದೂ ಶಾಸ್ತ್ರಕ್ಕೆ ವಿರುದ್ಧವೆಂದು ವಿವರಿಸಿ ಪಾರ್ಸಿ ಭಾಷೆಯಲ್ಲಿ ಒಂದು ಗ್ರಂಥವನ್ನು ಬರೆದರು ಅದಕ್ಕೆ ಅರಬ್ಬಿಯಲ್ಲಿ ಮುನ್ನುಡಿಯನ್ನು ಸೇರಿಸಿದ್ದರು ಅದರ ಪರಿಣಾಮವಾಗಿ ತಂದೆಮಕ್ಕಳ ವೈಮನಸ್ಯವು ಮತ್ತಷ್ಟು ಹೆಚ್ಚಿತು ರಾಮಮೋಹನರಿಗೆ ತಂದೆಯ ಮನೆಯು ದುಸ್ಸಹವಾಗಿ ತಂದೆ ತನ್ನನ್ನು ಹೊರದೂಡದಿದ್ದರೂ ತಾವೇ ಗೃಹತ್ಯಾಗ ಮಾಡಿದರು ಆ ಸಮಯದಲ್ಲಿ ಅವರಲ್ಲ ಸಹಕರಿಸುವವರಾಗಲಿ ಅವರನ್ನು ಪೋಷಿಸುವವರಾಗಲಿ ಇರಲಿಲ್ಲ ಎಂತಹ ದುಃಸ್ಥಿತಿಯಲ್ಲಿಯೂ ಎದೆಗುಂದುವುದು ರಾಮಮೋಹನರ ಸ್ವಭಾವವಾಗಿರಲಿಲ್ಲ ಆ ಸಂದರ್ಭವನ್ನು ಕಾಲಹರಣಕ್ಕೆ ಈಡು ಮಾಡದೆ ದೇಶಸಂಚಾರಕ್ಕೆ ಉಪಯೋಗಿಸಿಕೊಂಡರು

ರಾಮಮೋಹನರ ಮನಸ್ಸು ಹೊಸ ವಿಚಾರಗಳನ್ನು ತಿಳಿಯುವುದರಲ್ಲಿ ಆಸಕ್ತವಾಗಿತ್ತು ನಾನಾ ದೇಶಗಳ ಮತಾಚಾರ, ಸಂಪ್ರದಾಯ, ವ್ಯವಹಾರಗಳನ್ನೂ, ನಾನಾ ಭಾಷೆಗಳನ್ನೂ ತಿಳಿಯುವ ಉದ್ದೇಶವಾಗಿ ಹಿಂದೂಸ್ಥಾನದ ಒಳಗೂ ಹೊರಗೂ ಸುಮಾರು ನಾಲ್ಕು ವರ್ಷಕಾಲ

ಸಂಚಾರಮಾಡಿದರು. ಬೌದ್ಧಮತ ತತ್ತ್ವಗಳನ್ನು ಸ್ವಂತ ಅನುಭವ ದಿಂದ ತಿಳಿಯಬೇಕೆಂದು ದೂರದ ಟಿಬೆಟ್ ದೇಶವನ್ನೂ ಹೊಕ್ಕರು. ಇಲ್ಲಿನ ಲಾಮ ಎಂಬ ಜನರಿಂದ ಬೌದ್ಧಮತ ತತ್ತ್ವಗಳನ್ನೂ ಅವರ ಆಚ ರಣೆಗಳನ್ನೂ ಸ್ಪಷ್ಟವಾಗಿ ತಿಳಿದರು. ಟಿಬೆಟ್ ಜನರು "ಲಾಮಾ" ಎಂಬ ಮಾನವನನ್ನು ದೇವರೆಂದು ನಂಬಿ ಪೂಜಿಸುತ್ತಿದ್ದರು. ತಮ್ಮ ಜನರಿಗೆ ವಿಗ್ರಹಾರಾಧನೆಯು ನಿಷೇಧವೆಂದು ಸಾರಿದಂತೆಯೇ ಅಲ್ಲಿಯೂ ಮಾನವ ಪೂಜೆಯು ಉತ್ತಮವಲ್ಲವೆಂದು ಸಾರಿದರು. ಅವರ ಬೋಧೆಯು ಟಿಬೆಟ್ ಜನರಿಗೆ ಪ್ರಿಯವಾಗಲಿಲ್ಲ. ಕೆಲವು ಕ್ರೂರಕರ್ಮಿ ಗಳು ಅವರನ್ನು ತೀರಿಸಿಬಿಡುವ ಯೋಚನೆಯನ್ನು ನಡೆಸುತ್ತಿದ್ದರು. ಆದರೆ ದೈವವಶಾತ್ ಕೆಲವು ದಯಾಳುಗಳಾದ ಸ್ತ್ರೀಯರ ಸಹಾಯದಿಂದ ಜೀವವು ಉಳಿಯಿತು. ಆ ಸ್ತ್ರೀಯರ ಸಹಾಯವು ರಾಮಮೋಹನರ ಮನಸ್ಸಿನಲ್ಲಿ ಸ್ಥಿರವಾಗಿ ನೆಲಸಿತು. ಅವರ ಸಹಾಯವನ್ನು ಕೃತಜ್ಞತೆ ಯಿಂದ ಸ್ಮರಿಸಿಕೊಳ್ಳುತ್ತಿದ್ದರು. ಮುಂದೆ ಅವರಲ್ಲಿ ತೋರಿಬರುವ ಸ್ತ್ರೀ ಮರ್ಯಾದೆ ಮತ್ತು ಸೌಜನ್ಯಕ್ಕೆ ಈ ಸಂಗತಿಯೇ ಕಾರಣವಾಗಿರಬಹುದು. ಟಿಬೆಟ್ಟಿನಿಂದ ಮುಂದೆ ಹಿಮಾಲಯದ ಉತ್ತರ ಪ್ರಾಂತಗಳಲ್ಲಿ ಸಂಚಾರ ಮಾಡಿದರು. ಅಲ್ಲಿ ತಮಗೊದಗಿದ ಅನುಭವಗಳನ್ನು ಮುಂದೆ ತಾವು ಪ್ರಕಟಿಸಿದ "ಸಂವಾದ ಕೌಮುದಿ" ಯಲ್ಲಿ ಬರೆದರು. ಆ ಪತ್ರಿಕೆಯ ಪ್ರತಿಗಳು ಈಗ ದೊರೆಯವು. ಇಪ್ಪತ್ತನೆಯ ವರ್ಷದಲ್ಲಿ ತಮ್ಮ ಸಂಚಾರ ವನ್ನು ಮುಗಿಸಿದರು. ರಾಮಕಾಂತನು ಸ್ವಮತಾಭಿಮಾನದಿಂದ ಮಗ ನನ್ನು ದ್ವೇಷಿಸಿದ್ದರೂ ನಿರ್ದಯನಲ್ಲ; ಮಗನ ಅಗಲಿಕೆಗಾಗಿ ವ್ಯಥೆಪಟ್ಟು ಅವನನ್ನು ಹುಡುಕುವ ನಿಮಿತ್ತವಾಗಿ ಸೇವಕರನ್ನು ಕಳುಹಿಸಿದ್ದನು. ರಾಮಮೋಹನರು ಹಿಂತಿರುಗಿ ಊರಿಗೆ ಬಂದಾಗ ತಾಯಿ ತಂದೆಗಳು ಆದರದಿಂದ ಬರಮಾಡಿಕೊಂಡರು.

———  ———

# ಪ್ರಕರಣ ೩

## ಕಾಶಿಯಲ್ಲಿ ವ್ಯಾಸಂಗ—ಸರ್ಕಾರಿ ಉದ್ಯೋಗ —ಕಾವ್ಯರಚನೆ—ವಿರೋಧಪಕ್ಷ

ರಾಮಮೋಹನರು ಸಂಸ್ಕೃತ ಗ್ರಂಥಗಳನ್ನೂ ಶಾಸ್ತ್ರಗಳನ್ನೂ ಮತ್ತಷ್ಟು ಶ್ರದ್ಧೆಯಿಂದ ವ್ಯಾಸಂಗಮಾಡಲು ಪ್ರಾರಂಭಿಸಿದರು ಮಗನ ಮನೋಭಾವವು ವ್ಯಕ್ತವಾದಷ್ಟೂ ರಾಮಕಾಂತನಿಗೆ ವ್ಯಾಕುಲವು ಹೆಚ್ಚಾಯಿತು ಲೋಕ ರೂಢಿಯಂತೆ ಮಗನು ತಂದೆಗೆ ವಿಧೇಯನಾಗಿರುವುದು ತನಗೆ ಲಭಿಸಲಿಲ್ಲವೆಂದುಕೊಂಡನು ರಾಮಮೋಹನರಾದರೋ ಆರ್ಷೇಯ ಆಚಾರ ವ್ಯವಹಾರಗಳನ್ನೂ ಸಮಾಜ ರೀತಿನೀತಿಗಳನ್ನೂ ಪ್ರತಿಭಟಿಸುತ್ತಿದ್ದರು ಮಗನ ವಿಚಾರಪರತೆಯನ್ನು ಬುದ್ಧಿವೈಪರೀತ್ಯವೆಂದು ಭಾವಿಸಿ ರಾಮಕಾಂತನು ಮಗನನ್ನು ಮಾರ್ಗಕ್ಕೆ ತರಲು ಸಂಸಾರದಲ್ಲಿ ಬಂಧಿಸುವುದೇ ಉಪಾಯವೆಂದು ಯೋಚಿಸಿ ಮಗನಿಗೆ ವೈದಿಕ ಪದ್ಧತಿಯಂತೆ ಮದುವೆ ಮಾಡಿದನು ಆದರೆ ರಾಮಮೋಹನರ ಮನಸ್ಸು ಗೃಹಸ್ಥ ಜೀವನದ ಸುಖಸಂತೋಷಗಳಲ್ಲಿರಲಿಲ್ಲ ಅವರು ಹೊಸ ಹೊಸದಾಗಿ ಶಾಸ್ತ್ರಗಳನ್ನು ಓದುವುದು, ಆ ವಿಚಾರವಾಗಿ ಚರ್ಚೆ ನಡೆಸುವುದು ಇವುಗಳಲ್ಲಿಯೇ ಮಗ್ನನಾಗಿದ್ದರು ಅವರ ನಡತೆಯು ತಂದೆಗೆ ಮಾತ್ರವೇ ವಿರೋಧವಾಗಿರದೆ ಊರಿನ ವೈದಿಕ ಪಂಗಡದವರಿಗೆಲ್ಲ ಅಸಹನೀಯವಾಯಿತು ಇದರ ಪರಿಣಾಮವಾಗಿ ರಾಮಕಾಂತನು ಮಗನನ್ನು ಮನೆಯಿಂದ ದೂಡಿದನು ರಾಮಮೋಹನರು ಕಾಶಿಪಟ್ಟಣವನ್ನು ಸೇರಿ ಅಲ್ಲಿ ಶಾಸ್ತ್ರಾಧ್ಯಯನದಲ್ಲಿ ಸುಮಾರು ಹತ್ತು ವರ್ಷ ಕಳೆದರು ತಮ್ಮ ತಾತ ಶ್ಯಾಮಭಟ್ಟಾಚಾರ್ಯರು ಆ ಕಾಲದಲ್ಲಿ ಕಾಶಿಯಲ್ಲಿದ್ದಂತೆ ತೋರುವುದು ಆದರೆ ರಾಮಮೋಹನರು ಅವರ ಆಶ್ರಯ ಪೋಷಣೆಗಳಲ್ಲಿದ್ದಂತೆ ಕಾಣುವುದಿಲ್ಲ ರಾಮಕಾಂತನು ಸ್ವಲ್ಪ ಹಣವನ್ನು ಕಳುಹಿಸುತ್ತಿದ್ದರೂ ಸ್ವಪ್ರಯತ್ನದಿಂದಲೇ ಹಣ ಸಂಪಾದನೆ ಮಾಡಿ ಜೀವನ ನಡೆಸುತ್ತಿದ್ದರು ಅವರ ಜೀವನದಲ್ಲಿ ಈ ಕಾಲವು ಬಹು ಕಷ್ಟತರವಾಗಿದ್ದರೂ ಅವರು ಸಂಪಾದಿ

ಸಿದ್ಧ ಸಂಸ್ಕೃತ ವಿದ್ಯಾ ಪಾರಂಗತೆ ಒದಗಿದುದು ಈ ಕಾಲದಲ್ಲಿ ನಡೆಸಿದ ವ್ಯಾಸಂಗದಿಂದ.

ರಾಮಕಾಂತ ರಾಯನು ೧೭೯೬ನೆಯ ಡಿಸೆಂಬರ್ ೧ ರಲ್ಲಿ ತನ್ನ ಆಸ್ತಿಯನ್ನು ಜಗಮೋಹನ ಮತ್ತು ರಾಮಮೋಹನರಿಗೂ ಕಿರಿಯ ಹೆಂಡತಿಯ ಮಗನಾದ ರಾಮಲೋಚನನಿಗೂ ಹಂಚಿದನು. ಈ ಹಂಚಿಕೆಯಿಂದ ರಾಮಮೋಹನರ ಭಾಗಕ್ಕೆ ತಕ್ಕಮಟ್ಟಿನ ಸ್ಥಿರ ಆಸ್ತಿಯೂ ಬಂತು. ಅದರ ಪೈಕಿ ಕಲ್ಕತ್ತೆಯಲ್ಲಿನ ಮನೆ ಒಂದು. ಅಲ್ಲಿಂದ ಮುಂದೆ ರಾಮ ಮೋಹನರು ತಂದೆಯ ಆದಾಯ ವೆಚ್ಚಗಳಲ್ಲಿಯಾಗಲಿ ಆತನ ಕಷ್ಟಗಳಲ್ಲಿಯಾಗಲಿ ಭಾಗಿಯಾಗಬೇಕಾದ್ದಿರಲಿಲ್ಲ. ತಂದೆ ಮಕ್ಕಳಿಗೆ ವಿಗ್ರಹಾರಾಧನೆ ಮೊದಲಾದ ಮತವಿಚಾರಗಳಲ್ಲಿ ಒದಗಿ ಬಂದಿದ್ದ ವಿರೋಧವೇ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಆಸ್ತಿ ವಿಭಾಗವಾದ ಕೆಲವು ತಿಂಗಳುಗಳ ಮೇಲೆ ರಾಮಮೋಹನರು ಕಲ್ಕತ್ತೆಯನ್ನು ಸೇರಿದರು. ಅಲ್ಲಿ ಲೇವಾದೇವಿ ನಡೆಸುತ್ತಿದ್ದರು. ಸುಮಾರು ೧೭೯೯ ರಲ್ಲಿ ಬರ್ದವಾನ್ ಜಿಲ್ಲೆಯಲ್ಲಿ ಎರಡು ಗ್ರಾಮಗಳನ್ನು ತಮ್ಮ ಸ್ವಂತ ಆಸ್ತಿಯಿಂದಲೇ ಕೊಂಡು ಕೊಂಡರು. ಆ ಗ್ರಾಮಗಳ ಆಡಳಿತವನ್ನೂ ಲೇವಾದೇವಿಯನ್ನೂ ನಡೆಸಲು ನಂಬಿಕಸ್ಥರಾದ ಗುಮಾಸ್ತರನ್ನು ನಿಯಮಿಸಿ ಪುನಃ ಪಾಟ್ನಾ ಕಾಶಿಗಳಿಗೆ ಹೋದರು. ಅಲ್ಲಿಂದ ೧೮೦೦ ರ ಕೊನೆಗೆ ಹಿಂತಿರುಗಿದರು. ಅದೇ ವರ್ಷವೇ ಅವರ ಹಿರಿಯ ಮಗ ರಾಧಾಪ್ರಸಾಸಾದನು ಹುಟ್ಟಿದನು.

ಕಲ್ಕತ್ತೆಯ ಮುಖ್ಯ ನ್ಯಾಯಸ್ಥಾನ ಮತ್ತು ಫೋರ್ಟ್ ವಿಲಿಯಂ ಕಾಲೇಜುಗಳ ಸಂಬಂಧವೂ ರಾಮಮೋಹನರಿಗೆ ೧೮೦೦-೧೮೦೨ ರ ಕಾಲದಲ್ಲಿ ಇದ್ದಂತೆ ತಿಳಿಯ ಬರುತ್ತದೆ. ಈಸ್ಟ್ ಇಂಡಿಯಾ ಕಂಪೆನಿಯ ಅಧಿಕಾರದಲ್ಲಿದ್ದ ಜಾನ್ ಡಿಗ್ಬಿ ಎಂಬವನ ಪರಿಚಯವು ರಾಮಮೋಹನರಿಗೆ ೧೮೦೧ರಲ್ಲಿ ಒದಗಿತು. ರಾಮಮೋಹನರು ೧೮೦೩ನೆಯ ಮಾರ್ಚಿ ೭ರಲ್ಲಿ ಜಲಾಲ್‌ಪುರ್ (ಈಗಿನ ಫರಿದ್‌ಪೂರ್) ಜಿಲ್ಲೆಯಲ್ಲಿ ದಿವಾನ್ (ರೆವಿನ್ಯು ಅಧಿಕಾರಿ) ಕೆಲಸವನ್ನು ಮೊದಲು ಕೈಗೊಂಡರು. ಥಾಮಸ್ ಉಡ್‌ರಾಫ್ ಎಂಬವನು ಅವರ ಮೇಲಿನ ಅಧಿಕಾರಿಯಾಗಿದ್ದನು. ಈ ಅಧಿಕಾರಿ

೧೮೦೨ರಲ್ಲಿ ಕೆಲವು ತಿಂಗಳುಗಳು ರಜಾ ಪಡೆಯಲಾಗಿ ರಾಮ ಮೋಹನರೂ ತಮ್ಮ ಕೆಲಸಕ್ಕೆ ರಾಜೀನಾಮೆ ಇತ್ತು ಬರ್ದವಾನಿಗೆ ಬಂದರು ಬಂದವರು ತಂದೆಯು ರುಗ್ಣಶಯ್ಯೆಯಲ್ಲಿರುವುದನ್ನು ನೋಡಿದರು ಅವಸಾನ ಸಮಯದಲ್ಲಿ ತಂದೆಯು ತನ್ನ ಮನ ದೇವರನ್ನು ಧ್ಯಾನಿಸಿ "ರಾಮ, ರಾಮ" ಎಂದುಚ್ಚರಿಸುತ್ತಿದ್ದನಂತೆ ಮಗನು ತಂದೆಯ ಈ ನಿಶ್ಚಲ ಭಕ್ತಿ ನಿಷ್ಠೆಗಳನ್ನು ನೋಡಿ ಮೆಚ್ಚದಿರುವುದು ಅಸಾಧ್ಯವಾಯಿತು

ಮುಂದಿನ ವರ್ಷ ಥಾಮಸ್ ಉಡ್‌ರಾಫ್ ಅಧಿಕಾರಿ ಪುನಃ ಉದ್ಯೋಗ ವಹಿಸಲು ರಾಮಮೋಹನರೂ ಮುರ್ಷಿದಾಬಾದಿನ ಕೋರ್ಟಿನಲ್ಲಿ ಕೆಲಸಕ್ಕೆ ಸೇರಿದರು ಮುರ್ಷಿದಾಬಾದಿನಲ್ಲಿದ್ದಾಗ ಎರಡು ಗ್ರಂಥಗಳನ್ನು ಪಾರ್ಸಿಯಲ್ಲಿ ಬರೆದರು ಒಂದು "ತುಫತ್-ಉಲ್-ಮುವಹಿದ್ದೀನ್" (ಅದ್ವೈತವಾದಿಗಳಿಗೊಂದು ಬಹುಮಾನ) ಎಂಬುದು ಇದರಲ್ಲಿ ರೂಢಿಯಲ್ಲಿದ್ದ ವಿಗ್ರಹಾರಾಧನೆಯನ್ನು ಉಗ್ರವಾಗಿ ಖಂಡಿಸಿದರು ಇದರಿಂದ ರಾಮಮೋಹನರ ಮನೋಭಾವವು ವ್ಯಕ್ತವಾಗುವುದು "ಮನಜ್ಞಾರತ್-ಉಲ್-ಅದೀಯನ್" (ವಿವಿಧ ಮತಗಳ ಮೇಲಿನ ಚರ್ಚೆ) ಎಂಬುದು ಮತ್ತೊಂದು ಗ್ರಂಥ ಈ ಎರಡು ಗ್ರಂಥಗಳಲ್ಲಿಯೂ ಇಸ್ಲಾಂ ಸಂಸ್ಕೃತಿಯ ಲಕ್ಷಣಗಳು ಕಂಡುಬರುವುವು ಇಸ್ಲಾಂ ಮತದಲ್ಲಿನ ಸಹಾನುಭೂತಿಯೂ ಆ ಮತ ತತ್ತ್ವದಲ್ಲಿನ ಅದ್ವೈತಭಾವವೂ ಆ ಗ್ರಂಥಗಳಿಂದ ವ್ಯಕ್ತವಾಗುವುವು ಇದರಿಂದ ರಾಮಮೋಹನರಿಗೆ ಇಸ್ಲಾಂ ಮತದಲ್ಲಿ ಹುಚ್ಚಿನ ಅಭಿಮಾನವಿತ್ತೆಂದಾಗಲಿ, ಹಿಂದೂ ಮತದಲ್ಲಿ ಧಿಕ್ಕಾರವಿತ್ತೆಂದಾಗಲಿ ಊಹಿಸಲಾಗದು ಪೈಗಂಬರ್ ಮುಹಮ್ಮದನ ಮೇಲೆ ಕೆಲವು ಆಕ್ಷೇಪಣೆಗಳು ಮೇಲಿನ ಎರಡನೆಯ ಗ್ರಂಥದಲ್ಲಿದ್ದುವು ಇದರಿಂದ ಆ ಗ್ರಂಥವು ಮುಹಮ್ಮದೀಯರ ಆದರಕ್ಕೆ ಪಾತ್ರವಾಗಲಿಲ್ಲ ರಾಮಮೋಹನರಿಗೆ ಪೈಗಂಬರ್ ಮುಹಮ್ಮದನಲ್ಲಿ ಭಕ್ತಿಗೌರವಗಳಿದ್ದುದರಿಂದ ಮುಂದೆ ಅವರ ಜೀವನ ಚರಿತ್ರೆಯನ್ನು ಬರೆಯಲು ತೊಡಗಿದರು. ಆದರೆ ಅದು ಮುಗಿಯಲಿಲ್ಲ

ಈಸ್ಟ್ ಇಂಡಿಯಾ ಕಂಪೆನಿಯ ಅಧಿಕಾರಿಯಾದ, ಆ ಮೊದಲೇ ಪರಿಚಿತನಾಗಿದ್ದ, ಜಾನ್ ಡಿಗ್ಬಿ ಎಂಬವನಲ್ಲಿಗೆ ರಾಮಮೋಹನರು ೧೮೦೫ರಲ್ಲಿ

ಕೆಲಸಕ್ಕೆ ಬಂದರು. ಈತನು ರಾಮಘರ್, ಭಾಗಲ್ಪುರ ಮತ್ತು ರಂಗಪುರ ಮುಂತಾದ ಸ್ಥಳಗಳಲ್ಲಿ ಅಧಿಕಾರಿಯಾಗಿದ್ದನು. ಕಂಪೆನಿಯ ಕಾಗದ ಪತ್ರಗಳಿಂದ ಡಿಗ್ಬಿಯು ೧೮೦೯ ನೆಯ ಆಗಸ್ಟು ೧ ರಲ್ಲಿ ರಂಗಪುರಕ್ಕೆ ಬಂದಂತೆ ತಿಳಿದುಬರುತ್ತದೆ. ರಾಮಮೋಹನರು ರಂಗಪುರದಲ್ಲಿ ಡಿಗ್ಬಿಯ ಕೈಕೆಳಗೆ ಸುಮಾರು ಡಿಸೆಂಬರ್ ೧೮೦೯ ರಲ್ಲಿ ಶಿರಸ್ತೆದಾರ್ ಪದವಿ ಗೇರಿದರು. ಇಷ್ಟು ಅಲ್ಪಕಾಲದಲ್ಲಿ ಅವರು ಮೇಲಿನ ಅಂತಸ್ತಿಗೇರಿದುದು ಅವರ ಕಾರ್ಯಶೀಲತೆಯಿಂದ. ಡಿಗ್ಬಿಯು ತನ್ನ ಮೇಲಿನ ಅಧಿಕಾರಿಗಳಿಗೆ ಬರೆದಿರುವ ಪತ್ರಗಳಿಂದ ಇದು ವ್ಯಕ್ತವಾಗುತ್ತದೆ. ರಾಮಮೋಹನರು ಕೆಲಸಕ್ಕೆ ಸೇರಿದ ಕೆಲವು ತಿಂಗಳುಗಳಲ್ಲಿಯೇ ರಂಗಪುರದ ಶಿರಸ್ತೆ ಕೆಲಸವು ಖಾಲಿಯಾಯಿತು. ಆಗ ಡಿಗ್ಬಿಯು ರಾಮಮೋಹನರೇ ಆ ಕೆಲಸಕ್ಕೆ ಅರ್ಹರೆಂದೂ, ಅವರು ಲೆಕ್ಕಾಚಾರದ ರೀತಿ, ನಿಬಂಧನೆ ಇತ್ಯಾದಿ ವಿವರ ಗಳನ್ನು ಸಂಪೂರ್ಣವಾಗಿ ಬಲ್ಲವರೆಂದೂ, ಜಿಲ್ಲೆಯ ಶಿರಸ್ತೆ ಕೆಲಸಕ್ಕೆ ಅವರಿಗಿಂತಲೂ ಹೆಚ್ಚು ಅನುಭವಸ್ಥರೂ ಅರ್ಹರೂ ಸಿಕ್ಕಲಾರರೆಂದೂ ತಿಳಿಸಿದನು. ಮೇಲಿನ ಅಧಿಕಾರಿಗಳು ಡಿಗ್ಬಿಯ ವರದಿಯನ್ನು ಮನ್ನಿಸದೆ ಶಿರಸ್ತೆ ಕೆಲಸವನ್ನು ಬೇರೆಯವರಿಗೇ ಕೊಡಬೇಕೆಂದು ಅಪ್ಪಣೆಮಾಡಿದರು. ಡಿಗ್ಬಿಯು ಪುನಃ ರಾಮಮೋಹನರ ಪಕ್ಷವನ್ನು ಹಿಡಿದು ಒತ್ತಿ ವಾದಿಸಿದನು. ಆದರೆ ಅದು ಫಲಿಸಲಿಲ್ಲ. ರಾಮಮೋಹನರಿಗೆ ಶಿರಸ್ತೆ ಕೆಲಸ ದೊರೆಯ ದಿದ್ದರೂ ಡಿಗ್ಬಿಯು ರಂಗಪುರದಲ್ಲಿದ್ದುದರಿಂದ ಅವರೂ ಅಲ್ಲಿಯೇ ನಿಂತರು.

ಆ ಕಾಲದಲ್ಲಿ ಸರ್ಕಾರಿ ಅಧಿಕಾರಿಗಳು ತಮ್ಮ ಕೈಕೆಳಗಿನ ದೇಶೀಯ ನೌಕರರನ್ನು ಹೀನವಾಗಿ ಕಾಣುತ್ತಿದ್ದರು. ರಾಮಮೋಹನರು ಅದನ್ನು ಸಹಿಸಲಿಲ್ಲ. ಮೇಲಿನ ಅಧಿಕಾರಿಯಲ್ಲಿಗೆ ಸರ್ಕಾರಿ ಕೆಲಸಕ್ಕಾಗಿ ಹೋದಾಗ ತಾನು ನಿಂತುಕೊಂಡಿರುವಂತೆ ವಿಧಿಸಕೂಡದೆಂದೂ ಸಾಮಾನ್ಯ ಗುಮಾಸ್ತ ರಂತೆ ತಮ್ಮನ್ನು ಕಾಣಕೂಡದೆಂದೂ ಅವರು ಒಪ್ಪಂದ ಮಾಡಿಕೊಂಡಿದ್ದ ರಂತೆ. ಅವರ ಆತ್ಮಗೌರವವು ಸಂಮಾನ್ಯವಾದುದು. ದೇಶೀಯರಿಗೆ ಬ್ರಿಟಿಷರಲ್ಲಿ ಸದ್ಭಾವನೆ ಇದ್ದ ಮತ್ತು ಸ್ವಾತಂತ್ರ್ಯದ ಆಪೇಕ್ಷೆ ಹುಟ್ಟದೆ ಇದ್ದ ಆ ಕಾಲದಲ್ಲಿ ಅವರು ನ್ಯಾಯಾನುಸಂಧಾನದಿಂದ ನಡೆಯದಿದ್ದುದು ಅವರ ಸ್ವಾಭಿಮಾನಕ್ಕೂ ಧೈರ್ಯಕ್ಕೂ ಲಕ್ಷಣವಾಗಿದೆ. ' ದೇಶೀಯರಿಗೆ

ಯೋಗ್ಯ ಸ್ಥಾನಮಾನಗಳನ್ನು ಒದಗಿಸಿಕೊಟ್ಟವರಲ್ಲಿ ರಾಮಮೋಹನರು ಅಗ್ರಗಣ್ಯರು

ರಾಮಮೋಹನರು ಬಂಗಾಳಿ, ಸಂಸ್ಕೃತ, ಅರಬ್ಬಿ, ಪಾರ್ಸಿ ಮತ್ತು ಇತರ ದೇಶಭಾಷೆಗಳಲ್ಲಿ ನಿಪುಣತೆ ಪಡೆದಿದ್ದರೂ ಪರದೇಶೀಯರ ಭಾಷೆಯಾದ ಇಂಗ್ಲಿಷನ್ನು ಕಲಿತಿರಲಿಲ್ಲ ರಾಮಕಾಂತನು ಸರ್ಕಾರಿ ಉದ್ಯೋಗಕ್ಕೆ ಅವಶ್ಯಕವಾದ ವಿದ್ಯೆಯನ್ನು ಮಗನಿಗೆ ಕಲಿಸಿದ್ದರೂ ಇಂಗ್ಲಿಷು ರಾಜಭಾಷೆಯಾಗುವುದೆಂದು ಊಹಿಸಿರಲಿಲ್ಲ ಆದುದರಿಂದ ರಾಮಮೋಹನರು ತಮ್ಮ ಇಪ್ಪತ್ತೆರಡನೆ ವಯಸ್ಸಿನಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಯಲು ಆರಂಭಿಸಿದರು ಈ ವ್ಯಾಸಂಗವು ಕಾರಣಾಂತರಗಳಿಂದ ಚುರುಕಾಗಿ ಸಾಗಲಿಲ್ಲವೆಂದು ಡಿಗ್ಬಿಯು ಹೇಳುತ್ತಾನೆ ಆದರೂ ಬಹು ಜಾಗ್ರತೆಯಲ್ಲಿಯೇ ಇಂಗ್ಲಿಷನ್ನೂ, ಹೀಬ್ರೂ, ಗ್ರೀಕ್, ಲ್ಯಾಟಿನ್ ಭಾಷೆಗಳನ್ನೂ ಕಲಿತರು ಇಪ್ಪತ್ತೆಂಟನೆಯ ವಯಸ್ಸಿನ ವೇಳೆಗೆ ಇಂಗ್ಲಿಷಿನಲ್ಲಿ ಚೆನ್ನಾಗಿ ಬರೆಯಲು ಬಾರದಿದ್ದರೂ ಚೆನ್ನಾಗಿ ಮಾತನಾಡುವುದನ್ನು ಕಲಿತರು ರಾಮಮೋಹನರ ಇಂಗ್ಲಿಷ್ ಅಭ್ಯಾಸದಲ್ಲಿ ಸಾಹಿತ್ಯಾಭಿಮಾನಿಯಾದ ಡಿಗ್ಬಿಯು ಸಹಾಯ ಮಾಡಿದನು ವಾರ ವಾರವೂ ಪಾಶ್ಚಾತ್ಯ ದೇಶಗಳಿಂದ ಡಿಗ್ಬಿಗೆ ಬರುತ್ತಿದ್ದ ವರ್ತಮಾನ ಪತ್ರಿಕೆಗಳನ್ನೆಲ್ಲ ತಪ್ಪದೆ ಓದುತ್ತಿದ್ದನು ಇಂಗ್ಲಿಷ್ ವಿದ್ಯಾಭ್ಯಾಸವು ಅವರ ಮುಂದಿನ ಜೀವನದಲ್ಲಿ ಬಹು ಮುಖ್ಯವಾದ ಪರಿಣಾಮವನ್ನುಂಟುಮಾಡಿತು ಅಲ್ಲದೆ ಇಂಡಿಯದ ಚರಿತ್ರೆಯಲ್ಲೇ ಪರಿಣಾಮ ಕಾರಿಯಾಯಿತು

ರಾಮಮೋಹನರು ಕಂಪೆನಿಯ ಅಧೀನದಲ್ಲಿ ಕೆಲಸಕ್ಕೆ ಸೇರಿದುದು ತಮಗೆ ದೊರೆಯಬಹುದಾದ ದೊಡ್ಡ ಹುದ್ದೆಯ ಗೌರವಕ್ಕಾಗಲಿ ಅಲ್ಲಿನ ಸಂಪಾದನೆಗಾಗಲಿ ಅಲ್ಲ ಹಿಂದೆ ಹೇಳಿದಂತೆ ಅವರು ಉದ್ಯೋಗ ವಹಿಸುವುದಕ್ಕೆ ಮೊದಲೇ ಲೇವಾದೇವಿ ನಡೆಸುತ್ತಿದ್ದರು ಅವರು ಕೊಂಡುಕೊಂಡ ಎರಡು ಗ್ರಾಮಗಳಿಂದ ವರ್ಷಕ್ಕೆ ಸುಮಾರು ೫,೦೦೦ ರೂಪಾಯಿಗಳ ಉತ್ಪತ್ತಿ ಇತ್ತು ಅವರು ಸರ್ಕಾರಿ ಉದ್ಯೋಗವನ್ನು ಕೈಕೊಂಡ ಮೇಲೂ ಕಲ್ಕತ್ತೆಯಲ್ಲಿನ ಲೇವಾದೇವಿ ಕೆಲಸವನ್ನು ನಿಲ್ಲಿಸದೆ ತಕ್ಕ ಸಿಬ್ಬಂದಿಯಿಂದ ಅದನ್ನು ನಡೆಸುತ್ತಿದ್ದರು. ಅಲ್ಲದೆ ೧೮೦೩-೧೦ ರ ಮಧ್ಯದಲ್ಲಿ

ಸುಮಾರು ೨೦ ಸಾವಿರ ರೂಪಾಯಿ ಬೆಲೆಬಾಳುವ ಭೂಸ್ಥಿತಿಗಳನ್ನು ಕೊಂಡುಕೊಂಡರು. ಇವುಗಳಿಂದ ವರ್ಷಕ್ಕೆ ಸುಮಾರು ೫-೬ ಸಾವಿರ ರೂಪಾಯಿಗಳಷ್ಟು ವರಮಾನವಿತ್ತು. ಸರ್ಕಾರಿ ನೌಕರಿಯಲ್ಲಿ ತಮಗೆ ಬರುತ್ತಿದ್ದ ವರಮಾನವು ತಮ್ಮ ಆಸ್ತಿ ಪಾಸ್ತಿಗಳ ವ್ಯವಸ್ಥೆಗೆ ಬೇರೆ ಸಿಬ್ಬಂದಿಯನ್ನು ನಿಯಮಿಸುವುದರಿಂದ ಆಗುತ್ತಿದ್ದ ಖರ್ಚಿಗಿಂತಲೂ ಕಡಿಮೆಯಾಗಿಯೇ ಇತ್ತು. ಹೀಗೆ ಲಾಭಕರವಲ್ಲದ ಸರ್ಕಾರಿ ಉದ್ಯೋಗವನ್ನು ಕೈಕೊಳ್ಳುವುದರಲ್ಲಿ ಅವರಿಗಿದ್ದ ಮುಖ್ಯ ಉದ್ದೇಶವು ಇಂಗ್ಲಿಷ್ ಭಾಷೆಯನ್ನೂ ಇಂಗ್ಲಿಷರ ನಡತೆ ಮರ್ಯಾದೆಗಳನ್ನೂ ಕಲಿಯಬೇಕೆಂಬುದು. ಅವರ ಈ ಉದ್ದೇಶದಲ್ಲಿ ಉಡ್‌ರಾಫ್, ಜಾನ್ ಡಿಗ್ಬಿ ಮೊದಲಾದ ಇಂಗ್ಲಿಷ್ ಸ್ನೇಹಿತರಿಂದ ಅವರಿಗೆ ಹೆಚ್ಚು ಪ್ರಯೋಜನವಾಯಿತು.

ರಾಮಮೋಹನರ ಅಧಿಕಾರಿಯಾಗಿದ್ದ ಜಾನ್ ಡಿಗ್ಬಿಯು ೧೮೧೪ರ ಕೊನೆಗೆ ಸೀಮೆಗೆ ತೆರಳಿದನು. ರಾಮಮೋಹನರೂ ೧೮೧೫ರಲ್ಲಿ ಉದ್ಯೋಗದಿಂದ ನಿವೃತ್ತಿ ಹೊಂದಿದರು. ಈ ಸುಮಾರು ಹತ್ತು ವರ್ಷಗಳಲ್ಲಿ ಅವರಿಬ್ಬರಲ್ಲಿ ಆತ್ಮೀಯವಾಗಿ ಬೆಳೆದಿದ್ದ ಮೈತ್ರಿಯು ಅವರ ಜೀವಾವಧಿ ನೆಲಸಿತು. ರಾಮಮೋಹನರ ಕಾರ್ಯವಿಚಕ್ಷಣೆಯನ್ನೂ ಗುಣಶೀಲಾದಿಗಳನ್ನೂ ಡಿಗ್ಬಿಯು ಮನಃಪೂರ್ವಕವಾಗಿ ಹೀಗೆ ಪ್ರಶಂಸಿಸಿದನು: "ಆತನ ಪಾಂಡಿತ್ಯವು ಅತಿಶಯವಾದುದು; ಪರಿಷ್ಕಾರವಾದ ಸಂಸ್ಕೃತ ವಿದ್ಯೆಯೊಂದಿಗೆ ಪಾರ್ಸಿ ಮತ್ತು ಅರಬ್ಬಿ ಭಾಷೆಗಳನ್ನು ಕಲಿತಿರುವನು. ಸೂಕ್ಷ್ಮಮತಿಯಾದುದರಿಂದ ಪ್ರಚಾರದಲ್ಲಿದ್ದ ಮತಾಚಾರಗಳನ್ನೂ ಮೂಢನಂಬಿಕೆಗಳನ್ನೂ ತುಚ್ಛವಾಗೆಣಿಸಿದನು. ತನ್ನ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಇಂಗ್ಲಿಷ್ ಅಭ್ಯಾಸವನ್ನು ಪ್ರಾರಂಭಿಸಿದನು. ಆತನ ಪರಿಚಯವು ನನಗೆ ಆಗುವ ವೇಳೆಗೆ ಯಾವ ವಿಚಾರವನ್ನಾದರೂ ಕುರಿತು ಇಂಗ್ಲಿಷಿನಲ್ಲಿ ಅರ್ಥವಾಗುವ ರೀತಿಯಲ್ಲಿ ಶುದ್ಧವಾಗಿ ಮಾತನಾಡುತ್ತಿದ್ದನು. ಆದರೆ ತಪ್ಪಿಲ್ಲದೆ ಬರೆಯಲು ಬರುತ್ತಿರಲಿಲ್ಲ. ನನ್ನ ಜೊತೆಯಲ್ಲಿ ಐದು ವರ್ಷಗಳು ಕೆಲಸ ಮಾಡುವುದರಲ್ಲಿ ಸರ್ಕಾರಿ ಕಾಗದ ಪತ್ರಗಳನ್ನು ಓದುವುದರಿಂದಲೂ ವಿದೇಶೀಯ ದೊಡ್ಡ ಮನುಷ್ಯರೊಂದಿಗೆ ಮಾತನಾಡುವುದರಿಂದಲೂ ಇಂಗ್ಲಿಷ್ ಭಾಷೆಯಲ್ಲಿ ಬಹುಶುದ್ಧವಾಗಿ ಬರೆಯುವುದನ್ನೂ ಮಾತನಾಡುವುದನ್ನೂ ಕಲಿತನು. ಆತನು ವಿದೇಶೀಯ ವೃತ್ತಾಂತ ಪತ್ರಿಕೆಗಳನ್ನು ಓದು

ವುದರಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗಿದ್ದನು, ಅದರಲ್ಲಿಯೂ ಅವನಿಗೆ ಇಷ್ಟವಾಗಿದ್ದುದು ಯೂರೋಪಿನ ರಾಜಕೀಯ ವಿಚಾರಗಳು ಆಗಿನ ಫ್ರಾನ್ಸ್ ರಾಜನ ಸಾಹಸೋತ್ಸಾಹಗಳಲ್ಲಿ ಹೆಚ್ಚಿನ ಮೆಚ್ಚಿಕೆಯನ್ನು ಪ್ರಕಾಶ ಪಡಿಸಿದನು.''

ರಾಮಮೋಹನರು ಸರ್ಕಾರಿ ಉದ್ಯೋಗದಲ್ಲಿದ್ದಾಗ ಲಂಚಕ್ಕೆ ಕೈ ಯೊಡ್ಡಿದ್ದರೆಂದು ಕೆಲವರು ಆಕ್ಷೇಪಿಸಿರುವರು ಆದರೆ ಮೇಲಿನ ಡಿಗ್ಬಿಯ ಪ್ರಶಂಸೆಯಿಂದ ಅದು ನಿಜವಾಗಿ ಕಾಣುವುದಿಲ್ಲ ಆ ಕಾಲದಲ್ಲಿ ಇಂಗ್ಲಿಷ್ ಅಧಿಕಾರಿಗಳಿಗೆ ದೇಶೀಯ ನೌಕರರಲ್ಲಿ ಆದರ ಗೌರವಗಳಿರಲಿಲ್ಲ ಅಂತಹುದರಲ್ಲಿ ಘನವಾದ ಪ್ರಶಂಸೆಯನ್ನು ಡಿಗ್ಬಿಯಿಂದ ಪಡೆಯಬೇಕಾಗಿದ್ದಲ್ಲಿ ಸಹಜವಾಗಿಯೂ ರಾಮಮೋಹನರಲ್ಲಿ ಪ್ರಾಮಾಣಿಕತೆಯೂ ಕಾರ್ಯದಕ್ಷತೆಯೂ ನಯವಿನಯಾದಿಗಳೂ ಇದ್ದುವೆಂಬುದಕ್ಕೆ ಸಂದೇಹವಿಲ್ಲ

ರಾಮಮೋಹನರು ರಂಗಪುರದಲ್ಲಿದ್ದಾಗ ಒಂದು ಮನೆಯನ್ನು ಕಟ್ಟಿದರಂತೆ ಅವರು ಅಲ್ಲಿ ಸಾರ್ವಜನಿಕ ಹಿತಕ್ಕಾಗಿ ಹಣ ವೆಚ್ಚಮಾಡಿದಂತೆ ಕಾಣುತ್ತದೆ ಅಲ್ಲಿ ಒಂದು ಕೆರೆಯನ್ನು ಕಟ್ಟಿಸಿದರು ಅವರು ಆ ಸ್ಥಳದಲ್ಲಿದ್ದುದು ಕೆಲವು ವರ್ಷಗಳೇ ಆದರೂ ಅಲ್ಲಿನ ಗಣ್ಯ ಪ್ರಜೆಗಳಲ್ಲಿ ಒಬ್ಬರೆನಿಸಿದರು ಅದೇ ಕಾಲದಲ್ಲಿ ಪಾರ್ಸಿಯಲ್ಲಿ ಬರೆದ ಎರಡು ಗ್ರಂಥಗಳನ್ನು ಅಲ್ಲಿನ ಮಹಮ್ಮದೀಯ ದೊಡ್ಡ ಮನುಷ್ಯನೊಬ್ಬನಿಗೆ ಒಪ್ಪಿಸಿದರಂತೆ ಆ ಗ್ರಂಥಗಳು ಸಿಕ್ಕದೆ ಹೋಗಿವೆ

ರಾಮಮೋಹನರು ರಂಗಪುರದಲ್ಲಿದ್ದಾಗ ಮನೆಯಲ್ಲಿದ್ದ ಕಾಲದಲ್ಲೆಲ್ಲ ತಮ್ಮ ವ್ಯಾಸಂಗವನ್ನು ಅತ್ಯಂತ ಶ್ರದ್ಧೆಯಿಂದ ನಡೆಸಿದರು ಒಂದು ಸಲ ಒಂದು ದಿನವೆಲ್ಲ ನಿದ್ರಾಹಾರಗಳಿಗೂ ಏಳದೆ ವಾಲ್ಮೀಕಿ ರಾಮಾಯಣವನ್ನು ಓದುತ್ತಿದ್ದರಂತೆ ಅದನ್ನು ಪೂರ್ತಿ ಓದಿ ಮುಗಿಸಿ ಎದ್ದರಂತೆ ಈ ಬಗೆಯ ಅಸಾಧಾರಣ ಮನೋಪಾಧ್ಯಾನವು ಅವರಿಗೆ ಚಿಕ್ಕಂದಿನಿಂದಲೂ ಲಭ್ಯವಾಗಿತ್ತು ಪ್ರತಿನಿತ್ಯವೂ ತಮ್ಮ ಮನೆಯಲ್ಲಿಯೇ ಸ್ನೇಹಿತರನ್ನು ಕೂಡಿಸಿ ಮತಸಂಬಂಧವಾದ ಚರ್ಚೆಗಳನ್ನು ನಡೆಸುತ್ತಿದ್ದರು ಅವರಿಗೆ ವಿಗ್ರಹಾರಾಧನೆಯ ನಿರುಪಯೋಗವನ್ನೂ, ಪರಬ್ರಹ್ಮನ ಸ್ವರೂಪವನ್ನು ತಿಳಿಯುವುದರ ಆವಶ್ಯಕತೆಯನ್ನೂ ವಿವರಿಸುತ್ತಿದ್ದರು ಅನೇಕ ಮಾರ್ವಾಡಿ

ವರ್ತಕರು ಆ ಸಭೆಗಳಿಗೆ ಬರುತ್ತಿದ್ದರು. ಇದರಿಂದ ಅವರ ಮತಗ್ರಂಥಗಳಾದ ಜೈನಕಲ್ಪಸೂತ್ರಗಳೇ ಮೊದಲಾದುವನ್ನು ವ್ಯಾಸಂಗ ಮಾಡುವಂತಾಯಿತು. ಅವುಗಳಿಂದಲೂ ಅವರಿಗೆ ಹೆಚ್ಚು ಪ್ರಯೋಜನವಾಯಿತು.

ರಾಮಮೋಹನರ ಕಾರ್ಯರಂಗವು ನಿರುಪಾಧಿಕವಾದುದಾಗಿರಲಿಲ್ಲ. ಪ್ರತಿಪಕ್ಷವು ತಲೆಹಾಕಿತು. ಅದನ್ನು ತಂದವನು ಗೌರೀಕಾಂತ ಭಟ್ಟಾಚಾರ್ಯ ಎಂಬವನು. ಈತನು "ಜ್ಞಾನಾಂಜನ" ಎಂಬ ಪುಸ್ತಕವನ್ನು ಬರೆದನು. ರಾಮಮೋಹನರು ಸತ್ತಮೇಲೆ, ಎಂದರೆ ೧೮೩೮ ರಲ್ಲಿ, ಅದು ಪರಿಷ್ಕೃತವಾಗಿ ಮುದ್ರಿತವಾಯಿತು. ಗೌರೀಕಾಂತ ಭಟ್ಟಾಚಾರ್ಯನ ಪ್ರತಿಪಕ್ಷಕ್ಕೆ ಮತವಿಚಾರಗಳಲ್ಲಿನ ಭಿನ್ನಾಭಿಪ್ರಾಯಗಳಲ್ಲದೆ ಬೇರೆ ಕಾರಣಗಳೂ ಇದ್ದುವು. ರಾಮಮೋಹನರು ಶಿರಸ್ತೆದಾರರಾಗಿದ್ದಂತೆಯೇ ಭಟ್ಟಾಚಾರ್ಯನೂ ಸಿವಿಲ್ ಕೋರ್ಟಿನಲ್ಲಿ ಶಿರಸ್ತೆದಾರನಾಗಿದ್ದನು. ಇದರಿಂದಲೂ ಅವರಿಬ್ಬರಿಗೂ ಮನಸ್ತಾಪವಿತ್ತು. ಆಚಾರವಂತರ ತಂಡವು ದೊಡ್ಡದಾಗಿತ್ತು. ಆದರೆ ಅವರಲ್ಲಿ ರಾಮಮೋಹನರನ್ನು ಪ್ರತಿಪಕ್ಷದಲ್ಲಿ ಗೆಲ್ಲಬಹುದಾದ ಸೂಕ್ಷ್ಮಮತಿಗಳಾರೂ ಇರಲಿಲ್ಲ. ಆ ಕಾಲದಲ್ಲಿ ಪಾರ್ಸಿಯಲ್ಲಿ ಅನೇಕ ಸಣ್ಣಸಣ್ಣ ಲೇಖನಗಳನ್ನು ಬರೆದರು. ವೇದಾಂತದ ಕೆಲವು ಭಾಗಗಳನ್ನೂ ಕೇನೋಪನಿಷತ್ತನ್ನೂ ಪಾರ್ಸಿ ಭಾಷೆಯಲ್ಲಿ ಬರೆದರು.

ಈ ಮಧ್ಯದಲ್ಲಿ ಗೃಹಕೃತ್ಯದಲ್ಲಿ ಕೆಲವು ಕಷ್ಟಗಳೊದಗಿದುವು. ರಾಮಕಾಂತನ ಮರಣಾನಂತರ ಅಣ್ಣ ಜಗನ್ಮೋಹನರೂ ರಾಮಮೋಹನರೂ ಒಟ್ಟಿಗೆ ಸಂಸಾರಕ್ಕೆ ಹಣ ಒದಗಿಸುತ್ತಿದ್ದರು. ಸಂಸಾರವೆಲ್ಲ ಲಂಗೂಪುರದಲ್ಲಿ ತಾರಿಣೀ ದೇವಿಯ ವ್ಯವಸ್ಥೆಯಲ್ಲಿತ್ತು. ಆದರೆ ೧೮೧೧ ರಲ್ಲಿ ಜಗನ್ಮೋಹನರೂ ತೀರಿಹೋದರು. ಇದರಿಂದ ರಾಮಮೋಹನರೇ ಸಂಸಾರದ ಯಜಮಾನಿಕೆ ವಹಿಸಿದರು. ಜಗನ್ಮೋಹನರ ಆಸ್ತಿಪಾಸ್ತಿಗಳಿಗೆ ಅವರು ಕೈಹಾಕಲಿಲ್ಲ. ಅಣ್ಣತಮ್ಮಂದಿರ ಆಸ್ತಿಪಾಸ್ತಿಗಳು ಬೇರೆಬೇರೆಯಾಗಿಯೇ ಇದ್ದುವು. ಆದರೂ ಜಗನ್ಮೋಹನರ ಮಗ ಗೋವಿಂದಪ್ರಸಾದನು ಕೆಲವು ವರ್ಷಗಳಲ್ಲಿಯೇ, ಪ್ರಾಪ್ತವಯಸ್ಕನಾದ

ಮೇಲೆ, ತನ್ನ ತಂದೆಯ ಆಸ್ತಿಗಾಗಿ ರಾಮಮೋಹನರ ಮೇಲೆ ವ್ಯವಹಾರ ಹೂಡಿದಂತೆ ಸರ್ಕಾರಿ ಪತ್ರಗಳಿಂದ ವ್ಯಕ್ತವಾಗುವುದು ಈ ವ್ಯವಹಾರವನ್ನು ಹೂಡಲು ಇತರರು, ಮುಖ್ಯವಾಗಿ ತಾರಿಣೀದೇವಿ, ಗೋವಿಂದ ಪ್ರಸಾದನನ್ನು ಪ್ರೇರಿಸಿದ್ದಂತೆ ಅವನೇ ಹೇಳಿಕೊಂಡಿದ್ದಾನೆ ಮಗನು ಹಿಂದೂ ಮತವನ್ನು ಬಿಟ್ಟು ಹೋಗಿರುವುದರಿಂದ ಅವನಿಗೆ ಯಾವ ಆಸ್ತಿಯೂ ಸಲ್ಲಕೂಡದೆಂಬುದೇ ತಾರಿಣೀ ದೇವಿಯ ಉದ್ದೇಶವಾಗಿತ್ತು ಬಹು ವರ್ಷಗಳು ಈ ವ್ಯವಹಾರ ನಡೆದಮೇಲೆ ರಾಮಮೋಹನರಿಗೇ ಜಯವೊದಗಿತು ಈ ವ್ಯವಹಾರದಿಂದ ಎರಡು ಪಕ್ಷದವರಿಗೂ ನಷ್ಟವಾಯಿತು ಇದರಿಂದ ತಾರಿಣೀ ದೇವಿಯ ಮನಸ್ಸು ಮುರಿಯಿತು ಹಿಡಿಸಲಾರದ ವ್ಯಥೆಬಂತು ಕೊನೆಗೆ ತನ್ನ ಉಳಿದ ಆಯುಷ್ಯವನ್ನು ಪುಣ್ಯಕ್ಷೇತ್ರದಲ್ಲಿ ದೇವಸಾನ್ನಿಧ್ಯದಲ್ಲಿ ಕಳೆಯಬೇಕೆಂದು ಜಗನ್ನಾಥಕ್ಕೆ (ಪುರಿ) ಕಾಲುನಡಿಗೆಯಲ್ಲಿಯೇ ಹೊರಟಳು ಜೊತೆಗೆ ಕೂಡ ಯಾರನ್ನೂ ಕರೆದುಕೊಂಡು ಹೋಗಲಿಲ್ಲ ಮಗನಿಂದ ಅಗಲಿ ಹೋಗುವಾಗ ಮಗನ ಮೇಲೆ ಸಾಧಿಸಿದ ಕ್ರೋಧಕ್ಕಾಗಿ ಬಹುವಾಗಿ ಮರುಗಿದಳಂತೆ ಮಗನ ವಿಗ್ರಹಾರಾಧನೆಯ ವಿರೋಧವನ್ನೂ ಮತಸಿದ್ಧಾಂತಗಳನ್ನೂ ಯುಕ್ತವೆಂದು ಮನಗಂಡು ಮಗನನ್ನು ಕುರಿತು "ನಿನ್ನ ಅಭಿಪ್ರಾಯಗಳು ಸರಿಯೇ, ಆದರೆ ನಾನು ಮುದುಕಿ, ನನ್ನ ಮನಸ್ಸಿಗೆ ಹಿತಕೊಡುವ ಆರ್ಷೇಯ ಸಂಪ್ರದಾಯಗಳನ್ನು ಬಿಡಲಾರ" ಎಂದು ಹೇಳಿದಂತೆ ರಾಮಮೋಹನರೇ ಲಂಡನ್ನಿನಲ್ಲಿ ಸ್ನೇಹಿತರಲ್ಲಿ ಹೇಳಿಕೊಂಡಿದ್ದಾರೆ ಮಕ್ಕಳ ವಿಷಯದಲ್ಲಿ ಸಹಜವಾದ, ನಿರಂತರವಾದ ಮಮತೆ ಕರುಣೆಗಳನ್ನುಳ್ಳ ಆ ಹಳ್ಳಿಯ ತಾಯಿಯಾದವಳು ತಾಯಿ ಧರಿತ್ರಿಯಂತೆ ಎಂದೂ ಕ್ಷಮಾಶೀಲಳು ತಾರಿಣೀ ದೇವಿಯು ಜಗನ್ನಾಥದಲ್ಲಿ ಸುಮಾರು ಒಂದು ವರ್ಷಕಾಲ ದೇವಾಲಯವನ್ನು ಗುಡಿಸುತ್ತಿದ್ದು ಅಲ್ಲಿಯೇ ಮೃತಿಹೊಂದಿದಳು

ಜಗನ್ಮೋಹನರು ಮರಣವಾದಾಗ ಅವರ ಪತ್ನಿ ಅಳಕಮಂಜರಿಯು ಪತಿಯ ಜೊತೆಯಲ್ಲಿ ಚಿತೆಯನ್ನೇರಿದಳು ರಾಮಮೋಹನರಿಗೆ ಆಕೆಯಲ್ಲಿ ಪ್ರೀತಿಗೌರವಗಳಿದ್ದುವು ಆಕೆಯು ಸಹಗಮನ ಮಾಡುವುದನ್ನು ತಪ್ಪಿಸಲು ಬಹು ಪ್ರಯತ್ನ ಮಾಡಿದರು ಆದರೆ ಅದು ಫಲಿಸಲಿಲ್ಲ ಆಕೆಯ ಸಹಗಮನ ಸಮಯದಲ್ಲಿ ರಾಮಮೋಹನರ ಹೃದಯ ವಿದ್ರಾವಕ

ಚಿತ್ರವನ್ನು ನೋಡಿದರು. ಬೆಂಕಿಯ ಅಲೆಗಳು ಆಕೆಯನ್ನು ನಾಲ್ಕು ಕಡೆಗಳಲ್ಲೂ ಆವರಿಸಿದುವು; ತಮಟೆಗಳ ಭೀಕರ ಧ್ವನಿಯು ಆಕೆಯ ಆಕ್ರಂದನವನ್ನು ಕೇಳಿಸದಂತೆ ಮಾಡಿತು. ಬೆಂಕಿಯಿಂದ ಧುಮುಕಿ ಹೋಗಲು ಮಾಡಿದ ಆಕೆಯ ಪ್ರಯತ್ನಗಳು ಸಾಗದಂತೆ ನೀಳವಾದ ಗಳಗಳಿಂದ ಆಕೆಯನ್ನು ಬೆಂಕಿಗೇ ತಳ್ಳುತ್ತಿದ್ದರು. ನಿರ್ವಾಹವಿಲ್ಲದೆ ಅಗ್ನಿದೇವನಿಗೆ ಆಹುತಿಯಾದಳು. ಈ ಘೋರ ಸನ್ನಿವೇಶವು ರಾಮಮೋಹನರ ಮನಸ್ಸಿನಲ್ಲಿ ಸ್ಥಾಯಿಯಾಗಿ ಅವರ ಅಂತರಂಗದ ಮರುಕವನ್ನೆಬ್ಬಿಸಿ ಚಿತ್ತವನ್ನು ತೀವ್ರವಾಗಿ ಕಲಕಿತು. ಸಿದ್ಧಾರ್ಥನು ಸಾವನ್ನು ನೋಡಿದಾಗ ಅವನ ಮನಸ್ಸಿನಲ್ಲಿ ಮೂಡಿದ ಅಭಿಪ್ರಾಯಗಳೇನೆಂಬುವು ಪ್ರಸಿದ್ಧವಾಗಿವೆ. ಆ ಸಂದರ್ಭಗಳು ಹೇಗೆ ಸಿದ್ಧಾರ್ಥನ ಮನೋವೃತ್ತಿಯನ್ನೇ ಬದಲಾಯಿಸಿದುವೋ ಹಾಗೆಯೇ ಮುಂದಿನ ಸುಧಾರಕನ ಮನಸ್ಸನ್ನು ಭೇದಿಸಿದ್ದು ಈ ಸನ್ನಿವೇಶ. ಸಹಗಮನವನ್ನು ಸರ್ವಪ್ರಯತ್ನದಿಂದಲೂ ನಿರ್ಮೂಲ ಮಾಡಬೇಕೆಂದು ಆಗ ಸಂಕಲ್ಪಿಸಿದರಂತೆ ರಾಮಮೋಹನರು.

ಆ ಸಮಯದಲ್ಲಿ ಆದ ರಾಮಮೋಹನರ ಮಗ ರಾಧಾಪ್ರಸಾದನ ಮದುವೆಯು ವಿರೋಧಿಗಳ ಉದ್ವೇಗ ಪ್ರದರ್ಶನಕ್ಕೆ ಸಮಯ ಒದಗಿಸಿತು. ರಾಮಮೋಹನರನ್ನು ಕುಲದಿಂದ ಹೊರಗೆ ಹಾಕಬೇಕೆಂದೂ ಯಾರೂ ರಾಧಾಪ್ರಸಾದನಿಗೆ ಹೆಣ್ಣನ್ನು ಕೊಡಕೂಡದೆಂದೂ ಕಟ್ಟುಮಾಡಿದರು. ಆದರೂ ಹೂಗ್ಲಿ ಜಿಲ್ಲೆಯಲ್ಲಿನ ಸದ್ಗೃಹಸ್ಥನೊಬ್ಬನು ಹೆಣ್ಣನ್ನು ಕೊಟ್ಟನು. ರಾಮನಗರದ ರಾಮಜಯ ಭಟ್ಟಾಚಾರ್ಯನೆಂಬವನು ರಾಮಮೋಹನರಿಗೆ ವಿಚಿತ್ರ ರೀತಿಯಲ್ಲಿ ಕಿರುಕುಳ ಕೊಡತೊಡಗಿದನು. ರಾಮಮೋಹನರು ವಾಸಮಾಡುತ್ತಿದ್ದ ಹಳ್ಳಿಗೆ ಜನರ ಗುಂಪಿನೊಂದಿಗೆ ಬೆಳಗಾಗುವುದಕ್ಕೆ ಮುಂಚೆಯೇ ಬಂದು ವಿಕಾರವಾಗಿ ಕೂಗುತ್ತಿದ್ದನು; ರಾತ್ರಿಯ ವೇಳೆ ಸಗಣಿ, ಮೂಳೆ ಮೊದಲಾದ ಅಸಹ್ಯ ಪದಾರ್ಥಗಳನ್ನು ಮನೆಯೊಳಕ್ಕೆ ಎಸೆಯುತ್ತಿದ್ದನು. ಆ ಅಪಶಬ್ದಗಳನ್ನೂ ಆ ಅಪಸೂಚನೆಗಳನ್ನೂ ಕಂಡು ಮನೆಯವರು ಹೆದರಿದರು. ರಾಮಮೋಹನರು ಸ್ವಲ್ಪವಾದರೂ ಎದೆಗುಂದದೆ ಆಚಾರವ್ಯವಹಾರಗಳನ್ನು ಖಂಡಿಸುವುದರಲ್ಲಿಯೂ ಪಂಡಿತರೊಂದಿಗೆ ಚರ್ಚೆ ನಡೆಸುವುದರಲ್ಲಿಯೂ ನಿರತರಾಗಿದ್ದರು. ತಮ್ಮನ್ನು ದ್ವೇಷಿಸುತ್ತಿದ್ದವರಲ್ಲಿಯೂ ಸ್ನೇಹದಿಂದ ವರ್ತಿಸುತ್ತಿದ್ದರು.

ಕ್ರಮೇಣ ಈ ಹಿಂಸೆ ಕಡಿಮೆಯಾಯಿತು ಹೊರಗಿನವರ ಬಾಧೆ ಕಡಿಮೆ ಯಾದರೂ ಮನೆಯ ಒಳಗೆ ಹಿಂಸೆ ಹೆಚ್ಚಾಯಿತು ನೆರೆಹೊರೆಯವರು ಬಂದು ತಾರಿಣೀ ದೇವಿಯಲ್ಲಿ ಮಗನ ಮೇಲೆ ದೂರುತ್ತಿದ್ದರು ಆಕೆಯು ಮಗನ ನಡೆವಳಿಗಳನ್ನು ಸಹಿಸಲಾರದ ಸೂಸೆ, ಮೊಮ್ಮಕ್ಕಳನ್ನೂ ಮನೆಗೆ ಹೊಸದಾಗಿ ಬಂದಿದ್ದ ರಾಧಾಪ್ರಸಾದನ ಹೆಂಡತಿಯನ್ನೂ ಮನೆ ಯಿಂದ ಅಟ್ಟಿದಳು ಆಗ ರಾಮಮೋಹನರು ತಮ್ಮ ಸಂಸಾರ ಸಮೇತ ರಾಗಿ ರಘುನಾಥಪುರವೆಂಬಲ್ಲಿಗೆ ಹೋಗಿ ಅಲ್ಲಿ ಸ್ಮಶಾನದಲ್ಲಿ ಮನೆಕಟ್ಟಿ ಕೊಂಡರು ಮನೆಯ ಮುಂದ ಪೂಜೆಗಾಗಿ ಒಂದು ಜಗುಲಿಯನ್ನು ಕಟ್ಟಿ ಅದರ ಮೇಲೆ "ಓಂ ತತ್ಸತ್, ಏಕಮೇವಾ ದ್ವಿತೀಯಂ" ಎಂದು ಮುಂತಾಗಿ ಒರೆದರು ಸ್ಮಶಾನದಲ್ಲಿ ಮನೆ ಕಟ್ಟಿದುದಕ್ಕೆ ಯಾರೂ ಆಕ್ಷೇ ಪಿಸುವಂತಿರಲಿಲ್ಲ, ಯಾವ ಮತಸ್ಥರೂ ಕೆರಳುವಂತಿರಲಿಲ್ಲ ಆದುದರಿಂದ ರಾಮಮೋಹನರ ಈ ಕೆಲಸವು ಅರ್ಥವತ್ತಾಗಿತ್ತು ಸ್ಮಶಾನದಲ್ಲಿ ವಾಸಿ ಸುತ್ತಿದ್ದಾಗ ಒಂದಾವರ್ತಿ ಅವರ ಕಿರಿಯ ಹೆಂಡತಿಯು ಯಾವ ಮತವು ಶ್ರೇಷ್ಠವಾದುದೆಂದು ಕೇಳಿದಳಂತೆ ಅದಕ್ಕೆ ರಾಮಮೋಹನರು ಹೀಗೆ ಸ್ವಾರ ಸ್ಯವಾದ ಉತ್ತರವನ್ನಿತ್ತರು "ಗೋವುಗಳು ಅನೇಕ ಬಣ್ಣಗಳಲ್ಲಿರುವುವು, ಆದರೂ ಅವು ಕೊಡತಕ್ಕ ಹಾಲು ಬಿಳಿದಾಗಿಯೇ ಇರುವುದು ಒಬ್ಬೊಬ್ಬ ಮತಬೋಧಕರು ಒಂದೊಂದು ರೀತಿ ಉಪದೇಶಿಸುವರು ಆದರೆ ಧರ್ಮ ಯುತವಾದ ಜೀವನವೇ ಎಲ್ಲ ಮತಗಳ ಬೋಧೆ"

ತಾವು ಮುಂದ ಕೈಗೊಳ್ಳಬೇಕಾಗಿದ್ದ ಕಾರ್ಯದೀಕ್ಷೆಗೆ ರಘುನಾಥ ಪುರದಂತಹ ಕುಗ್ರಾಮವು ಅರ್ಹವಲ್ಲವೆಂದು ರಾಮಮೋಹನರು ೧೮೧೪ ರಲ್ಲಿ ಕಲ್ಕತ್ತೆಯನ್ನು ಸೇರಿದರು ಆ ವೇಳಗ ಅವರಿಗೆ ನಲವತ್ತೆರಡು ವಯಸ್ಸಾಗಿತ್ತು ಅಲ್ಲಿ ಮಾಣಿಕ ತಲದಲ್ಲ ಸರ್ಕ್ಯುಲರ್ ರಸ್ತೆಯಲ್ಲಿ ಒಂದು ಮನೆಯನ್ನು ಕಟ್ಟಿದರು ಅಲ್ಲದ ತಮ್ಮ ಮನೆಗೆ ಬರುವ ಅತಿಥಿ ಗಳಿಗಾಗಿ ಬೇರೊಂದು ಮನೆಯನ್ನು ಕಟ್ಟಿದರು ಆ ಮನೆಗಳನ್ನು, ಅದರಲ್ಲಿಯೂ ಮಾಣಿಕ ತಲದಲ್ಲಿನ ಮನೆಯನ್ನು, ಅನುಕೂಲಕರ ವಾಗಿಯೂ ಅಲಂಕಾರವಾಗಿಯೂ ಸಜ್ಜುಗೊಳಿಸಿದರು ಆದರ ಅಲ್ಲಿನ ಅಚ್ಚುಕಟ್ಟು ವಿಯೂ ಸ್ವಚ್ಛತೆಯನ್ನು ಅನುಭವಿಸಿತ್ತು ಆ ಮನೆಗೆ ಬಂದ ಯುರೋಪ್ಯರೆಲ್ಲರೂ ಅವರ ಅಭಿರುಚಿಯನ್ನು ಶ್ಲಾಘಿಸುತ್ತಿದ್ದರು.

ಆ ಮನೆಗಳನ್ನು ನೋಡಿದಲ್ಲಿ ವಿರಕ್ತಿಯ ಸುಳಿವೇ ಕಾಣುತ್ತಿರಲಿಲ್ಲ; ಸರಳ ಜೀವನದೊಂದಿಗೆ ಉದಾತ್ತಭಾವವು ಬೆರೆತಿದ್ದುದು ವ್ಯಕ್ತವಾಗುತ್ತಿತ್ತು. ಜಾತಿ, ವರ್ಣ, ಅಂತಸ್ತುಗಳ ವ್ಯತ್ಯಾಸವಿಲ್ಲದೆ ಮನೆಗೆ ಬರುವವರನ್ನೆಲ್ಲ ಪ್ರೀತಿಯಿಂದ ಆದರಿಸುತ್ತಿದ್ದರು.

ತಮ್ಮ ಮಾಣಿಕತಲದ ಭವನಕ್ಕೆ ಸೇರಿದಂತೆ ಒಂದು ಉದ್ಯಾನವಿತ್ತು. ಈ ಉದ್ಯಾನವನ್ನು ಕ್ರಮಪಡಿಸಿ ಬೆಳೆಸಿದ ಮಾಲಿಯು ರಾಮದಾಸನೆಂಬವನು. ಇವನಿಗೆ ರಾಮಮೋಹನರಲ್ಲಿ ವಿಶೇಷ ಪ್ರೀತಿ ಇತ್ತು. ರಾಮಮೋಹನರು ಮುಂದೆ ವಿದೇಶಕ್ಕೆ ಪ್ರಯಾಣಮಾಡಿದಾಗ ರಾಮದಾಸನೂ ಅವರ ಜೊತೆಯಲ್ಲಿಯೇ ಹೋದನು. ಆ ಮಾಲಿಯೇ ಮುಂದೆ ಬೋಲ್ಪುರದಲ್ಲಿನ ಶಾಂತಿನಿಕೇತನದ ಉದ್ಯಾನವನ್ನು ರಚಿಸಿದವನು. ರಾಮಮೋಹನರ ಉದ್ಯಾನದಲ್ಲಿ ಅನೇಕ ಬಗೆಯ ಹಣ್ಣಿನ ಗಿಡಗಳಿದ್ದುವಂತೆ. ಈ ಹಣ್ಣಿನ ಆಸೆಗಾಗಿಯೇ ಆಗ ಇನ್ನೂ ಹುಡುಗನಾಗಿದ್ದ ದೇವೇಂದ್ರನಾಥ ಠಾಕೂರನು ಅಲ್ಲಿಗೆ ಬರುತ್ತಿದ್ದನು. ರಾಮಮೋಹನರು ಅವನನ್ನು ಪ್ರೀತಿಯಿಂದ ಮಾತನಾಡಿಸಿ ಹಣ್ಣು ಕೊಡುತ್ತಿದ್ದರು.

ರಾಮಮೋಹನರಲ್ಲಿ, ಎಲ್ಲ ಮಹನೀಯರಲ್ಲಿಯೂ ಇರುವಂತೆ, ವಿನಯ ಸೌಜನ್ಯಗಳಿದ್ದುವು. ತಮ್ಮ ಮನೆಗೆ ಲೆಕ್ಕವಿಲ್ಲದೆ ಬರುತ್ತಿದ್ದ ಜನರೊಂದಿಗೆ ಅವರ ಪ್ರೀತಿಗಳಿಂದ ಮಾತನಾಡುತ್ತಿದ್ದರು. ಮತಾಚಾರ ವಿಚಾರಗಳನ್ನು ಕುರಿತು ಚರ್ಚೆಗೆ ಬರುತ್ತಿದ್ದ ಕೆಲವರ ಮಾತುಕಥೆಗಳು ಅವರಿಗೆ ಸಹಿಸಲು ಅಸಹನೀಯವಾಗಿ ಬೇಸರಿಕೆ ಆಗುತ್ತಿತ್ತಂತೆ. ಅಂಥ ಸಂದರ್ಭಗಳಲ್ಲಿ ಅವರನ್ನು ಕುರಿತು "ನಮ್ಮ ತೋಟದಲ್ಲಿ ಸ್ವಲ್ಪ ಗಾಳಿ ಸಂಚಾರ ಮಾಡೋಣವೇ" ಎಂದು ಕೇಳುತ್ತಿದ್ದರಂತೆ. ಇಬ್ಬರೂ ಉದ್ಯಾನದಲ್ಲಿ ಸಂಚಾರಕ್ಕೆ ಹೊರಟರ ರಾಮಮೋಹನರ ಜೊತೆಯಲ್ಲಿ ನಡೆಯುವುದು ಎಂಥವರಿಗೂ ಅಸಾಧ್ಯವಾಗುತ್ತಿತ್ತು. ಇದರಿಂದ ಬಂದಿದ್ದವರು ಬೇರೆ ದಾರಿಯನ್ನು ಹಿಡಿಯಬೇಕಾಗುತ್ತಿತ್ತು.

---

# ಪ್ರಕರಣ ೪

## ಕಲ್ಕತ್ತೆಯಲ್ಲಿ ವಾಸ—ವಾದವಿವಾದಗಳು—ಆತ್ಮೀಯಸಭೆ—ವಿದ್ಯಾಪ್ರಚಾರ—ಸಹಗಮನ ನಿರೋಧ ಚಳುವಳಿ

ಕಲ್ಕತ್ತೆಯನ್ನು ಸೇರಿದ್ದು ರಾಮಮೋಹನರ ಜೀವನದಲ್ಲಿ ಒಂದು ಘಟ್ಟವೆಂದು ಹೇಳಬಹುದು ಮುಂದಿನ ಕಾರ್ಯಗಳಿಗೆಲ್ಲ ಅದೇ ರಂಗವಾಯಿತು ನವೀನ ಭಾರತಕ್ಕೆ ತಳಹದಿಯನ್ನಿಕ್ಕುವಂತೆ ತಮ್ಮ ಅಭಿಪ್ರಾಯಗಳನ್ನು ಸಾರಿ ರಣಕಹಳೆಯನ್ನು ಮೊಳಗಿಸಿದರು ಕಲ್ಕತ್ತೆಯಲ್ಲಿ ಮಾತ್ರವಲ್ಲದೆ ಬಂಗಾಳ ಪ್ರಾಂತದಲ್ಲಿಯೇ ತಳಮಳವು ಎದ್ದಿತು ಕಹಳೆಯ ನಾದವು ಶ್ರೀಮಂತರ, ಬಡವರ, ಪಂಡಿತರ, ಶಾಸ್ತ್ರಿಗಳ, ಸಾಮಾನ್ಯರ ಮನೆಗಳನ್ನೂ, ಮಠ ದೇವಾಲಯಗಳನ್ನೂ, ಪ್ರವೇಶಿಸಿತು ಮನೆಗಳಲ್ಲಿ ಸ್ತ್ರೀಯರೂ ಅವರ ವಿಚಾರವಾಗಿ ಮಾತನಾಡುವಂತಾಯಿತು ಅವರ ಅದ್ಭುತ ಶಕ್ತಿ ಪ್ರಜ್ಞೆಗಳು ಅನೇಕರ ಮನಸ್ಸನ್ನು ಆಕರ್ಷಿಸಿದುವು ಅನೇಕ ಪ್ರತಿಭಾವಂತರೂ ಪ್ರಮುಖರೂ ರಾಮಮೋಹನರ ಪಕ್ಷವನ್ನು ಸೇರಿದರು ದೇಶೀಯರಂತೆಯೇ ವಿದೇಶೀಯರೂ ಅವರ ಸಹವಾಸವನ್ನೂ ಸ್ನೇಹವನ್ನೂ ಬಯಸುತ್ತಿದ್ದರು ಗಮನಾರ್ಹವಾದ ಸಂಗತಿಯೇನೆಂದರೆ ದೇಶೀಯರಲ್ಲಿ ಸಂಪ್ರದಾಯ ಬದ್ಧರಾಗಿದ್ದವರೂ ವಿದೇಶೀಯರಲ್ಲಿ ಅತಿ ಸ್ವತಂತ್ರವರ್ತಿಗಳೂ ಅವರಲ್ಲಿ ಕಲೆಯುತ್ತಿದ್ದುದು ರಾಮಮೋಹನರು ಹೀಗೆ ದೇಶ, ಜಾತಿ, ಪಂಗಡಗಳ ವ್ಯತ್ಯಾಸವಿಲ್ಲದ ಎಲ್ಲರನ್ನೂ ಆದರಿಸುತ್ತಿದ್ದುದರಿಂದಲೂ, ಹಿಂದೂ ಆಚಾರಕ್ಕೆ ವಿರುದ್ಧವಾಗಿ ವಿಗ್ರಹಾರಾಧನೆಯನ್ನು ಖಂಡಿಸುತ್ತಿದ್ದುದರಿಂದಲೂ, ಕೆಲವರು ಅವರ ಸ್ನೇಹವನ್ನು ತ್ಯಜಿಸಿದರು ರಾಮಮೋಹನರು ಸ್ವಮತಪರತೆಯನ್ನೂ ಸ್ವಪ್ರಮಾಣಿಕತೆಯನ್ನೂ ಮಾರಿಕೊಂಡು ವಿಸ್ಪರ್ಧಾವಂತರಾಗಿದ್ದರೆಂಬ ಆಪಾದನೆಯನ್ನೂ ಕೆಲವರು ಹೊರಿಸಿದರು ರಾಮಮೋಹನರು ಕಾಲವಾದ ಕೆಲವು ವರ್ಷಗಳ ಮೇಲೆ—ಎಂದರೆ ೧೮೪೫ರಲ್ಲಿ—ಕಿಶೋರೀಚಂದ್ರಮಿತ್ರ ಎಂಬಾತನು

"ಕಲ್ಕತ್ತಾ ರಿವ್ಯೂ" ಎಂಬ ಪತ್ರಿಕೆಯಲ್ಲಿ ರಾಮಮೋಹನರ ಗುಣವನ್ನು ಖಂಡಿಸುವ ಒಂದು ಲೇಖನವನ್ನು ಬರೆದನು. ಆದರೆ ಅದನ್ನು ಯಾರೂ ಗಮನಿಸಲಿಲ್ಲ. ರಾಮಮೋಹನರ ವಿಷಯದಲ್ಲಿ ಡಿಗ್ಬಿಯ ಪ್ರಶಂಸೆಯನ್ನು ಜ್ಞಾಪಿಸಿಕೊಂಡರೆ ಈ ಆಕ್ಷೇಪವು ನಿರಾಧಾರವೂ ಅಯುಕ್ತವೂ ಆದುದೆಂದು ವ್ಯಕ್ತವಾಗದಿರದು.

ಪ್ರತಿಪಕ್ಷಿಗಳು ತಮ್ಮಮೇಲೆ ಹೊರಿಸಿದ ಆಪಾದನೆಗಳಿಂದಾಗಲಿ, ಅವರ ಖಂಡನೆಗಳಿಂದಾಗಲಿ, ಸ್ನೇಹಿತರು ತಮ್ಮನ್ನು ತೊರೆದುದರಿಂದಾಗಲಿ ರಾಮಮೋಹನರು ಎದೆಗುಂದಲಿಲ್ಲ. ತಮ್ಮ ಅಭಿಪ್ರಾಯಗಳನ್ನು ಪ್ರಚಾರ ಮಾಡುವುದರಲ್ಲಿಯೂ ಅವನ್ನು ಕಾರ್ಯರೂಪಕ್ಕೆ ತರುವುದರಲ್ಲಿಯೂ ನಿರತರಾಗಿದ್ದರು. ಅವರ ಪ್ರಚಾರಕಾರ್ಯವು ಕ್ರಿಸ್ತಪೂರ್ವ ಐದನೆಯ ಶತಮಾನದಲ್ಲಿ ಅಥೆನ್ಸ್ ನಗರದಲ್ಲಿದ್ದ ಪ್ರಸಿದ್ಧ ಜ್ಞಾನಿಯಾದ ಸಾಕ್ರೆಟೀಸನ ಮಾರ್ಗವನ್ನು ನೆನಪಿಗೆ ತರುವಂತಹದು. ಸಾಕ್ರೆಟೀಸನ ವಾದರೀತಿಯು ಯುಕ್ತಿ ಸ್ವಾರಸ್ಯಗಳಿಂದ ತುಂಬಿದೆ. ಚರ್ಚಾ ವಿಷಯಗಳಲ್ಲಿನ ಸತ್ಯಾಂಶವನ್ನು ತಾನು ಅರಿತಿದ್ದರೂ, ಅರಿಯದವನಂತೆ ನಟಿಸಿ ಪ್ರತಿಪಕ್ಷದವರನ್ನು ಆ ವಿಚಾರದಲ್ಲಿ ಪ್ರಶ್ನಿಸುವುದು, ಅವರು ಕೊಡುವ ಉತ್ತರಗಳಲ್ಲಿನ ಲೋಪದೋಷಗಳನ್ನು ಗ್ರಹಿಸಿ ಅವುಗಳ ಮೇಲೆ ಪುನಃ ಪ್ರಶ್ನೆ ಹಾಕುವುದು, ಮೊದಲಿನ ಅವರ ಉತ್ತರಕ್ಕೂ ಆ ಮೇಲಿನ ಉತ್ತರಕ್ಕೂ ಇರಬಹುದಾದ ಅಸಮಂಜಸತೆಯನ್ನು ವ್ಯಕ್ತಪಡಿಸಿ ಪುನಃ ಪ್ರಶ್ನೆ ಹಾಕುವುದು, ಹೀಗೆ ಮಾಡಿ ಕೊನೆಗೆ ಎದುರಾಳಿಯು ತನ್ನ ತಿಳಿವಿನ ಪೊಳ್ಳುತನವನ್ನು ತಾನೇ ಮನಗಂಡ ಮೇಲೆ ಅವನಿಗೆ ವಿಷಯದ ಸತ್ಯಾಂಶವನ್ನು ವಿವರಿಸುತ್ತಿದ್ದನು. ರಾಮಮೋಹನರೂ ಹೀಗೆಯೇ ಎಲ್ಲ ಸಾಮಾಜಿಕ, ಧಾರ್ಮಿಕ ವಿಚಾರಗಳನ್ನೂ ಬಹಿರಂಗವಾಗಿ ಜನರಲ್ಲಿ ಚರ್ಚಿಸುತ್ತಿದ್ದರು. ಚರ್ಚೆಯಿಂದ ವಿಷಯ ಮಥನವಾಗಿ ಸತ್ಯಾಮೃತ ಹುಟ್ಟುವುದು. ಹಾಗೆ ಚರ್ಚಿಸಿ ನಿರ್ಧಾರಮಾಡಿದ ವಿಚಾರವನ್ನು ಲೇಖನಗಳ ಮೂಲಕವೂ ಪುಸ್ತಕಗಳ ಮೂಲಕವೂ ಜನರಲ್ಲಿ ಪ್ರಚಾರ ಮಾಡುತ್ತಿದ್ದರು. ಇದರಿಂದ ಅವರು ಅನೇಕರ ಗಮನಕ್ಕೆ ಬಂದರು. ಅವರ ಅನುಯಾಯಿಗಳು ಮಾತ್ರವಲ್ಲದೆ ತಟಸ್ಥರೂ ಉದಾಸೀನರೂ ಆಗಿದ್ದ

ವರ ಮತ್ತು ವಿರೋಧಿಗಳ ಗಮನಕ್ಕೂ ಬಂದರು. ಅವರ ಶಿಷ್ಯರಲ್ಲಿ ಒಬ್ಬನು ಅವರ ಆಗಿನ ವಿಚಾರವಾಗಿ ಹೀಗೆ ಬರೆದಿರುವನು:

“ಆತನ ದೇಹದಲ್ಲಿ ಶಕ್ತಿಯಿದ್ದಂತೆಯೇ ಆತನ ಬುದ್ಧಿಯಲ್ಲಿ ಸತ್ವವಿತ್ತು. ಆತನ ಸೂಕ್ಷ್ಮಮತಿಗೆ ಸ್ಪಷ್ಟವಾದ ವಿಚಾರಗಳನ್ನು ಜನರಿಗೆ ವಿಶದಪಡಿಸುತ್ತಿದ್ದನು. ಆತನ ಪಾಂಡಿತ್ಯಕ್ಕೂ, ಆತ್ಮಸಂಯಮಕ್ಕೂ, ಗಾಂಭೀರ್ಯ, ಸೌಜನ್ಯ, ವಿನಯಾದಿಗಳಿಗೂ ಜನರು ಆತನನ್ನು ಗೌರವಿಸುತ್ತಿದ್ದರು. ಮತವಿಚಾರಗಳ ಚರ್ಚೆಯಲ್ಲಿ ಆತನಿಗೆ ವಿರಾಮವೇ ಇಲ್ಲ. ಸತ್ಯಶ್ರದ್ಧೆಯೂ, ದೇವರಲ್ಲಿ ಆಂತರವಾದ ಭಕ್ತಿಯೂ, ಜನ್ಮಾಂತರದಲ್ಲಿ ದೃಢವಾದ ನಂಬಿಕೆಯೂ, ಜನರಲ್ಲಿ ಅಸಾಮಾನ್ಯ ದಯೆಯೂ ಆತನ ಸಹಜ ಗುಣಗಳಾಗಿದ್ದುವು.”

ರಾಮಮೋಹನರ ಜೀವನದಲ್ಲಿ ೧೮೧೫ನೆಯ ವರ್ಷವು ಮುಖ್ಯವಾದುದು. ಅವರ ಸುಧಾರಕ ಚಿತ್ತವು ಅಲ್ಲಿಂದ ಮುಂದೆ ಸ್ಪಷ್ಟವಾಗಿ ಕಾಣತಕ್ಕದ್ದಾಯಿತು. ವಿಗ್ರಹಾರಾಧನೆ, ಸಹಗಮನ ಇವುಗಳನ್ನು ತೊಡೆದು ಹಾಕುವ ಕಾರ್ಯಕ್ಕೆ ಕೈಯಿಟ್ಟರು. ಹಾಗೆಯೇ ಜನರ ಅಜ್ಞಾನ, ಮೂಢನಂಬಿಕೆಗಳನ್ನು ಖಂಡಿಸುವುದರಲ್ಲಿ ತೊಡಗಿದರು. ಇದಕ್ಕಾಗಿ ಪ್ರಯತ್ನವು ಬಹುಮುಖವಾಗಿ ಸಾಗಬೇಕಾಯಿತು. ಜನರಲ್ಲಿ ಶಾಸ್ತ್ರಜ್ಞಾನವನ್ನೂ ವಿದ್ಯೆಯನ್ನೂ ಹರಡಬೇಕಾಗಿತ್ತು. ಮುಂದಿನ ಜನತೆಗೆ ಪ್ರಯೋಜನವಾಗುವ ಹೊಸತೆರದ ವಿದ್ಯೆಯನ್ನು ಬೋಧಿಸುವ ಶಾಲೆಗಳನ್ನೇರ್ಪಡಿಸಬೇಕಾಗಿತ್ತು. ಭಗವಂತನ ಉಪಾಸನೆಗೆ ಸಹಾಯವಾಗತಕ್ಕ ಸಂಘಗಳನ್ನೇರ್ಪಡಿಸಬೇಕಾಗಿತ್ತು. ಹೀಗೆ ರಾಮಮೋಹನರು ಉದ್ದೇಶಿಸಿದ ಕಾರ್ಯಗಳು ಆಗಿನ ಕಾಲಸ್ಥಿತಿಗನುಗುಣವಾಗಿ ಜನರ ಮನಸನ್ನು ಪರಿಷ್ಕಾರಗೊಳಿಸುವ ಎಲ್ಲ ಕ್ಷೇತ್ರಗಳಿಗೂ ಅನ್ವಯಿಸತಕ್ಕದಾಗಿತ್ತು. ಪ್ರಚಾರದಲ್ಲಿದ್ದ ಹಿಂದೂಮತ ಸಂಪ್ರದಾಯಗಳು ಈಚಿನ ಕಾಲದಲ್ಲಿ ತಲೆಯೆತ್ತಿದ್ದುವೆಂದು ಅವರಿಗೆ ವ್ಯಕ್ತವಾಯಿತು. ಆಗಿನ ಪದ್ಧತಿಗಳನ್ನೂ ನಡೆವಳಿಕೆಗಳನ್ನೂ ಹಿಂದಿನ ಋಷಿಗಳ ಕಾಲದ ಆಚಾರಗಳೊಂದಿಗೆ ಹೋಲಿಸಿದರೆ ಆಗಿನವು ದೂಷ್ಯವೂ ಅರ್ಥವಿಲ್ಲದುವೂ ಆಗಿದ್ದುವು. ಹೀಗೆ ಹಿಂದಿನ ಪದ್ಧತಿಗಳೆಲ್ಲ ಸಂಪೂರ್ಣವಾಗಿ ಅಳಿಸಿಹೋಗಿ ವ್ಯತ್ಯಾಸಹೊಂದಿದ್ದ

ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸಿ ಹಿಂದಿನ ಉನ್ನತಸ್ಥಿತಿಗೆ ತರಬೇಕೆಂಬುದು ಅವರ ಆಶಯವಾಗಿತ್ತು. ಆದರೆ ಹಿಂದೂ ಧರ್ಮದ ಪರಿಷ್ಕರಣಕ್ಕೆ ಅವರು ತೊಡಗಿದಾಗ ವಿರೋಧಿಗಳು ಅವರನ್ನು ಧರ್ಮ ಹತಕನೆಂಹೂ ಧರ್ಮಬಾಹಿರನೆಂದೂ ಅವಮಾನಕರವಾಗಿ ನಿಂದಿಸಿದರು. ಅವರು ಕೈಗೊಂಡಿದ್ದ ಪರಿಷ್ಕರಣೋದ್ಯಮದ ಉದ್ದೇಶವಾಗಲಿ ಅದರ ನಿಸ್ಪೃಷ್ಟವಾದ ಬೆಲೆಯಾಗಲಿ ಅವರಿಗೆ ತಿಳಿದಿರಲಿಲ್ಲ. ಅವರನ್ನು ಧರ್ಮ ಹತಕನೆಂದು ಕರೆಯುವುದು ಅಯುಕ್ತವಾದ ಮತ್ತು ನಿರ್ದಯವಾದ ಆಕ್ಷೇಪ. ಅವರು ಹಿಂದೂ ಮತವನ್ನು ನಾಶಗೊಳಿಸಲಿಲ್ಲ, ಆದರೆ ಅದನ್ನು ಶುದ್ಧಿಮಾಡಿದರು. ಅವರು ನೂತನ ಮತಾಚಾರ್ಯನ ಸ್ಥಾನವನ್ನು ಆಕ್ರಮಿಸಿಕೊಳ್ಳಲಿಲ್ಲ. ಏಕದೇವತಾ ಪೂಜೆಯೇ ಸಮಸ್ತ ಹಿಂದೂಗಳ ಧರ್ಮವಾಗಿರಬೇಕೆಂಬುದು ಅವರ ಪರಿಷ್ಕರಣ ಕಾರ್ಯದ ಮೂಲ ಉದ್ದೇಶ. ಏಕದೇವತಾ ಪೂಜೆಯು ವೇದಗಳ ಕಾಲದ ಹಿಂದೂಗಳಿಗೆ ನಾಗರಿಕ ಪ್ರಪಂಚದ ಗೌರವ ಮೆಚ್ಚಿಕೆಗಳನ್ನು ತಂದಿತ್ತು; ಅಂಥ ಪೂಜಾ ವಿಧಾನಗಳನ್ನು ಪುನಃ ನೆಲೆಗೊಳಿಸಿ ಜನಾಂಗದ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುವುದೇ ಅವರ ಗುರಿಯಾಗಿತ್ತು.

ಹಿಂದೂಮತ ತತ್ತ್ವಗಳೂ ಆಚಾರಗಳೂ ವೇದ, ಉಪನಿಷತ್ತುಗಳಲ್ಲಿ ಅಡಗಿವೆ. ಆ ಗ್ರಂಥಗಳು ಸಂಸ್ಕೃತದಲ್ಲಿದ್ದುದರಿಂದ ಜನಸಾಮಾನ್ಯರಿಗೆ ಗ್ರಾಹ್ಯವಾಗದೆ ಕೈಗೆ ಸಿಕ್ಕದ ಬೊಕ್ಕಸವಾಗಿತ್ತು. ತತ್ತ್ವ ಜ್ಞಾನವನ್ನು ಜನರಲ್ಲಿ ಹರಡುವುದಕ್ಕಾಗಿ ವೇದ, ಉಪನಿಷತ್ತುಗಳನ್ನು ದೇಶಭಾಷೆಯಾದ ಬಂಗಾಳಿಗೂ, ರಾಜಭಾಷೆಯಾದ ಇಂಗ್ಲಿಷಿಗೂ, ಪರಿವರ್ತಿಸಲು ತೊಡಗಿದರು. ೧೮೧೫ ರಲ್ಲಿ ಶಂಕರಾಚಾರ್ಯರ "ವೇದಾಂತ ಸೂತ್ರ ಭಾಷ್ಯ" ವನ್ನು ಸಂಸ್ಕೃತದಿಂದ ಬಂಗಾಳಿಗೆ ಪರಿವರ್ತಿಸಿದರು. ಅದರಲ್ಲಿ ವಿಗ್ರಹಾರಾಧಕರ ವಾದವನ್ನು ಖಂಡಿಸಿ ದೇವರು ನಿರಾಕಾರನೆಂದೂ, ಆತನನ್ನು ವಿಗ್ರಹಗಳೂ ಪ್ರತೀಕಗಳೂ ಇಲ್ಲದೆಯೇ ಸೇವಿಸಬಹುದೆಂದೂ, ವಿಗ್ರಹಾರಾಧನೆಯು ಕೇವಲ ಪಾಮರರಿಗೆಂದು ಹೇಳಲ್ಪಟ್ಟಿದ್ದರೂ ಅವರೂ ಕೂಡ ನಿರಾಕಾರ ಬ್ರಹ್ಮನನ್ನು ಉಪಾಸನೆ ಮಾಡಬಹುದೆಂದೂ, ವೇದಾದಿ ಹಿಂದೂ ಮತ ಗ್ರಂಥಗಳನ್ನು ಯಾವ ಭಾಷೆ

ಗಾದರೂ ಬರೆಯಬಹುದೆಂದೂ, ಅದರಿಂದ ದೋಷ ಬರಲಾರದೆಂದೂ ವಿವರಿಸಿದರು. ಸಾಮಾನ್ಯ ಜನರಿಗೆ "ವೇದಾಂತ ಸೂತ್ರವು" ಸುಲಭ ಗ್ರಾಹ್ಯವಾಗದ್ದರಿಂದ ರಾಮಮೋಹನರು ಅದರಲ್ಲಿನ ವಿಷಯಗಳನ್ನೆಲ್ಲ ಸಂಗ್ರಹಿಸಿ "ವೇದಾಂತಸಾರ" ಎಂಬ ಹೆಸರಿನಿಂದ ಬಂಗಾಳಿ, ಇಂಗ್ಲಿಷ್, ಹಿಂದೂಸ್ಥಾನಿಗಳಲ್ಲಿ ೧೮೧೬ ರಲ್ಲಿ ಬರೆದರು. ಅದೇ ವರ್ಷದಲ್ಲಿಯೇ ಕೇನ ಮತ್ತು ಈಶ ಉಪನಿಷತ್ತುಗಳನ್ನು ಬಂಗಾಳಿ, ಇಂಗ್ಲಿಷುಗಳಲ್ಲಿ ಪ್ರಕಟಿಸಿದರು. ಮುಂದಿನ ವರ್ಷ, ೧೮೧೭ ರಲ್ಲಿ, ಮುಂಡಕ, ಕಠ ಮತ್ತು ಮಾಂಡೂಕ್ಯ, ಛಾಂದೋಗ್ಯ ಉಪನಿಷತ್ತುಗಳನ್ನು ಬಂಗಾಳಿಗೂ ಮುಂಡಕ ಮತ್ತು ಕಠೋಪನಿಷತ್ತುಗಳನ್ನು ಇಂಗ್ಲಿಷಿಗೂ ಪರಿವರ್ತಿಸಿದರು. ಈ ಗ್ರಂಥಗಳಿಂದ ವೇದ ಮತದ ಸ್ವರೂಪವನ್ನು ತಿಳಿಸಿ ರೂಢಿಯಲ್ಲಿದ್ದ ಆಚಾರ ವ್ಯವಹಾರಗಳು ವೇದಮತದ ನಿಜಸ್ವರೂಪವನ್ನು ಮರೆಮಾಡಿತ್ತೆಂಬುದನ್ನು ತೋರಿಸಿಕೊಟ್ಟರು. ಮೂರ್ತಿ ಪೂಜೆಯನ್ನು ಖಂಡಿಸಿ ಹಿಂದೂ ಧರ್ಮವನ್ನು ಆದಿಕಾಲದ ಉತ್ತಮಸ್ಥಾನಕ್ಕೇರಿಸಲು ಪ್ರಯತ್ನಿಸಿದರು. ಪಾರಮಾರ್ಥಿಕ ಪರಮ ಸುಖವನ್ನು ಪಡೆಯಲು ಭಗವಂತನ ಮಾನಸಿಕ ಪೂಜೆಧ್ಯಾನಗಳೇ ಉತ್ತಮ ಸಾಧನಗಳೆಂದೂ, ಯಜ್ಞಯಾಗಾದಿಗಳೂ ವಿಗ್ರಹಾರಾಧನೆಯೂ ದುರ್ಬಲವಾದ ಚಿತ್ತೈಕಾಗ್ರತೆಯುಳ್ಳವರಿಗೆ ಮಾತ್ರವೇ ಎಂದೂ, ಹಿಂದೂಮತ ಗ್ರಂಥಗಳು ನಿರೂಪಿಸುವುದಾಗಿ ತಿಳಿಸಿದರು. ವಿಗ್ರಹಾರಾಧನೆಯಲ್ಲಿ ಹಿಂದೂಗಳಿಗಿರಬೇಕಾದ ಭಾವನೆಯನ್ನು ಕುರಿತು ಹೀಗೆ ಹೇಳಿದರು.

"ವಿಗ್ರಹಾರಾಧನೆಯ ವಿಷಯದಲ್ಲಿ ವೇದಗಳು ವಿಶಾಲಭಾವವನ್ನು ಸೂಚಿಸಿರುವುದೇನೋ ನಿಜ, ಅಗೋಚರನಾದ ಭಗವಂತನನ್ನು ಮನದಲ್ಲಿ ಧ್ಯಾನಿಸುವುದು ಯಾರಿಗೆ ಸಂಪೂರ್ಣ ಅಸಾಧ್ಯವೋ ಅಂತಹವರಿಗೆ ಮಾತ್ರವೇ ವಿಗ್ರಹಾರಾಧನೆ. ಆದರೂ ವೇದಗಳು ವಿಗ್ರಹಾರಾಧನೆಯ ವಿಧಿಗಳನ್ನು ತ್ಯಜಿಸಿ ಅದಕ್ಕಿಂತಲೂ ಶುದ್ಧವಾದ ಪ್ರಕ್ರಿಯೆಗಳನ್ನು ಕೈಗೊಳ್ಳಬೇಕೆಂದು ಸಾರಿಸಾರಿ ತಿಳಿಸುವುವು. ಏಕೆಂದರೆ ವಿಗ್ರಹಾರಾಧನೆಯಿಂದ ಎಂದಿಗೂ ನಿತ್ಯವಾದ ಮುಕ್ತಿಯು ದೊರೆಯಲಾರದು."

ಮೇಲೆ ಹೇಳಿದ ಎಲ್ಲ ಗ್ರಂಥಗಳನ್ನೂ, ಮುನ್ನುಡಿ ವ್ಯಾಖ್ಯಾನಗಳೊಂದಿಗೆ, ರಾಮಮೋಹನರೇ ತಮ್ಮ ಸ್ವಂತ ವೆಚ್ಚದಿಂದ ಅಚ್ಚು ಮಾಡಿಸಿ ಜನರಲ್ಲಿ ಉಚಿತವಾಗಿ ಹಂಚಿದರು. ಉಪನಿಷತ್ತುಗಳ ಭಾಷಾಂತರಗಳು ಅಲ್ಲಿಂದೀಚೆಗೆ ಅನೇಕ ಹುಟ್ಟಿದ್ದರೂ ರಾಮಮೋಹನರು ಅನುಸರಿಸಿದ ಸ್ವತಂತ್ರ ವ್ಯಾಖ್ಯಾನ ರೀತಿಯಿಂದ ಅವರ ಭಾಷಾಂತರಗಳೂ ಉಪಯೋಗವಾದುದೆಂದು ಎಣಿಸಲ್ಪಟ್ಟಿದೆ.

ಕಾಲಸ್ಥಿತಿಯನ್ನರಿತಿದ್ದ ರಾಮಮೋಹನರು ಎಲ್ಲದರಲ್ಲಿಯೂ ಹಿಂದೂಮತವು ಆರ್ಷೇಯಮಾರ್ಗವನ್ನೇ ಹಿಡಿಯಬೇಕೆಂದು ಹೇಳುವಷ್ಟು ಅಂಧಾನುಗಾಮಿಗಳಾಗಿರಲಿಲ್ಲ; ಅಲ್ಲದೆ ನೂತನ ಪದ್ಧತಿಯ ವಿಚಾರಪರತೆಯಿಂದ ಸಿದ್ಧಾಂತಗೊಳಿಸಿದ ಮಾರ್ಗವೆಲ್ಲ ಸರಿಯೆಂದು ಹೇಳುವಷ್ಟು ಸ್ವತಂತ್ರ ವಾದಿಗಳೂ ಆಗಿರಲಿಲ್ಲ. ಋಷಿಗಳಿಂದ ಪ್ರಣೀತವಾದ ಮತಸಂಪ್ರದಾಯವನ್ನು ಆಧಾರವಾಗಿಟ್ಟುಕೊಂಡು ವಿಚಾರಪರತೆಯ ಸ್ವಾತಂತ್ರ್ಯದಿಂದ ನೂತನ ಸ್ಥಿತಿಗತಿಗಳಿಗೆ ಅವಶ್ಯವಿದ್ದಷ್ಟು ಸಂಪ್ರದಾಯವನ್ನು ವ್ಯತ್ಯಾಸ ಮಾಡಿಕೊಳ್ಳಬೇಕೆಂಬುದೇ ಅವರ ಉದ್ದೇಶವಾಗಿತ್ತು. ಹಿಂದಿನಿಂದ ಬಂದ ಸಂಪ್ರದಾಯಗಳನ್ನು ದೂರಮಾಡುವುದರಲ್ಲಿ ಅವರಿಗೆ ಇಷ್ಟವಿರಲಿಲ್ಲ ಮತ್ತು ಹಾಗೆ ಮಾಡುವುದರಲ್ಲಿದ್ದ ಅನರ್ಥಗಳನ್ನೂ ಮನಗಂಡಿದ್ದರು. ಹಾಗೆಯೇ ವಿಚಾರಪರತೆಯ ಮಾರ್ಗವನ್ನು ಸ್ವೇಚ್ಛೆಯಾಗಿ ಅವಲಂಬಿಸುವುದರ ಅನರ್ಥಗಳನ್ನೂ ಮನಗಂಡಿದ್ದರು. ಆದುದರಿಂದಲೇ ಅವರ ಸುಧಾರಣೆಯ ಮಾರ್ಗವು ಹಿಂದಿನ ಸಂಪ್ರದಾಯವನ್ನು ನಾಶಮಾಡಿ ಅದರ ಸ್ಥಾನದಲ್ಲಿ ವಿಚಾರಪರತೆಯಿಂದ ಸಿದ್ಧಾಂತಮಾಡಿದ ಹೊಸದನ್ನು ಸೃಷ್ಟಿಸುವಂತಹದ್ದಾಗಿರಲಿಲ್ಲ. ಅವರ ಬುದ್ಧಿಯು ರಚನಾತ್ಮಕವಾದುದಾಗಿತ್ತು. ಅವರು ಯಾವಾಗಲೂ ಹಿಂದಿನ ಸಂಪ್ರದಾಯದ ಆವಶ್ಯಕತೆಯನ್ನು ಅಲಕ್ಷಿಸಲೂ ಇಲ್ಲ; ಹೊಸ ವಿಚಾರಪರತೆಯನ್ನು ಹೆಚ್ಚು ಪುರಸ್ಕರಿಸಲೂ ಇಲ್ಲ. ಅವರ ಅಡಿ ಸಂಪ್ರದಾಯದಲ್ಲಿ ಭದ್ರವಾಗಿ ನಿಂತು ದೃಷ್ಟಿಯೆಲ್ಲ ಮುಂದಿನ ಕಾಲದ ಮೇಲಿತ್ತು. ಪುರಾತನ ಸಂಪ್ರದಾಯ ಮತ್ತು ನೂತನ ವಿಚಾರಪರತೆ ಇವುಗಳಿಗೆ ಕಲ್ಪಿಸಿಕೊಂಡ ಸಾಮರಸ್ಯವೇ ರಾಮಮೋಹನರ ಸುಧಾರಣಾಮಾರ್ಗದ ವೈಶಿಷ್ಟ್ಯಕ್ಕೂ ಅವರ ಪ್ರಖ್ಯಾತಿ

ಶಯುಕ್ತೂ ನಿದರ್ಶನಗಳಾಗಿವೆ ತಾವು ಕೈಕೊಂಡ ಹಿಂದೂ ಧರ್ಮ ಮತ್ತು ಸಮಾಜ ಪರಿಷ್ಕರಣ ಕಾರ್ಯದಲ್ಲಿ ಸಂಪ್ರದಾಯ ಅಥವಾ ವಿಚಾರ ಪರತೆ ಯಾವ ಒಂದೇ ಆಗಲಿ ಅಪೂರ್ಣವೆಂಬುದನ್ನು ಅವರು ಚೆನ್ನಾಗಿ ಗ್ರಹಿಸಿದ್ದರು ಕೇನೋಪನಿಷತ್ತಿನ ಮುನ್ನುಡಿಯಲ್ಲಿ ತಿಳಿಸಿರುವ ಅವರ ಮಾತುಗಳು ಈ ವಿಷಯದಲ್ಲಿ ಅವರ ಮನೋಗತವನ್ನು ವ್ಯಕ್ತ ಗೊಳಿಸುವುವು

"ಮತ ತತ್ತ್ವಗಳ ಸತ್ಯಾಂಶದ ಪರಿಶೋಧನೆಯಲ್ಲಿ ಅನೇಕ ತೊಡರುಗಳ ಘರ್ಷಣೆಗೆ ಒಳಗಾಗಬೇಕಾದುದಕ್ಕಾಗಿ ವಿಷಾದಿಸುತ್ತೇನೆ ಪ್ರಾಚೀನ ಜನಾಂಗಗಳ ಸಂಪ್ರದಾಯಗಳ ಕಡೆಗೆ ನೋಡಿದರೆ ಅವು ಒಂದ ಕ್ಕೊಂದು ವಿರೋಧವಾಗಿರುವುದನ್ನು ಗಮನಿಸುತ್ತೇನೆ ಇಂಥ ಸಂದರ್ಭ ದಿಂದ ಅಧೈರ್ಯಗೊಂಡು ನಿರ್ದಿಷ್ಟವಾದ ಮಾರ್ಗಕ್ಕೆಂದು ವಿಚಾರಪರತೆಗೆ ಶರಣಾದರೆ ನಾವು ಗಮಿಸುತ್ತಿರುವ ಲಕ್ಷ್ಯಕ್ಕೆ ನಮ್ಮನ್ನು ಕರೆದೊಯ್ಯಲು ಅದು ಒಂದೇ ಹೇಗೆ ಅಸಮರ್ಥವಾದುದೆಂದೂ ಕೂಡಲೇ ವ್ಯಕ್ತವಾಗು ವುದು ನಮ್ಮ ಸಂದೇಹಗಳನ್ನು ಪರಿಹಾರ ಮಾಡುವ ಯತ್ನಗಳಿಗೆ ನೆರ ವಾಗುವ ಬದಲು ಅದು ನಮ್ಮ ಸುಖಶಾಂತಿಗಳಿಗೆ ಆಧಾರವಾದ ಮೂಲ ತತ್ತ್ವಕ್ಕೆ ವಿರುದ್ಧವಾದ ಸರ್ವಾತ್ಮಕ ಸಂದೇಹವನ್ನು ಉತ್ಪನ್ನ ಮಾಡು ವುದು ಆದುದರಿಂದ ಯಾವ ಒಂದು ಮಾರ್ಗಕ್ಕೂ ಸಂಪೂರ್ಣವಾಗಿ ಒಳಗಾಗದಿರುವುದೇ ಶ್ರೇಷ್ಠರೀತಿ, ಆದರೆ ಸರ್ವಶಕ್ತನ ಒಳ್ಳೆಯತನದಲ್ಲಿ ನಂಬಿಕೆಯಿಟ್ಟು ನಮ್ಮ ಮಾನಸಿಕ ಮತ್ತು ಶೀಲಸಾಮರ್ಥ್ಯಗಳನ್ನು ಉತ್ತಮಗೊಳಿಸಲು ಸಂತತ ಪ್ರಯತ್ನ ನಡೆಸುವುದು, ಅಂಥ ನಂಬಿಕೆ ಯೊಂದೇ ಶ್ರದ್ಧೆಯಿಂದಲೂ ಪರಿಶ್ರಮದಿಂದಲೂ ನಾವು ಅನ್ವೇಷಿಸುವ ಗುರಿಗೆ ನಮ್ಮನ್ನು ಕರೆದೊಯ್ಯಲು ಸಮರ್ಥವಾದುದು "

ಮೇಲಿನ ವಾಕ್ಯಗಳಿಂದ ರಾಮಮೋಹನರ ಸುಧಾರಣೆಯ ರೀತಿ ಯೇನೆಂಬುದು ವ್ಯಕ್ತವಾಗುವುದು, ಅಲ್ಲದೆ ಸುಧಾರಣೆಯ ಕಾರ್ಯದಲ್ಲಿ ಅವರ ಉದ್ದೇಶವೇನಿತ್ತೆಂಬುದೂ ವ್ಯಕ್ತವಾಗುವುದು ಹಿಂದೂ ಧರ್ಮ ದಲ್ಲಿಯೂ ಸಮಾಜದಲ್ಲಿಯೂ ಆಗ ಪ್ರಚಾರದಲ್ಲಿದ್ದ ಪ್ರಬಲವಾದ ದೂಷ್ಯ

ಪದ್ಧತಿಗಳನ್ನು ಪರಿಷ್ಕಾರಗೊಳಿಸುವುದಕ್ಕಾಗಿಯೇ ಅವರು ವೇದೋಪನಿಷತ್ತುಗಳನ್ನು ಭಾಷಾಂತರಿಸಿದ್ದುದು. ಮತ ತತ್ತ್ವಗಳನ್ನು ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಯಿಂದ ಪರಿಶೀಲಿಸುತ್ತಿದ್ದರೇ ಹೊರತು ಆಧ್ಯಾತ್ಮಿಕ ದೃಷ್ಟಿಯಿಂದಲ್ಲವೆಂಬುದು ಇದರಿಂದ ಸ್ಪಷ್ಟವಾಗುವುದು. ಅವರು ಮತ ಪರಿಷ್ಕಾರಕರಾದರೂ ಅವರದು ಆಧ್ಯಾತ್ಮಿಕ ಚಿತ್ತವೃತ್ತಿಯಲ್ಲ. ಅವರು ಮತ ಸಿದ್ಧಾಂತಿಗಳೂ ಅಲ್ಲ, ದಾರ್ಶನಿಕರೂ ಅಲ್ಲ. ಅವರು ಕೇವಲ ಸಮಾಜಹಿತ ದೃಷ್ಟಿಯಿಂದ ಪ್ರೇರಿತರಾದ ದೇಶಭಕ್ತರು ಮತ್ತು ರಾಜನೀತಿ ಕುಶಲರು. ಆದುದರಿಂದಲೇ ಅವರು ಧರ್ಮ ಮತ್ತು ಸಮಾಜ ಪರಿಷ್ಕರಣಕ್ಕೆ ತೊಡಗಿದ್ದುದು.

ರಾಮಮೋಹನರ ಈ ಉಪನಿಷದಾದಿ ಗ್ರಂಥಗಳು ದೇಶೀಯರಲ್ಲಿ, ಅದರಲ್ಲಿಯೂ ಬಂಗಾಳದಲ್ಲಿ, ಎಂದೂ ಇಲ್ಲದ ಪ್ರಬಲವಾದ ಕೋಲಾಹಲವನ್ನೆಬ್ಬಿಸಿತು. ಅವುಗಳ ಪ್ರಭಾವವು ದಕ್ಷಿಣ ಇಂಡಿಯಕ್ಕೆ ಹಬ್ಬಿದ್ದು ಮಾತ್ರವಲ್ಲದೆ ಪರದೇಶಗಳಿಗೂ ಹಬ್ಬಿತು. ಇಂಗ್ಲೆಂಡಿನಲ್ಲಿದ್ದ ಡಿಗ್ಬಿಯು ರಾಮಮೋಹನರ "ವೇದಾಂತಸಾರ" ಕ್ಕೆ ಒಂದು ಮುನ್ನುಡಿ ಸೇರಿಸಿ ಅದರ ಜೊತೆಗೆ ಕೇನ ಉಪನಿಷತ್ತನ್ನೂ ಕೂಡಿಸಿ ೧೮೧೭ ರಲ್ಲಿ ಪುನರ್ಮುದ್ರಿಸಿ ಪ್ರಕಟಿಸಿದನು. ಈ ಗ್ರಂಥಗಳು ಪಾಶ್ಚಾತ್ಯರಿಗೆ ತಿಳಿದೇ ಇರಲಿಲ್ಲವಾದುದರಿಂದ ಇವುಗಳ ಪ್ರಕಟನೆಯು ಆ ಜನರಲ್ಲಿ ಎಷ್ಟು ಆಸಕ್ತಿ ಹುಟ್ಟಿಸಿತೆಂಬುದನ್ನು ಊಹಿಸಬಹುದು. ರಾಮಮೋಹನರ ಹೆಸರೂ ಅವರ ಕೆಲಸಗಳೂ ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳ ವಿಚಾರಪರವ್ಯಕ್ತಿಗಳ ಗಮನಕ್ಕೆ ಬಂದುದಲ್ಲದೆ ಅಲ್ಲಿನ ಅನೇಕ ಪತ್ರಿಕೆಗಳಲ್ಲಿ ಪ್ರಶಂಸಿತವಾದುವು. ಹೀಗೆ ಅವರ ಕೀರ್ತಿಯು ಹೊರದೇಶಗಳಲ್ಲಿ ವ್ಯಾಪಿಸುತ್ತಿದ್ದರೂ ಸ್ವದೇಶದಲ್ಲಿಯೇ ಸಂಪ್ರದಾಯ ಶರಣರ ಖಂಡನೆಯು ತೀವ್ರವಾಯಿತು. ಆದರೆ ರಾಮಮೋಹನರ ಮನೋದಾರ್ಢ್ಯವೂ ಬಲವತ್ತರವಾಯಿತು. "ವೇದಾಂತಸಾರ" ದಲ್ಲಿ ಮನಕರಗುವಂತೆ ಹೀಗೆ ಬರೆದಿರುವರು: "ನನ್ನ ಅಂತಃಕರಣವೂ ಸತ್ಯವೂ ಪ್ರೇರಿಸುವ ಪಥವನ್ನು ಹಿಡಿದಿರುವುದರಿಂದ, ನಾನು, ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನು, ವಿಚಾರಾಂಧರೂ, ಈಗಿನ ಆಚಾರಗಳಿಂದ ಪ್ರಾಪಂಚಿಕ ಪ್ರಯೋಜನಗಳನ್ನು ಪಡೆಯುತ್ತಿರುವ ನನ್ನ ಕೆಲವು ಬಂಧು

ಗಳೂ ಆದವರ ಆಕ್ಷೇಪ ನಿಂದೆಗಳಿಗೆ ಒಳಗಾಗಿದ್ದೇನೆ ಆದರೆ ಇವು ಎಷ್ಟು ಹೆಚ್ಚಿದರೂ ನಾನು ಶಾಂತಚಿತ್ತದಿಂದ ಸಹಿಸುವೆನು ಎಂದಿಗಾದರೂ ನನ್ನ ಅಲ್ಪಪ್ರಯತ್ನವು ನ್ಯಾಯದೃಷ್ಟಿಯಿಂದ ಪರಿಶೀಲಿಸಲ್ಪಡುವುದೆಂದೂ, ಆಗ ನನ್ನ ಕಾರ್ಯವು ಬಹುಶಃ ಕೃತಜ್ಞತೆಯಿಂದ ಸ್ಮರಿಸಲಾಗುವುದೆಂದೂ ನಂಬಿರುತ್ತೇನೆ ಸಮಕ್ಷಮದಲ್ಲಿಲ್ಲದಿದ್ದರೂ ಯಾರು ಸರ್ವಾಂತರ್ಯಾಮಿಯಾಗಿ ಎಲ್ಲವನ್ನೂ ಅಪ್ರತ್ಯಕ್ಷವಾಗಿ ದೃಷ್ಟಿಸಿ ಪ್ರತ್ಯಕ್ಷ ರೀತಿಯಲ್ಲಿ ಎಲ್ಲರನ್ನೂ ಶಿಕ್ಷಿಸುವನೋ ಆವ್ಯಕ್ತಿಗೆ ನನ್ನ ಉದ್ದೇಶವು ಒಪ್ಪಿಗೆಯಾಗತಕ್ಕದ್ದೆಂಬ ಈ ನನ್ನ ಭರವಸೆಯು ಯಾರು ಏನು ಹೇಳಿದರೂ ಅಳಿಯಲಾರದು " ರಾಮಮೋಹನರ ಈ ಧೈರ್ಯಕ್ಕೆ ಅವರ ಉಜ್ವಲ ಮನೋನಿಶ್ಚಯವೇ ಆಧಾರ

ರಾಮಮೋಹನರು "ವೇದಾಂತಸಾರ ಸಂಗ್ರಹ"ದ ಮತ್ತು ಕೇನೋಪನಿಷತ್ತಿನ ಇಂಗ್ಲಿಷ್ ಭಾಷಾಂತರದ ಪ್ರತಿಗಳನ್ನು ೧೮೧೭ ರಲ್ಲಿ ಲಂಡನ್ನಿನಲ್ಲಿದ್ದ ಡಿಗ್ಬಿಯವರಿಗೆ ಕಳುಹಿಸಿದರು ಆಗ ತಾವು ಕೈಕೊಂಡಿದ್ದ ಕೆಲಸದ ವಿಚಾರವನ್ನೂ ಅದರ ಪ್ರತಿಫಲವನ್ನೂ ಕುರಿತ ಒಂದು ಪತ್ರ ಬರೆದರು ಅದರಲ್ಲಿ ಹೀಗಿದೆ --

" ಹಿಂದೂಗಳು ಸಾಮಾನ್ಯವಾಗಿ ಅವರ ಮತಾಚಾರಗಳಲ್ಲಿಯೂ ಅವರ ಜೀವನ ಕ್ರಮದಲ್ಲಿಯೂ ಉಳಿದ ಎಲ್ಲ ಜನಾಂಗಗಳಿಗಿಂತ ಹೆಚ್ಚು ಮೂಢನಂಬಿಕೆಯುಳ್ಳವರೂ ದುಃಸ್ಥಿತಿಗೀಡಾದವರೂ ಆಗಿರುವುದನ್ನು ನೋಡುತ್ತಿದೇನೆ ಆದುದರಿಂದ ಅವರನ್ನು ಇಹದಲ್ಲಿಯೂ ಪರದಲ್ಲಿಯೂ ಸುಖಿಗಳನ್ನಾಗಿ ಮಾಡುವ ಉದ್ದೇಶದಿಂದ ಅವರು ಆಚರಿಸುತ್ತಿರುವ ದೂಷ್ಯವಾದ ವಿಗ್ರಹಾರಾಧನೆಯನ್ನು ವಾದಮಾಡಿ ಖಂಡಿಸಿದೆನಲ್ಲದೆ ಅವರ ಪ್ರಾಜ್ಞ ಮತಗ್ರಂಥವಾದ ವೇದಾಂತವನ್ನು ಬಂಗಾಳಿ, ಹಿಂದೂಸ್ಥಾನಿ ಭಾಷೆಗಳಿಗೆ ಪರಿವರ್ತಿಸಿದೆನು ಮತ್ತು ಹಿಂದೂ ಮತಗ್ರಂಥಗಳು ದೇವರು ಒಬ್ಬನೇ ಎಂಬುದನ್ನೂ, ವಿಗ್ರಹಾರಾಧನೆಯು ನಿರರ್ಥಕವೆಂಬುದನ್ನೂ, ಪ್ರತಿಪಾದಿಸುವುವೆಂಬುದನ್ನು ಸ್ಥಾಪಿಸುವುದಕ್ಕೆ ವೇದದ ಕೆಲವು ಭಾಗಗಳನ್ನು ದೇಶಭಾಷೆಗಳಿಗೆ ಭಾಷಾಂತರಿಸಿದೆನು.

ಈ ನನ್ನ ಕಾರ್ಯಭಾರದ ಮೊದಲಲ್ಲಿ ಬ್ರಾಹ್ಮಣ ಮತಕ್ಕೆ ಸೇರಿದ ಸ್ವಾರ್ಥಪರರಾದ ಮುಖಂಡರಿಂದ ಬಹುವಾಗಿ ವಿರೋಧ ಹುಟ್ಟಿ, ನನ್ನ ಹತ್ತಿರದ ಬಂಧುಗಳೂ ನನ್ನನ್ನು ತ್ಯಜಿಸಿದರು. ಇದರಿಂದ ನನಗೆ ಬಹಳ ವ್ಯಥೆಯಾಯಿತು. ಈ ಆಪತ್ಕಾಲದಲ್ಲಿ ನನ್ನ ಪಾಶ್ಚಾತ್ಯ ಸ್ನೇಹಿತರ ಸಮಾಧಾನಕರವಾದ ಮತ್ತು ವಿಚಾರವತ್ತಾದ ಸಂಭಾಷಣೆಯಿಂದ ಮಾತ್ರ ನನಗೆ ಸಂತೋಷ ಒದಗುತ್ತಿತ್ತು. ಆದರೆ ನನ್ನ ದೇಶಬಾಂಧವರು ಈಗ ತಮ್ಮ ಸಂಕುಚಿತ ಭಾವಗಳನ್ನು ಬಿಟ್ಟಿರುವರೆಂದು ತಿಳಿಸಲು ಸಂತೋಷಿಸುತ್ತೇನೆ; ಅನೇಕರು ಸತ್ಯಾನ್ವೇಷಣೆಯಲ್ಲಿ ಆಸಕ್ತರಾಗಿದ್ದಾರೆ; ನನ್ನನ್ನು ವಿರೋಧಿಸಿದವರನೇಕರು ನನ್ನ ಅಭಿಪ್ರಾಯಗಳನ್ನು ಒಪ್ಪುವವರಾಗಿದ್ದಾರೆ. ಈ ಕೆಲಸಗಳು ನಾನು ಇಷ್ಟಪಡುವಷ್ಟು ಜಾಗ್ರತೆ ಯೂರೋಪಿಗೆ ಪ್ರಯಾಣ ಮಾಡಲು ಅಡ್ಡಿಮಾಡಿವೆ. ಆದರೆ ಇಂಗ್ಲೆಂಡಿಗೆ ಇನ್ನು ಸ್ವಲ್ಪ ಕಾಲದಲ್ಲೇ ಹೊರಡುತ್ತೇನೆಂಬುದನ್ನು ನೀವು ನಂಬಬಹುದು. ನೀವು ಮುಂದಿನ ಅಕ್ಟೋಬರ್ ವೇಳೆಗೆ ಇಂಡಿಯಕ್ಕೆ ಹಿಂತಿರುಗದಿದ್ದರೆ ನಾನು ಇಲ್ಲಿಂದ ಇಂಗ್ಲೆಂಡಿಗೆ ಹೊರಡುವ ದಿನವನ್ನೂ ಯಾವ ಜಹಜಿನಲ್ಲಿ ಪ್ರಯಾಣ ಮಾಡುತ್ತೇನೆಂಬುದನ್ನೂ ತಿಳಿಸುವ ನನ್ನ ಪತ್ರವು ಬಹುಶಃ ನಿಮ್ಮ ಕೈಸೇರಬಹುದು."

ಈ ಪತ್ರದಿಂದ ರಾಮಮೋಹನರ ಕಾರ್ಯಗಳ ವಿಚಾರದಲ್ಲಿ ದೇಶೀಯರು ತೋರ್ಪಡಿಸಿದ ಮನೋಭಾವವೇನೆಂಬುದು ಸ್ಪಷ್ಟವಾಗುವುದು. ಹಾಗೆಯೇ ಅವರು ಆ ವೇಳೆಗೇ ಇಂಗ್ಲೆಂಡಿನ ಪ್ರಯಾಣವನ್ನು ನಿಶ್ಚಯಿಸಿ ಅದಕ್ಕಾಗಿ ತ್ವರೆ ಪಡುತ್ತಿದ್ದರೆಂದೂ ಹೊರಪಡುವುದು. ಆದರೆ ಆ ಪ್ರಯಾಣವು ಅವರು ನಿರೀಕ್ಷಿಸಿದ ಕಾಲದಲ್ಲಿ ನೆರವೇರಲಿಲ್ಲವಲ್ಲದೆ ಅದಕ್ಕಾಗಿ ಇನ್ನೂ ೧೩ ವರ್ಷಗಳು ಕಾಯಬೇಕಾಗಿತ್ತು.

ಹಿಂದೂಗಳ ಸಾಂಪ್ರದಾಯಿಕ ಧರ್ಮ ಜೀವನವು ಮೂಢನಂಬಿಕೆಗಳ ತೊಡರಿಗೆ ಸಿಕ್ಕಿದ್ದುದರಿಂದ ಅವರ ಜೀವನವು ಅನಾವಶ್ಯಕವಾದ ಕ್ಲೇಶಗಳಿಗೀಡಾಗಿತ್ತು. ಆ ತೊಡರನ್ನು ಬಿಡಿಸುವುದೇ ತಮ್ಮ ಮುಖ್ಯ ಉದ್ದೇಶವೆಂದು ಕೇನೋಪನಿಷತ್ತಿನ ಮುನ್ನುಡಿಯಲ್ಲಿಯೂ ವಿವರಿಸಿದ್ದಾರೆ.

ಹೀಗೆ ವಾದವಿವಾದಗಳಿಂದಲೂ, ಲೇಖನ ಸಮೂಹಗಳಿಂದಲೂ ದೇಶೀಯರಲ್ಲಿ ಪ್ರಚಾರದಲ್ಲಿದ್ದ ನೀತಿವ್ಯವಹಾರಗಳನ್ನು ಖಂಡಿಸಿ ಅವರಿಗೆ ಪೂರ್ವದ ವೇದೋಕ್ತದ ಸ್ವಚ್ಛತೆಯನ್ನುಂಟು ಮಾಡಿದರು. ಇಷ್ಟರಿಂದಲೇ ತೃಪ್ತರಾಗದೆ ತಮ್ಮ ಉಪದೇಶಗಳನ್ನು ಆಚರಣೆಗೆ ತರುವ ಉದ್ದೇಶದಿಂದ ಸಂಸ್ಥೆಗಳನ್ನೂ ಹೂಡಿದರು. ತಮ್ಮ ಮನೆಗೆ ಬರುತ್ತಿದ್ದ, ತಮ್ಮ ಉಪದೇಶಗಳಲ್ಲಿ ವಿಶ್ವಾಸ ತೋರಿ ಜಂಬಲಕೂಡುತ್ತಿದ್ದ, ಮಿತ್ರರ ಸಹಾಯದಿಂದ ೧೮೧೫ರಲ್ಲಿ "ಆತ್ಮೀಯ ಸಭೆ" ಎಂಬ ಒಂದು ಸಂಘವನ್ನು ಸ್ಥಾಪಿಸಿದರು. ಮತ ವಿಚಾರಗಳನ್ನು ಕುರಿತು ಚರ್ಚೆ ನಡೆಸುವುದೂ, ಅವರ ಅಭಿಪ್ರಾಯಗಳನ್ನು ಜನರಲ್ಲಿ ಹರಡುವುದೂ, "ಸಭೆ"ಯ ಸದಸ್ಯರನ್ನು ವಿಗ್ರಹಾರಾಧನೆಯಿಂದ ದೂರಮಾಡಿ ಅವರ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುವುದೂ, ಆ 'ಸಭೆ'ಯ ಉದ್ದೇಶಗಳಾಗಿದ್ದುವು. ರಾಮಮೋಹನರು ಕಲ್ಕತ್ತೆಯಲ್ಲಿ ನೆಲಸುವ ವೇಳೆಗೆ ಅವರ ಸುಧಾರಣ ಬುದ್ಧಿಯು ಕೆಲವು ವಿದ್ಯಾವಂತರಿಗೆ ಗೋಚರವಾಗಿತ್ತು. ಅನುಯಾಯಿಗಳೂ ಅವರ ಉದ್ದೇಶ ಅಭಿಪ್ರಾಯಗಳಲ್ಲಿ ಸಹಾನುಭೂತಿಯಿದ್ದವರೂ ಅನೇಕರಿದ್ದರು. ಆದರೆ ರಾಮಮೋಹನರಲ್ಲಿಗೆ ಬಂದವರಿಗೆಲ್ಲ ಒಂದೇ ಬಗೆಯ ಮನೋಭಾವವಿರಲಿಲ್ಲ. ಅವರ ಜೊತೆಯಲ್ಲಿ ಸೇರುವುದರಿಂದ ತಮಗೂ ಗೌರವ ದೊಡ್ಡಸ್ತಿಕೆಗಳು ಬರುವುವೆಂಬ ಆಶೆಯಿಂದ ಕೆಲವರು ಸೇರುತ್ತಿದ್ದರು, ಪ್ರಾಪಂಚಿಕ ವ್ಯವಹಾರ ವಿಷಯಗಳಲ್ಲಿ ಅವರು ಉಪಯುಕ್ತವಾದ ಸಲಹೆಗಳನ್ನು ಕೊಟ್ಟು ತಮ್ಮ ಕಷ್ಟಗಳಲ್ಲಿ ಸಹಾಯ ಮಾಡುವರೆಂಬ ಸ್ವಾರ್ಥದಿಂದ ಕೆಲವರು ಸೇರುತ್ತಿದ್ದರು, ಅವರ ಉದ್ದೇಶ ಅಭಿಪ್ರಾಯಗಳಲ್ಲಿ ನೈಜವಾದ ಸಹಾನುಭೂತಿಯಿದ್ದು ದೇಶದ ಅಭ್ಯುದಯವನ್ನು ಬಯಸಿದವರು ಸ್ವಲ್ಪ ಮಂದಿ ಮಾತ್ರವೇ. ಈ ಕೊನೆಯ ಗುಂಪಿನ ಜನರ ಸಹಾಯದಿಂದಲೇ ರಾಮಮೋಹನರು "ಆತ್ಮೀಯ ಸಭೆ"ಯನ್ನು ಸ್ಥಾಪಿಸಿದ್ದು. ಅವರಲ್ಲಿ ಬಹುಮಂದಿ ಮಧ್ಯವಯಸ್ಕರಾಗಿ ಪ್ರಾಪಂಚಿಕ ವ್ಯವಹಾರಗಳನ್ನು ಬಲ್ಲವರಾಗಿ ರಾಮಮೋಹನರಿಗೆ ಆಪ್ತರಾಗಿ ಅವರಿಗೆ ಸರಿಸಮಾನರಾಗಿದ್ದರು. ಅವರಲ್ಲಿ ಮುಖ್ಯರಾದವರಾರೆಂದರೆ ಗೋಪೀನಾಥ ಠಾಕೂರರು, ವೈದ್ಯನಾಥ ಮುಖರ್ಜಿ, ನಂದಲಾಲವಸು, ಭೈರವ ಚಂದ್ರ

ದತ್, ಕಾಳಿನಾಥ ರಾಯ್, ದ್ವಾರಕಾನಾಥ ಠಾಕೂರ್, ಪ್ರಸನ್ನ ಕುಮಾರ ಠಾಕೂರ್, ವೈಕುಂಠನಾಥ ಮುನ್ಷಿ, ವ್ರಜಮೋಹನ ಮಜುಮ್ದಾರ್, ಹಲಧರ ಬೋಸ್, ನಂದಕಿಶೋರ ಬೋಸ್, ರಾಜನಾರಾಯಣ ಸೇನ್ ಮತ್ತು ಹರಿಹರಾನಂದ ತೀರ್ಥಸ್ವಾಮಿ ಮೊದಲಾದವರು. ರಾಮಮೋಹನರು ಇವರನ್ನು ಸಹೋದರರಂತೆ ಕಾಣುತ್ತಿದ್ದರು. ಇವರಿಗಿಂತ ಚಿಕ್ಕವರೂ ಕೆಲವರು ಅಲ್ಲಿ ಸೇರುತ್ತಿದ್ದರು. ಅವರಿಗೆ ರಾಮಮೋಹನರಲ್ಲಿ ನಿಜವಾದ ಗುರುಭಾವವಿತ್ತು.

ಮೊದಲೆರಡು ವರ್ಷಗಳು ಈ 'ಸಭೆ' ಯು ರಾಮಮೋಹನರ ಕಲ್ಕತ್ತೆಯ ಮಾಣಿಕತಲದ ತೋಟದ ಮನೆಯಲ್ಲಿ ವಾರಕ್ಕೊಂದು ಸಲವೂ ಹಿಂದೂ ಹಬ್ಬದಿನಗಳಲ್ಲಿಯೂ ಸೇರುತ್ತಿತ್ತು. ಅಲ್ಲಿ ಶಿವಪ್ರಸಾದ ಮಿಶ್ರನು ಹಿಂದೂ ಶಾಸ್ತ್ರಗಳನ್ನು ಓದಿ ಅವುಗಳಿಗೆ ಅರ್ಥ ವ್ಯಾಖ್ಯಾನಗಳನ್ನು ಹೇಳುತ್ತಿದ್ದನು. ಗೋವಿಂದ ಮಲ್ಲನೆಂಬ ಪ್ರಸಿದ್ಧ ಸಂಗೀತಗಾರನೂ ಇತರ ಸ್ನೇಹಿತರೂ ತಾವೂ ರಚಿಸಿದ ಹಾಡುಗಳನ್ನು ರಾಮಮೋಹನರೇ ಹಾಡುತ್ತಿದ್ದರು. ಎರಡು ವರ್ಷಗಳನಂತರ "ಸಭೆ" ಯ ಕೂಟಗಳು ರಾಮಮೋಹನರ ಮತ್ತೊಂದು ಮನೆಯಲ್ಲಿ ಜರುಗುತ್ತಿದ್ದುವು. ಕೊನೆಗೆ ಬಿಹಾರಿಲಾಲ್ ಚೌಧುರಿಯವರ ಮನೆಯಲ್ಲಿ ಜರುಗುತ್ತಿದ್ದುವು.

"ಆತ್ಮೀಯ ಸಭೆ" ಯ ಕೂಟಗಳಿಗೆ ಬರುತ್ತಿದ್ದ ವಿದೇಶೀಯರಲ್ಲಿ ಮುಖ್ಯನಾದವನು ಡೇವಿಡ್ ಹೇರ್ ಎಂಬಾತನು. ರಾಮಮೋಹನರಲ್ಲಿ ಆತನಿಗೆ ಸ್ನೇಹವೂ ಅವರ ಕೆಲಸದಲ್ಲಿ ಸಹಾನುಭೂತಿಯೂ ಇದ್ದುದರಿಂದ ಆತನು ತನ್ನಿಷ್ಟದಿಂದಲೇ, ಆಹ್ವಾನವಿಲ್ಲದೆಯೇ, ಸಭೆಯ ಕೂಟಗಳಿಗೆ ಬರುತ್ತಿದ್ದನು. ದೇಶದಲ್ಲಿ ವಿದ್ಯಾಪ್ರಚಾರ ಮಾಡುವ ಕೆಲಸದಲ್ಲಿ ಈತನೂ ನಿರತನಾಗಿದ್ದನು ; ವಿಗ್ರಹಾರಾಧನೆಯನ್ನು ಖಂಡಿಸುವುದರಲ್ಲಿಯೂ, ಸತಿ ಪದ್ಧತಿಯನ್ನು ತೊಲಗಿಸುವುದರಲ್ಲಿಯೂ, ದೇಶೀಯರಿಗೆ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕೊಟ್ಟು ಅವರನ್ನು ವಿಶಾಲಮತಿಗಳನ್ನಾಗಿ ಮಾಡುವುದರಲ್ಲಿಯೂ ಶ್ರಮಿಸುತ್ತಿದ್ದನು. ಆದುದರಿಂದ ಆತನಿಗೂ ರಾಮಮೋಹನರಿಗೂ ಅಂತರವಾದ ಸ್ನೇಹ ಬೆಳೆಯಿತು. ಈ ಸುಧಾರಕರ ಉದ್ದೇಶಗಳಿಗೆ

ಒಂದು ಇಂಗ್ಲಿಷ್ ಪಾಠಶಾಲೆಯು ಹೆಚ್ಚು ಸಹಕಾರಿಯಾಗುವುದೆಂದು ಹೇರ್ ಸಲಹೆಕೊಟ್ಟನು. ಈ ಸಲಹೆಯು ರಾಮಮೋಹನನಿಗೆ ಸಂಪೂರ್ಣ ಒಪ್ಪಿಗೆಯಿತ್ತೆಂದು ಹೇಳಬೇಕಾಗಿಲ್ಲ ಬ್ರಿಟಿಷರ ಆಳಿಕೆಯ ಮೂಲಕ ಇಂಡಿಯವು ಪಾಶ್ಚಾತ್ಯ ದೇಶಗಳ ಸಂಪರ್ಕಕ್ಕೆ ಒಳಗಾಗುವುದರಿಂದ ಈ ದೇಶವು ಪ್ರಗತಿಹೊಂದುವುದೆಂದು ಅವರು ಮನಗಂಡಿದ್ದರು ಅಲ್ಲದೆ ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ ದೇಶದಲ್ಲೊದಗಬೇಕಾದ ಬದಲಾವಣೆಗಳಿಗೆ ತಕ್ಕಂತೆ ಭಾವಿ ಭಾರತಕ್ಕೆ ತಳಹದಿಯನ್ನು ಕಟ್ಟುವುದರಲ್ಲಿ ಪ್ರಯತ್ನಿಸಿದರು ಆ ಕಾಲದಲ್ಲಿ ಸಂಸ್ಕೃತ ಮತ್ತು ಅರಬ್ಬಿ ಭಾಷೆಗಳ ವಿದ್ಯೆಯ ಪ್ರಾಮುಖ್ಯತೆಯನ್ನು ಚೆನ್ನಾಗಿ ತಿಳಿದಿದ್ದವರು ರಾಮಮೋಹನನಿಗಿಂತಲೂ ಬೇರೆ ಇರಲಿಲ್ಲವೆಂದು ಹೇಳಬಹುದು ಆ ಭಾಷೆಗಳಲ್ಲಿ ಅಮೂಲ್ಯ ಸಾಹಿತ್ಯ ನಿಧಿಯಿದ್ದರೂ ಅವು ನವೀನ ಯುಗಕ್ಕೆ ಹೊಂದಲಾರವೆಂದೂ ನವಯುಗಕ್ಕೆ ಬೇಕಾದ ಚೈತನ್ಯವನ್ನು ಪ್ರೇರಿಸಲಾರವೆಂದೂ ಅವರು ಸ್ಪಷ್ಟವಾಗಿ ತಿಳಿದಿದ್ದರು ಆಗ ಭಾರತಕ್ಕೆ ಬೇಕಾಗಿದ್ದುದು ಯುರೋಪಿನ ಜನಾಂಗಗಳಲ್ಲಿ ಬಹು ಮಟ್ಟಿಗೆ ತಲೆಯೆತ್ತಿದ್ದ, ಮನುಷ್ಯನ ಇಹ ಜೀವನಕ್ಕೆ ಸಹಾಯಕಾರಿಯಾದ, ವಿಜ್ಞಾನ ಶಾಸ್ತ್ರಗಳ ತಿಳಿವಳಿಕೆ ಎಂದು ಮನಗಂಡರು ಭಾರತದಲ್ಲಿ ವಿದ್ಯೆ ಸಂಸ್ಕೃತಿಗಳ ಪುನರುಜ್ಜೀವನವನ್ನು ಬಯಸಿದರು ಡೇವಿಡ್ ಹೇರನ ಸಲಹೆ ರಾಮಮೋಹನನಿಗೆ ಒಪ್ಪಿಗೆಯಾಗಿದ್ದರೂ " ಆತ್ಮೀಯ ಸಭೆ " ಯ ಸದಸ್ಯರಿಗೆ ಅದು ಅಷ್ಟು ಪ್ರಿಯವಾಗಲಿಲ್ಲ ಆದರೂ ರಾಮಮೋಹನರು ಆ ಉದ್ದೇಶವನ್ನು ಸಾಧಿಸದೆ ಬಿಡಲಿಲ್ಲ

ಇಂಗ್ಲಿಷ್ ವಿದ್ಯಾಶಾಲೆಯನ್ನು ಸ್ಥಾಪಿಸುವುದರಲ್ಲಿ ರಾಮಮೋಹನನಿಗೆ ನೆರವಾದಾತನು ಆಗಿನ ಮುಖ್ಯನ್ಯಾಯಾಧಿಕಾರಿಯಾಗಿದ್ದ ಸರ್ ಎಡ್ವರ್ಡ್ ಹೈಡ್ 'ಈಸ್ಟ್ ಆತನು ರಾಮಮೋಹನರನ್ನು ಬಲ್ಲವನಾಗಿದ್ದನು ಮತ್ತು ಅವರ ಬುದ್ಧಿಶಕ್ತಿಗಾಗಿ ಗೌರವಿಸುತ್ತಿದ್ದನು ರಾಮಮೋಹನರು ೧೮೧೬ ರ ಮೇ ತಿಂಗಳು ಮೊದಲಿನಲ್ಲಿ ಒಂದು ದಿನ ಆತನ ಮನೆಗೆ ಹೋಗಿ ಬಹುಮಂದಿ ದೇಶೀಯರು ಪಾಶ್ಚಾತ್ಯ ದೇಶಗಳಲ್ಲಿ ಒದಗುವಂತಹ ಸರ್ವಮುಖವಾದ ವಿದ್ಯಾಭ್ಯಾಸವನ್ನು ತಮ್ಮ ಮಕ್ಕಳಿಗೂ ಕಲ್ಪಿ

ಸುವುದಕ್ಕಾಗಿ ಒಂದು ಇಂಗ್ಲಿಷ್ ವಿದ್ಯಾಶಾಲೆಯನ್ನು ಬಯಸುವರೆಂದು ಹೇಳಿ, ಅದರ ಸ್ಥಾಪನೆಯಲ್ಲಿ ಆತನ ಸಹಾಯವನ್ನು ಕೋರಿದರು. ಸರ್ ಎಡ್ವರ್ಡ್ ಅವರು ಆ ಸಂಗತಿಯನ್ನು ಆಗಿನ ಗೌರ್ನರ್ ಜನರಲ್ಲರಿಗೆ ತಿಳಿಸಿ ಅದಕ್ಕಾಗಿ ತಮ್ಮ ಮನೆಯಲ್ಲಿ ಒಂದು ಸಭೆ ಸೇರಿಸಲು ಅನುಮತಿ ಪಡೆದರು. ಅದೇ ರೀತಿಯಲ್ಲಿ ೧೮೧೬ ರ ಮೇ ೧೪ ನೆಯ ತಾರೀಖಿನಲ್ಲಿ ಸರ್ ಎಡ್ವರ್ಡ್ ಅವರ ಮನೆಯಲ್ಲಿ ಐವತ್ತು ಮಂದಿಗೆ ಕಡಿಮೆಯಿಲ್ಲದ ದೇಶೀಯರ ಸಭೆಯೊಂದು ಸೇರಿತು. ಆ ಸಭೆಗೆ ಅಲ್ಲಿನ ಗಣ್ಯರೂ, ಹಣವಂತರೂ, ವೈದಿಕರೂ ಬಂದಿದ್ದರು. ಆಗ ಸುಮಾರು ಅರ್ಧ ಲಕ್ಷ ರೂಪಾಯಿಗಳಷ್ಟು ಚಂದಾ ಹಣವು ವಸೂಲಾಯಿತು. ಇನ್ನೂ ಹೆಚ್ಚು ಹಣವು ವಾಗ್ದಾನವಾಯಿತು.

ಸರ್ ಎಡ್ವರ್ಡ್ ಅವರು ಸಭಿಕರಲ್ಲಿ ಮಾತನಾಡುತ್ತಿದ್ದಾಗ ಒಂದು ವಿಚಿತ್ರ ಸಂದರ್ಭವೊದಗಿತು. ನೆರೆದಿದ್ದವರಲ್ಲಿ ಒಬ್ಬ ಕುಲೀನ ಬ್ರಾಹ್ಮಣನೂ, ಹಣವಂತನೂ, ಗಣ್ಯನೂ ಆಗಿದ್ದವನು ರಾಮಮೋಹನರಿಂದ ಚಂದಾಹಣವನ್ನು ತೆಗೆದುಕೊಳ್ಳಕೂಡದೆಂದು ಹೇಳಿದನು. ಸರ್ ಎಡ್ವರ್ಡ್ ಅವರು ಏಕೆಂದು ಕೇಳಿದ್ದಕ್ಕೆ ಅವನು ಹೀಗೆ ಹೇಳಿದನಂತೆ: "ಅವನು ನಮ್ಮಿಂದ ಬೇರೆಯಾಗಿ ನಮ್ಮ ಮತವನ್ನೇ ಖಂಡಿಸುವುದಕ್ಕೆ ಹೊರಟಿದ್ದಾನೆ."

ಸರ್ ಎಡ್ವರ್ಡ್ ಅವರು: "ರಾಮಮೋಹನರ ಮತವಾವುದೆಂಬುದು ನನಗೆ ತಿಳಿಯದು. ಆದರೆ ನಾನು ವೀರಕ್ರೈಸ್ತನಾಗಿದ್ದೇನೆ. ನನ್ನಿಂದ ಚಂದಾ ತೆಗೆದುಕೊಳ್ಳುವುದರಲ್ಲಿ ನಿಮಗೆ ಅಭ್ಯಂತರವಿಲ್ಲವೆಂದು ಭಾವಿಸುತ್ತೇನೆ."

ಆತನು: "ಇಲ್ಲ, ಯಾವ ಅಡ್ಡಿಯೂ ಇಲ್ಲ; ನಿಮ್ಮ ಹಣವನ್ನು ಆನಂದದಿಂದ ಸ್ವೀಕರಿಸುವೆವು. ಆದರೆ ರಾಮಮೋಹನನ ವಿಚಾರ ಬೇರೆ. ಅವನು ಹಿಂದೂವಾಗಿಯೂ ನಮ್ಮನ್ನೆಲ್ಲ ನಿಂದಿಸುವನು ಮತ್ತು ನಮ್ಮನ್ನೂ ದೂಷಿಸಿ ಬರೆದಿರುವನು."

ರಾಮಮೋಹನರು ಹೊಸ ವಿದ್ಯಾಶಾಲೆಯ ಸ್ಥಾಪನೆಯ ವಿಷಯದಲ್ಲಿ ಬಹುಮುಖ್ಯ ಭಾಗವಹಿಸಿದ್ದು ಯುಕ್ತವಾಗಿಯೇ ಇತ್ತು. ಆದರೆ ಅದು

ಜನರಿಗೆ ಮೊದಲು ತಿಳಿದಿರಲಿಲ್ಲ, ತಿಳಿದಮೇಲೆ ರಾಮಮೋಹನರು ವಿದ್ಯಾಶಾಲೆಯ ನಿರ್ವಾಹಕ ಸಮಿತಿಗಳಲ್ಲಿರಕೂಡದೆಂದು ಮುಖಂಡರು ಹಟ ಹಿಡಿದರು. ರಾಮಮೋಹನರೂ ಅಂಥ ಸಂದರ್ಭ ಒದಗಬಹುದೆಂದು ನಿರೀಕ್ಷಿಸಿದ್ದರು ಡೇವಿಡ್ ಹೇರ್ ರಾಮಮೋಹನರಿಗೆ ಆ ವಿಷಯವನ್ನು ತಿಳಿಸಿದಮೇಲೆ ಅವರು ಸಮಿತಿಯಲ್ಲಿ ಸ್ಥಾನವನ್ನು ಸಂತೋಷದಿಂದ ಬಿಟ್ಟುಬಿಟ್ಟರು ಸಂಸ್ಥೆಯು ಮುಂದುವರಿಯ ಬೇಕಾದುದು ಮುಖ್ಯವೆಂದೂ ತಾವು ಅದರ ನಿರ್ವಾಹದಲ್ಲಿ ಭಾಗವಹಿಸುವುದು ಗೌಣವೆಂದೂ ತಿಳಿದರು ಸ್ವಾರ್ಥಗೌರವವನ್ನು ದೊಡ್ಡದೆಂದೆಣಿಸಿ ಸಂಸ್ಥೆಯ ಬೆಳೆವಣಿಗೆಯನ್ನು ತಡೆಯಲು ರಾಮಮೋಹನರಿಗೆ ಮನಸ್ಸು ಬರಲಿಲ್ಲ ಆದುದರಿಂದ ತಾವಾಗಿಯೇ ಸಮಿತಿಯಿಂದ ದೂರವಾದರು ನಿಜವಾದ ದೇಶಭಕ್ತನ ಮತ್ತು ನಿಃಸ್ವಾರ್ಥಪರನ ಲಕ್ಷಣವಲ್ಲವೆ ಇದು

ಕಲ್ಕತ್ತೆಯಲ್ಲಿ ಇಂಗ್ಲಿಷ್ ಶಾಲೆಯೊಂದು ಈ ರೀತಿಯಲ್ಲಿ ೧೮೧೭ರ ಜನವರಿಯಲ್ಲಿ ಪ್ರಾರಂಭವಾಯಿತು ಅದಕ್ಕೆ "ವಿದ್ಯಾಲಯ", "ಮಹಾಪಾಠಶಾಲೆ", "ಹಿಂದೂಕಾಲೇಜು" ಎಂದು ಬೇರೆ ಬೇರೆಹೆಸರುಗಳಿದ್ದುವು "ಹಿಂದೂ ಕಾಲೇಜು" ಸ್ಥಾಪಿತವಾದ ರೀತಿಯನ್ನು ಕುರಿತ, ಮೇಲಿನ ವಿವರಗಳನ್ನು ಒಳಕೊಂಡ, ಒಂದು ಪತ್ರವನ್ನು ಸರ್ ಎಡ್ವರ್ಡ್ ಅವರೇ ೧೮೧೭ರ ಮೇ ೧೮ನೆಯ ತಾರೀಖಿನಲ್ಲಿ ಲಂಡನ್ನಿನಲ್ಲಿನ ತಮ್ಮ ಸ್ನೇಹಿತರಿಗೆ ಬರೆದಿದ್ದಾರೆ

ಸರ್ ಎಡ್ವರ್ಡ್ ಅವರು ಒಂದುಸಲ ಒಬ್ಬ ತಿಳಿವಳಿಕಸ್ಥ ಬ್ರಾಹ್ಮಣನನ್ನು ಕೇಳಿದರಂತೆ, ರಾಮಮೋಹನರಮೇಲೆ ಜನರಿಗೆ ಅಷ್ಟು ತೀವ್ರ ವಿರೋಧವೇಕೆಂದು ರಾಮಮೋಹನರು ಬ್ರಾಹ್ಮಣರನ್ನು ಬಹಿರಂಗವಾಗಿ ಅಲ್ಲಗಳೆಯುವುದು ಸಮ್ಮತವಲ್ಲವೆಂದೂ ಬ್ರಾಹ್ಮಣರಲ್ಲಿ ನ್ಯೂನತೆಗಳಿದ್ದರೆ ಅವರಿಗೆ ರಹಸ್ಯವಾಗಿ ಬುದ್ಧಿ ಹೇಳಬಹುದೆಂದೂ, ಮತ್ತು ಅನುನಯದಿಂದ ತಿದ್ದಬಹುದೆಂದೂ, ಆ ಬ್ರಾಹ್ಮಣ ಹೇಳಿದನಂತೆ ಮುಖ್ಯವಾಗಿ, ರಾಮಮೋಹನರು ಮಹಮ್ಮದೀಯರ ಸಹವಾಸವನ್ನು ಹೊಂದಿದ್ದುದು ಅವರಿಗೆ ಸಮ್ಮತವಿಲ್ಲವೆಂದೂ ತಿಳಿಸಿದನಂತೆ. ಬ್ರಾಹ್ಮಣರು ರಾಮ

ಮೋಹನರ ವಿನಾ ಇತರು ಯಾರಿಂದಲಾದರೂ ಸುಧಾರಿತರಾಗಲು ಇಷ್ಟ ವುಂಟೆಂದೂ ಸೂಚಿಸಿದನಂತೆ.

ಕ್ರಿಸ್ತ ಶಕ ೧೮೧೬-೧೭ರಲ್ಲಿ ರಾಮಮೋಹನರು ತಾವೇ ಒಂದು ಇಂಗ್ಲಿಷ್ ಪಾಠಶಾಲೆಯನ್ನು ಹಿಂದೂ ವಿದ್ಯಾರ್ಥಿಗಳಿಗಾಗಿ ಕಲ್ಕತ್ತೆಯಲ್ಲಿ ಸ್ಥಾಪಿಸಿದರು. ಮಹಾಜನರು ಸ್ಥಾಪಿಸಿದ ವಿದ್ಯಾಲಯಗಳಲ್ಲಿ ಇದೇ ಮೊದಲನೆಯದು. ಅಲ್ಲಿ ಶಿಕ್ಷಣ ಉಚಿತವಾಗಿತ್ತು. ಸುಮಾರು ೨೦೦ ಮಂದಿ ವಿದ್ಯಾರ್ಥಿಗಳಿದ್ದರು. ಆ ಪಾಠಶಾಲೆಯ ಎಲ್ಲ ವೆಚ್ಚವನ್ನೂ ರಾಮ ಮೋಹನರೇ ವಹಿಸಿದ್ದರು. ಕೆಲವು ದಿನಗಳಲ್ಲಿಯೇ ತಮ್ಮ ಮನೆಯಲ್ಲಿಯೇ ಇಂಗ್ಲಿಷ್ ತರಗತಿಯೊಂದನ್ನು ಸ್ಥಾಪಿಸಿದರು. ಇಂಗ್ಲಿಷ್ ಪಾಠಶಾಲೆಯಲ್ಲಿ ಬಹಳ ಉತ್ತಮರಾಗಿದ್ದ ವಿದ್ಯಾರ್ಥಿಗಳನ್ನು ಆ ತರಗತಿಗೆ ವರ್ಗಮಾಡ ಲಾಯಿತು. ಕ್ರಿ. ಶ. ೧೮೨೨ ರಲ್ಲಿ ಕಲ್ಕತ್ತೆಯ ಮತ್ತೊಂದು ಭಾಗದಲ್ಲಿ ನಿವೇಶವನ್ನು ಕೊಂಡು ಅಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪಿಸಿದರು. ಅದಕ್ಕೆ "ಆಂಗ್ಲೊ-ಹಿಂದೂ ಪಾಠಶಾಲೆ" ಎಂದು ಹೆಸರಾಯಿತು. ಅದರ ವೆಚ್ಚದಲ್ಲಿ ರಾಮಮೋಹನರೇ ಹೆಚ್ಚು ಭಾಗವನ್ನು ವಹಿಸುತ್ತಿದ್ದರು. ಅವರ ಕೆಲವು ಸ್ನೇಹಿತರೂ ಸ್ವಲ್ಪಮಟ್ಟಿಗೆ ಧನಸಹಾಯ ಮಾಡುತ್ತಿದ್ದರು. ಮಹರ್ಷಿ ದೇವೇಂದ್ರನಾಥ ಠಾಕೂರರು ಆ ಪಾಠಶಾಲೆಯಲ್ಲಿ ವಿದ್ಯೆ ಕಲಿತವರು. ರಾಮಮೋಹನರ ಮಗ ರಾಮಪ್ರಸಾದನು ಅವರ ಸಹಪಾಠಿ ಯಾಗಿದ್ದನು. ರಾಮಮೋಹನರು ವಿದೇಶಕ್ಕೆ ತೆರಳಿದಾಗ ಆ ಪಾಠಶಾಲೆಯ ವಿಚಾರಣೆಯು ಅವರ ಕೈ ತಪ್ಪಿತು.

ಆಗಿನ ಭರತವರ್ಷದ ದುರಾಚಾರಗಳಲ್ಲಿ ಸಹಗಮನ ಪದ್ಧತಿಯು, ಎಂದರೆ ಗಂಡನು ಸ್ವರ್ಗಸ್ಥನಾದರೆ ಹೆಂಡತಿಯೂ ಅವನನ್ನೇ ಅನುಸರಿಸಿ ಚಿತೆಯನ್ನು ಹತ್ತುವುದು, ಒಂದು ಮುಖ್ಯವಾಗಿತ್ತು. ಹೀಗೆ ಸಹಗಮನ ವನ್ನನುಸರಿಸಿದವರ ಸಂಖ್ಯೆಯು ೧೮೧೫ ರಿಂದ ೧೮೧೮ ರ ವೇಳೆಗೆ ಬಹಳ ಹೆಚ್ಚಿತ್ತು, ಎಂದರೆ ೨೩೬೫ ಜನರು ಈ ಚಿತ್ರಹಿಂಸೆಗೆ ತುತ್ತಾಗಿದ್ದರು. ಇದ ರಲ್ಲಿ ಕಲ್ಕತ್ತೆಯೊಂದರಲ್ಲಿಯೇ ೧೫೨೮ ಜನರು ಈ ಕ್ರೂರಕರ್ಮಕ್ಕೆ ಒಳ ಗಾಗಿದ್ದರು. ಈ ನಿಸ್ತ್ರಿಂಶ ಹಿಂದೂವಿಧಿಯು ಬ್ರಿಟಿಷರ ಗಮನಕ್ಕೆ ೧೭೮೯ರ

ವೇಳೆಗೇ ಬಂದಿತ್ತು ಆಗ ಅದನ್ನು ತಡೆಯಲು ಫಲಕಾರಿಯಾದ ಪ್ರಯತ್ನಗಳು ಹೆಚ್ಚು ನಡೆಯದಿದ್ದರೂ ೧೮೧೩ರ ವೇಳೆಗೆ ಕೆಲವು ಪ್ರತಿಬಂಧಕ ಕಾನೂನುಗಳೇರ್ಪಟ್ಟುವು ಅಲ್ಲಿಂದ ಮುಂದೆ ೧೮೧೫ರಲ್ಲಿ ಮತ್ತೆ ಕೆಲವು ನಿಬಂಧನೆಗಳಾಗಿ ೧೮೧೭ರಲ್ಲಿ ಎಲ್ಲ ವಿಧಿಗಳೂ ಒಟ್ಟಿನಲ್ಲಿ ಜಾರಿಗೆ ಬಂದುವು. ಇದರಿಂದ ಸಂಪ್ರದಾಯ ಹಿಂದೂ ಪಂಗಡಗಳಲ್ಲಿ ಕ್ಷೋಭೆ ಹುಟ್ಟಿತು ಆ ನಿಬಂಧನೆಗಳನ್ನು ರದ್ದುಮಾಡಬೇಕೆಂದು ಬೇಡುವ ಒಂದು ಬಿನ್ನಹವು ಸರ್ಕಾರವನ್ನು ಮುಟ್ಟಿತು ಸಹಗಮನ ನಿರೋಧ ನಿಬಂಧನೆಗಳನ್ನು ರದ್ದುಮಾಡಕೂಡದೆಂದು ರಾಮಮೋಹನರೂ ಅವರ ಸ್ನೇಹಿತರೂ ಸಿದ್ಧಮಾಡಿದ ಪ್ರತಿಪಕ್ಷದ ಪ್ರಾರ್ಥನಾ ಪತ್ರಿಕೆಯೂ ೧೮೧೮ರ ಆಗಸ್ಟ್ ತಿಂಗಳಲ್ಲಿ ಸರಕಾರದ ಕೈಸೇರಿತು ಸಹಗಮನದ ವಿಚಾರವಾಗಿ ಆ ಪ್ರಾರ್ಥನೆಯಲ್ಲಿ ಹೀಗೆ ಬರೆದಿತ್ತು

" ಗಂಡಂದಿರೊಂದಿಗೆ ಸ್ತ್ರೀಯರು ಸಾಯುವುದರಿಂದ ಲಾಭ ಹೊಂದುವ ಬಂಧುಗಳೂ ಇತರರೂ ಸ್ತ್ರೀಯರನ್ನು ಸಹಗಮನಕ್ಕೆ ಪ್ರೇರಿಸುವ ಸಂದರ್ಭಗಳು ಅನೇಕ ಒದಗಿರುವುದೆಂಬುದು ಈ ಬಿನ್ನಹದ ಲೇಖಕರಿಗೆ ಸ್ವಂತ ಅನುಭವದಿಂದಲೂ ಇತರರ ಅನುಭವಗಳಿಂದಲೂ ತಿಳಿದಿದೆ. ಇನ್ನು ಕೆಲವು ಸಂದರ್ಭಗಳಲ್ಲಿ, ದುಃಖದ ಆವೇಗದ ಮೊದಲಲ್ಲಿ ಸಹಗಮನ ಮಾಡುವುದಾಗಿ ಮಾಡಿದ ಸಂಕಲ್ಪದಿಂದ ಹೆದರಿ ಹಿಮ್ಮೆಟ್ಟುವವರನ್ನು ನಿರ್ಬಂಧವಾಗಿ ಚಿತೆಯಮೇಲಿರಗೊಡಿಸಿ, ಹಗ್ಗಗಳಿಂದ ಅವರನ್ನು ಚಿತೆಗೆ ಕಟ್ಟಿ, ಬೆಂಕಿಯು ಅವರನ್ನು ದಹಿಸುವ ವರೆಗೂ ಗಳಗಳಿಂದ ಒತ್ತಿ ಹಿಡಿಯುವರು ಕೆಲವರು ಯಾರಾದರೂ ಉರಿಯಿಂದ ತಪ್ಪಿಸಿಕೊಂಡು ಓಡಿಹೋದಲ್ಲಿ ಅಂತಹವರನ್ನು ಅವರ ಬಂಧುಗಳು ಕಟ್ಟಿ ತೆಗೆದುಕೊಂಡು ಹೋಗಿ ಸುಡುವರು ಈ ಎಲ್ಲ ನಡೆವಳಿಕೆಗಳೂ ಎಲ್ಲ ಶಾಸ್ತ್ರಗಳ ರೀತಿಯಿಂದಲೂ, ಎಲ್ಲ ರಾಜ್ಯಗಳ ವಿವೇಕ ದೃಷ್ಟಿಯಿಂದಲೂ ಕೊಲೆಗೆ ಸಮವಾಗತಕ್ಕದ್ದು ”

ಈ ಬಿನ್ನಹದ ಭಾಷೆಯು ತೀಕ್ಷ್ಣವಾಗಿತ್ತು ಸಹಗಮನದ ವಿಷಯದಲ್ಲಿ ಬ್ರಿಟಿಷ್ ಸರಕಾರವು ಮತ್ತೆ ಕೆಲವು ನಿಬಂಧನೆಗಳನ್ನು

ಜಾರಿಗೆ ತರಬೇಕೆಂದು ಬಿನ್ನಹದ ಲೇಖಕರು ಪ್ರಾರ್ಥಿಸಿದರು. ಈ ವಿಷಯದಲ್ಲಿ ರಾಮಮೋಹನರ ಪ್ರಯತ್ನಗಳು ಇಲ್ಲಿಂದ ಮುಂದೆ ಸ್ಪಷ್ಟವಾಗಿ ಕಾಣುವುವು. ಅವರು ಕಲ್ಕತ್ತೆಯ ಸ್ಮಶಾನಕ್ಕೆ ಹೋಗಿ ಸಹಗಮನವನ್ನು ನಿಲ್ಲಿಸಬೇಕೆಂದು ಅಲ್ಲಿ ಧೈರ್ಯದಿಂದ ಬೇಡಿಕೊಳ್ಳುತ್ತಿದ್ದರು. ಇದರಿಂದ ರಾಮಮೋಹನರು ಆ ಸ್ತ್ರೀಯರ ಬಂಧುಗಳ ಅಸಮಾಧಾನ ನಿಂದೆಗಳಿಗೆ ಪಾತ್ರರಾಗುತ್ತಿದ್ದರು. ರಾಮಮೋಹನರು ಸಹಗಮನದ ಪಕ್ಷ ಪ್ರತಿಪಕ್ಷಗಳನ್ನು ಕುರಿತು ವಿಚಾರಮಾಡಿ ೧೮೧೮ ರಲ್ಲಿ ಒಂದು ಪ್ರಬಂಧವನ್ನು ಬರೆದರು. ಅದನ್ನು ಮೊದಲು ಬಂಗಾಳಿಯಲ್ಲಿ ಬರೆದು ಬಹಳ ಹೆಚ್ಚಾಗಿ ಹಂಚಿದ ಮೇಲೆ ಇಂಗ್ಲಿಷಿಗೆ ಭಾಷಾಂತರಿಸಿದರು. ಮತ್ತೊಂದು ಪ್ರಬಂಧವನ್ನು ೧೮೨೦ ರಲ್ಲಿ ಬಂಗಾಳಿಯಲ್ಲಿ ಬರೆದರು. ಅದರ ಇಂಗ್ಲಿಷ್ ಭಾಷಾಂತರವನ್ನು ಆಗಿನ ಗವರ್ನರ್ ಜನರಲ್ ಅವರ ಹೆಂಡತಿ ಸತಿ ಹೇಸ್ಟಿಂಗ್ಸ್ ಅವರಿಗೆ ಅರ್ಪಿಸಿದರು. ಈ ಪ್ರಬಂಧಗಳ ಮುಖ್ಯ ಉದ್ದೇಶವು ದೇಶೀಯರಿಗೆ ಈ ವಿಚಾರದಲ್ಲಿ ಹಿಂದೂ ಶಾಸ್ತ್ರಗಳ ಉಪದೇಶವನ್ನು ತಿಳಿಸುವುದೂ, ಆಳುವವರಿಗೆ ಈ ಕ್ರೂರ ಪದ್ಧತಿಯ ಸ್ವಭಾವವನ್ನು ತಿಳಿಸುವುದೂ, ಆಗಿತ್ತು. ಈ ಉದ್ದೇಶದಿಂದ ಹುಟ್ಟಿದ ಎರಡು ಪ್ರಬಂಧಗಳೂ ಪರಿಣಾಮಕಾರಿಯಾದುವು.

ಈ ಲೇಖನಗಳು ರಾಮಮೋಹನರನ್ನು ಮತ್ತಷ್ಟು ದ್ವೇಷ, ನಿಂದೆಗಳಿಗೆ ಗುರಿಮಾಡಿದುವು. ಅದೇ ಸಮಯದಲ್ಲಿ ದಕ್ಷಿಣ ಭಾರತದ ವೈದಿಕ ಶಿಖಾಮಣಿಯಾದ ಸುಬ್ರಹ್ಮಣ್ಯ ಶಾಸ್ತ್ರಿಯ ಜೊತೆಯಲ್ಲಿ ರಾಮಮೋಹನರು ಶಾಸ್ತ್ರವಿಚಾರದ ಮೇಲೆ ಚರ್ಚೆ ನಡೆಸಬೇಕಾಯಿತು. ಆತನ ವಾದವೇನೆಂದರೆ ಬಂಗಾಳದಲ್ಲಿ ಉತ್ತಮ ವರ್ಗದ ಬ್ರಾಹ್ಮಣರು ಇಲ್ಲದುದರಿಂದ ವೇದವನ್ನು ಬಂಗಾಳಿಯಲ್ಲಿ ಓದಬಾರದೆಂದು. ಚರ್ಚೆಯು ಬಹಿರಂಗವಾಗಿಯೇ ನಡೆಯುವುದಾಯಿತು; ರಾಮಮೋಹನರು ಅದನ್ನು ಸಂತೋಷದಿಂದ ಒಪ್ಪಿಕೊಂಡರು. ಕಲ್ಕತ್ತೆಯಲ್ಲಿ ಬಿಹಾರಿಲಾಲ್ ಚೌಧುರಿಯ ಮನೆಯಲ್ಲಿ ಜನಸಂದಣಿ ಸೇರಿತು. ಅಲ್ಲಿ ವೈದಿಕ ಮಂಡಲಿಯ ನಾಯಕನಾದ ರಾಜಾರಾಧಾಕಾಂತ ದೇವನೂ ಬಂದು ಸೇರಿ ಅಲ್ಲಿನ ನಡೆವಳಿಕೆಗಳನ್ನು ನೋಡಿದನು. ಇತರ ಪಂಡಿತರೂ, ವಿದ್ವಾಂಸರೂ, ವೈದಿಕರೂ ಆ ಸಭೆಯನ್ನು ಮಂಡಿಸಿದ್ದರು. ರಾಮಮೋಹನರ ಬುದ್ಧಿ ನೈಪುಣ್ಯವು

ಅಮೋಘವಾದುದು, ಅದನ್ನು ಎದುರಿಸಲು ತಕ್ಕವರು ಯಾರೂ ಇರಲಿಲ್ಲ ಸುಬ್ರಹ್ಮಣ್ಯಶಾಸ್ತ್ರಿಯು ತಾನಾಗಿಯೇ ತನ್ನ ಪರಾಜಯವನ್ನು ಒಪ್ಪಿಕೊಂಡನು ಈ ಸಮಾಚಾರವು ದೇಶದಲ್ಲೆಲ್ಲ ಕಾಳ್ಗಿಚ್ಚಿನಂತೆ ಹರಡಿತು ಇದರಿಂದ ಸಂಪ್ರದಾಯ ಸಂಗಡದ ದ್ವೇಷವು ಮತ್ತಷ್ಟು ಹೆಚ್ಚಿತು ಹೀಗೆಯೇ ಭಟ್ಟಾಚಾರ್ಯ, ಗಿರೀಸ್ವಾಮಿ, ಕಾಶೀಸ್ವಾಮಿ, ತರ್ಕ ಪಂಚಾನನ ಮೊದಲಾದವರು ಪೂಜ್ಯ ಋಷಿಗಳಿಂದ ಪ್ರಣೀತವಾದ ವೇದಗಳಿಗೆ ರಾಮ ಮೋಹನರು ಅಪಾರ್ಥವನ್ನು ಕಲ್ಪಿಸುತ್ತಲೂ ಅಪಪ್ರಚಾರ ಮಾಡುತ್ತಲೂ ಇರುವರೆಂದು ಆಕ್ಷೇಪಿಸಿದರು ಅದರಲ್ಲಿ ಕೆಲವರು ಪ್ರತ್ಯಕ್ಷವಾದಿಸಿದರು, ಕೆಲವರು ಪತ್ರಿಕೆಗಳಲ್ಲಿ ಚರ್ಚೆ ನಡೆಸಿದರು ಆದರೆ ರಾಮಮೋಹನರು, ತಮ್ಮ ಶಾಸ್ತ್ರ ವಿದ್ಯಾಪಾರಂಗತೆಯಿಂದ, ಎಲ್ಲರ ಮತತರ್ಕಗಳಿಗೂ ಶ್ರುತಿ ಸಮ್ಮತವಾದ ಉತ್ತರಗಳನ್ನು ಕೊಡುತ್ತ, ಎದುರಾಳಿಗಳ ಬಾಯಿ ಭದ್ರಿಸಿ ತಮ್ಮ ಜಯಪತಾಕೆಯನ್ನು ಪಿಜೃಂಭಿಸಿದರು ಸನಾತನ ಸಂಪ್ರದಾಯ ಪಂಡಿತರೊಂದಿಗೆ ಚರ್ಚೆ ನಡಸುವಾಗ ಅವರು ಸ್ವಲ್ಪವೂ ಆಕ್ರೋಶಕ್ಕೆ ಎಡೆಗೊಡದೆ ತಮ್ಮ ವಿದ್ಯಾಸಂಪನ್ನತೆಗೆ ಭೂಷಣಪ್ರಾಯ ಎಂಬಂತೆ ತಮ್ಮ ಪ್ರತ್ಯುತ್ತರ ಸಮಾಧಾನಗಳನ್ನು ಬಹುವಿನಯ ಮರ್ಯಾದೆಗಳಿಂದಲೇ ಸಲ್ಲಿಸುತ್ತಿದ್ದರು ಆ ಸಂದರ್ಭಗಳಲ್ಲಿ ಅವರು ತೋರ್ಪಡಿಸಿದ ಸ್ಥೈರ ಣೆಯೂ ಗಾಂಭೀರ್ಯವೂ ಸ್ತೋತ್ರಾರ್ಹವಾಗಿವೆ

ರಾಮಮೋಹನರು ಬಹುದೇವತಾಪೂಜೆ, ವಿಗ್ರಹಾರಾಧನೆ, ಮೂಢ ನಂಬಿಕೆಗಳು ಮೊದಲಾದ ಮತಾಚಾರ ವಿಷಯಗಳಲ್ಲಿ ಒಡ್ಡಿದ ಲೇಖನಗಳ ಮತ್ತು ಚರ್ಚೆಗಳ ಬಿರುಗಾಳಿಯಿಂದ, ತೀವ್ರ ಸಂಪ್ರದಾಯ ಪಕ್ಷದವರ ಮನಸ್ಸೂ ಕೂಡ ವಿಕಾಸಗೊಂಡು, ಅವರ ವಾದಗಳ ಸಾಧುತ್ವ ವನ್ನು ಅಂಗೀಕರಿಸುವಂತಾಯಿತು "ಕಲ್ಕತ್ತೆಯ ಮಾಸಿಕ ಪತ್ರಿಕೆ" ಯ ೧೮೧೭ ರ ಡಿಸೆಂಬರ್ ಸಂಚಿಕೆಯಲ್ಲಿ ವರದಿಯಾಗಿರುವ ಒಂದು ಸಂದ ರ್ಭವು ಇದಕ್ಕೆ ನಿದರ್ಶನವಾಗಿದೆ ರಾಧಾಮೋಹನನೆಂಬ ವಿದ್ವಾಂಸನು ದುರ್ಗಾ ಪೂಜೆಯ ಕೊನೆಯ ದಿನ, ತನ್ನ ಮುದಿತನದಲ್ಲಿ, ಶಾಂತಿಪುರದಲ್ಲಿ ಮೃತನಾದನಂತೆ. ಅವನು ಮರಣ ಹೊಂದುವ ಮುಂಚೆ ವೇದಾಂತ ತತ್ತ್ವವನ್ನು ಅಂಗೀಕರಿಸಿದುದಾಗಿ ಬಹಿರಂಗವಾಗಿ ಒಪ್ಪಿಕೊಂಡನಂತೆ,

ಇದು ವಿಗ್ರಹಾರಾಧಕರಿಗೆಲ್ಲ ಅವಮಾನವುಂಟುಮಾಡಿತು. ಅವನ ಬಂಧುಗಳು ಅವನನ್ನು ನದಿಯ ದಡಕ್ಕೆ ಕರೆದೊಯ್ದು ಪದ್ಧತಿಯಂತೆ ತುಲಸಿಗಿಡವನ್ನು ಅವನ ದುರಿಗಿಟ್ಟರಂತೆ; ಗಂಗಾನದಿಯ ಮೃತ್ತಿಕೆಯಿಂದ ಅವನ ದೇಹದ ಮೇಲೆ ಶ್ರೀ ಕೃಷ್ಣನ ಹೆಸರು ರಚಿಸಿದರಂತೆ; ಗಂಗಾ, ನಾರಾಯಣ, ಕೃಷ್ಣ ಎಂದು ಹೆಸರುಗಳನ್ನು ಉಚ್ಚರಿಸಬೇಕೆಂದು ಅವನನ್ನು ಒತ್ತಾಯ ಪಡಿಸಿದರಂತೆ. ರಾಧಾಮೋಹನನು ಅವರನ್ನು ತಡೆದು ತುಲಸೀ ಗಿಡವನ್ನು ದೂರ ತಗೆದುಕೊಂಡು ಹೋಗುವಂತೆ ಹೇಳಿದನಂತೆ. ಅಂಥ ಆಚಾರಗಳು ಮೌಢ್ಯದ ಪರಮಾವಧಿಯೆಂದೂ, ಭಗವಂತನ ಮಹಿಮೆಯನ್ನು ಅಲ್ಲಗಳೆಯುವುವೆಂದೂ ತಿಳಿಸಿದನಂತೆ.

ರಾಮಮೋಹನರ ಸಮಾಜ ಪರಿಷ್ಕರಣ ಕಾರ್ಯದ ವ್ಯಾಪನೆ ಎಷ್ಟರಮಟ್ಟಿಗಿತ್ತೆಂಬುದನ್ನು ತಿಳಿಸತಕ್ಕ ಮತ್ತೊಂದು ಸಂದರ್ಭವು ಗಿಲ್ಬರ್ಟರಲ್ಲಿ ನ್ಯಾಯಸ್ಥಾನವೊಂದರಲ್ಲಿ ನಡೆಯಿತು. ಒಂದು ವ್ಯವಹಾರದಲ್ಲಿ ಸಾಕ್ಷಿ ಹೇಳುವುದಕ್ಕೆಂದು ಒಬ್ಬ ಯುವಕನು ನ್ಯಾಯಸ್ಥಾನಕ್ಕೆ ಬರಲು ಅಲ್ಲಿನ ಅಧಿಕಾರಿ ಅವನಿಗೆ ಪದ್ಧತಿಯಂತೆ ಪವಿತ್ರವಾದ ಗಂಗೆಯ ಹೆಸರಿನಲ್ಲಿ ಪ್ರಮಾಣ ಮಾಡಬೇಕೆಂದು ಹೇಳಿದನು. ಆ ಯುವಕನು ಅದಕ್ಕೆ ಸ್ವಲ್ಪವೂ ಒಪ್ಪಲಿಲ್ಲ. ಅದಕ್ಕೆ ಕಾರಣವನ್ನು ವಿಚಾರಿಸಲಾಗಿ ತಾನು ರಾಮಮೋಹನರ ಅನುಯಾಯಿ ಆದುದರಿಂದ ಊಹಾಮಾತ್ರವಾಗಿದ್ದ ಗಂಗಾನದಿಯ ಪವಿತ್ರತೆಯಲ್ಲಿ ತನಗೆ ನಂಬಿಕೆಯಿಲ್ಲವೆಂದು ಹೇಳಿದನಂತೆ. ಆ ಮೇಲೆ ಅವನು ಹೇಳಿದ ಸಾಕ್ಷ್ಯವನ್ನು ಸತ್ಯವಾಗಿ ಹೇಳಿದ್ದು ಎಂದೇ ವರದಿ ಬರೆದುಕೊಂಡರಂತೆ. ನ್ಯಾಯಸ್ಥಾನದಲ್ಲಿ, ಬಹಿರಂಗಸ್ಥಳದಲ್ಲಿ, ಹೀಗೆ ತನ್ನ ಆತ್ಮವನ್ನು ವಂಚಿಸದೆ ಮನಸ್ಸಾಕ್ಷಿಯಾಗಿ ನುಡಿದ ಧೈರ್ಯಶಾಲಿಯಾದ ಯುವಕನ ಹೆಸರು ರಸಿಕ್ ಕೃಷ್ಣ ಎಂದು. ಜನಸಾಮಾನ್ಯದ ಮನಸ್ಸು ಬುದ್ಧಿಗಳು ಸಾಮಾಜಿಕ ವಿಚಾರಗಳಲ್ಲಿ ರಾಮಮೋಹನರ ಉಪದೇಶಗಳಿಂದ, ಲೇಖನಗಳಿಂದ, ಎಷ್ಟರಮಟ್ಟಿಗೆ ವಿಕಾಸಗೊಂಡಿತ್ತೆಂಬುದಕ್ಕೆ ಇದೊಂದು ದೊಡ್ಡ ನಿದರ್ಶನವಾಗಿದೆ.-

---

# ಪ್ರಕರಣ ೫

## ಕ್ರೈಸ್ತಮತಾಭಿಮಾನ—ವಾದವಿವಾದಗಳು

ರಾಮಮೋಹನರು ಚಿಕ್ಕಂದಿನಲ್ಲಿ ಅರಬ್ಬಿ ಪಾರ್ಸಿ ಸಂಸ್ಕೃತಿಗಳಿಂದ ಪ್ರೇರಿತರಾಗಿ, ಕೊರಾನನ್ನು ಓದಿ ಇಸ್ಲಾಂ ಮತ ತತ್ತ್ವಗಳನ್ನು ತಿಳಿದುಕೊಂಡಿದ್ದರು. ಆಮೇಲೆ ಕಾಶಿಯಲ್ಲಿ ಸಂಸ್ಕೃತ ವ್ಯಾಸಂಗಮಾಡಿ ಹಿಂದೂ ಮತದ ಸಾರವನ್ನು ಗ್ರಹಿಸಿದ್ದರು. ಹೀಗೆ ಅಭ್ಯಾಸಮಾಡಿದ ಹಿಂದೂ ಮತ ತತ್ತ್ವಗಳನ್ನು ಜನರಲ್ಲಿ ಪ್ರಚಾರಮಾಡಿ ಆಗ ರೂಢಿಯಲ್ಲಿದ್ದ ಆಚಾರ ವ್ಯವಹಾರಗಳಿಗೂ ಶಾಸ್ತ್ರವಿಧಿಗೂ ಇದ್ದ ಅಂತರವನ್ನು ವ್ಯಕ್ತಪಡಿಸಿದ್ದರು. ಇದರಿಂದ ಜನರ ನಿಂದೆಗೂ ಹಾಸ್ಯಕ್ಕೂ ದ್ವೇಷಕ್ಕೂ ಪಾತ್ರರಾಗಿದ್ದರೆಂದು ಹಿಂದೆ ತಿಳಿಸಿದೆ. ರಾಮಮೋಹನರು ಇಂಗ್ಲಿಷನ್ನು ಕಲಿತಮೇಲೆ ಕ್ರೈಸ್ತಮತ ಗ್ರಂಥವಾದ ಬೈಬಲ್ಲನ್ನು ಓದಿದರು. ಆ ಮತ ತತ್ತ್ವಗಳನ್ನು ಗ್ರಹಿಸಿದ ಮೇಲೆ ಆ ಮತದಲ್ಲಿ ಅವರಿಗೆ ವಿಶೇಷ ಮೆಚ್ಚಿಕೆಯೂ ಆ ಮತ ಸ್ಥಾಪಕನಾದ ಯೇಸು ಕ್ರಿಸ್ತನ ವಿಷಯದಲ್ಲಿ ಹೆಚ್ಚಿನ ಗೌರವವೂ ಹುಟ್ಟಿದುವು. ಹೀಗೆ ಪ್ರಪಂಚದ ಮೂರು ಮುಖ್ಯ ಮತ ತತ್ತ್ವಗಳು ಅವರ ಅರಿವಿಗೆ ಬಂದುದರಿಂದ ಆ ಮತಗಳನ್ನು ಒಂದರೊಡನೆ ಒಂದನ್ನು ಹೋಲಿಸಿ, ಅವುಗಳಲ್ಲಿನ ಕುಂದು ಕೊರತೆಗಳನ್ನು ಮನಗಾಣಲು ಅವಕಾಶವಾಯಿತು. ಹೀಗೆ ಸೂಕ್ಷ್ಮದೃಷ್ಟಿಯ ವಿಮರ್ಶೆಯಿಂದ ಇಸ್ಲಾಂ, ಹಿಂದೂ ಮತ್ತು ಕ್ರೈಸ್ತಮತಗಳು ದೇವರೊಬ್ಬನೇ ಎಂದು ಸಾರುತ್ತಿದ್ದರೂ ಹಿಂದೂಗಳು ತಮ್ಮ ಮತದ ನಿಯಮವನ್ನು ತಿಳಿಯದೆ ಅಸಂಖ್ಯಾತ ದೇವದೇವತೆಗಳ ಪೂಜೆಯಲ್ಲಿ ನಿರತರಾಗಿದ್ದುದನ್ನು ನೋಡಿ ಆಶ್ಚರ್ಯಪಟ್ಟರು.

ಕ್ರೈಸ್ತಮತದಲ್ಲಿ ತಮಗುಂಟಾದ ಮೆಚ್ಚಿಕೆ ಮಮತೆಗಳನ್ನು ಡಿಗ್ಬಿಯವರಿಗೆ ೧೮೧೭ ರಲ್ಲಿ ಬರೆದ ಪತ್ರದಲ್ಲಿ "ನಾನು ಬಹುಕಾಲದಿಂದ ಸ್ವತಂತ್ರ

ವಾಗಿ ಕೈಗೊಂಡಿರುವ ಮತ ತತ್ತ್ವಗಳ ಪರಿಶೀಲನೆಯ ಫಲವಾಗಿ ಕ್ರೈಸ್ತಮತ ತತ್ತ್ವಗಳು, ನನಗೆ ತಿಳಿದಮಟ್ಟಿಗೆ, ಮನುಷ್ಯನ ನೀತಿಯುಕ್ತ ನಡತೆಗೆ ಹೆಚ್ಚು ಪ್ರಯೋಜನಕರವೆಂದೂ, ವಿವೇಚನಾಪರರ ಆಚರಣೆಗೆ ಉಪಯೋಗವಾದುದೆಂದೂ, ಮನಃಪೂರ್ವಕವಾಗಿ ನಂಬಿದ್ದೇನೆ.'' ಎಂದು ತಿಳಿಸಿದ್ದರು. ಅವರು ಬರೆದ ಕೇನ ಉಪನಿಷತ್ತಿನ ಮುನ್ನುಡಿಯಿಂದಲೇ ಏಸುವಿನ ವಿಚಾರವಾಗಿಯೂ ಕ್ರೈಸ್ತ ಮತದ ವಿಚಾರವಾಗಿಯೂ ಅವರು ಹೆಚ್ಚು ವ್ಯಾಸಂಗಮಾಡುತ್ತಿದ್ದರೆಂದು ವ್ಯಕ್ತವಾಗುವುದು. ಬೈಬಲ್ಲನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಅದರ ಮಾತೃಕೆಗಳನ್ನು ವ್ಯಾಸಂಗಮಾಡಬೇಕಾಯಿತು. ಆ ಮಾತೃಕೆಗಳು ಹೀಬ್ರು, ಗ್ರೀಕ್, ಲ್ಯಾಟಿನ್ ಭಾಷೆಗಳಲ್ಲಿರುವುದರಿಂದ ಆ ಭಾಷೆಗಳನ್ನೂ ಕಲಿಯಬೇಕಾಯಿತು. ಅವನ್ನು ಬಹು ಸ್ವಲ್ಪ ಕಾಲದಲ್ಲಿಯೇ ಕಲಿತು ಕ್ರೈಸ್ತಮತ ತತ್ತ್ವಗಳನ್ನು ಸಂಗ್ರಹಿಸಿದರು. ಆ ಮತ ತತ್ತ್ವಗಳನ್ನು ಮೆಚ್ಚಿ ಅವನ್ನು ಜನರಲ್ಲಿ ಪ್ರಚಾರಮಾಡಲು "ಹೊಸ ಒಡಂಬಡಿಕೆ"ಯಲ್ಲಿನ ಅನೇಕ ಮುಖ್ಯ ಭಾಗಗಳನ್ನು ಆರಿಸಿ "ಏಸುವಿನ ಉಪದೇಶಾವಳಿ—ಶಾಂತಿಸೌಖ್ಯಗಳಿಗೆ ಮಾರ್ಗ'' ಎಂಬ ಗ್ರಂಥವನ್ನು ೧೮೨೦ ರಲ್ಲಿ ಸಿದ್ಧಮಾಡಿದರು. ಏಸುವಿನ ಪ್ರಸಿದ್ಧ ಅನುಯಾಯಿಗಳಾಗಿ ಸಾಧುಗಳಾದ ಜಾನ್, ಪಾಲ್, ಮ್ಯಾತ್ಯೂಸ್, ಲ್ಯೂಕ್, ಇವರ ಸುವಾರ್ತೆಗಳಿಂದ ಆರಿಸಿದ್ದುವು ಅದು. ರಾಮಮೋಹನರ ಗ್ರಂಥಗಳಲ್ಲಿ ಇದು ಒಂದು ಮುಖ್ಯವಾದುದು. ಇದನ್ನು ಸಂಗ್ರಹಿಸುವುದರಲ್ಲಿ ರಾಮಮೋಹನರ ಉದ್ದೇಶವೇನೆಂಬುದನ್ನು ಮೇಲೆ ಹೇಳಿದ 'ಉಪದೇಶಾವಳಿ' ಯ ಮುನ್ನುಡಿಯಲ್ಲಿ ತಿಳಿಸಿರುವರು:—

"ಹೊಸ ಒಡಂಬಡಿಕೆ"ಯಲ್ಲಿನ ನೀತಿ ತತ್ತ್ವಗಳನ್ನು ಇತರ ವಿಷಯಗಳಿಂದ ಬೇರೆ ಮಾಡುವುದರಿಂದ ಆ ನೀತಿ ತತ್ತ್ವಗಳು ಭಿನ್ನಪಂಥಗಳನ್ನು ಅನುಸರಿಸುವ ಮತ್ತು ಬುದ್ಧಿ ಶಕ್ತಿಯ ಬೇರೆಬೇರೆ ಮಟ್ಟಗಳಲ್ಲಿನ ಜನರ ಮನಸ್ಸು ಬುದ್ಧಿಗಳನ್ನು ಉತ್ತಮಗೊಳಿಸುವ ಪ್ರಿಯವಾದ ಫಲಕ್ಕೆ ಹೆಚ್ಚು ಸಹಕಾರಿಯೆಂಬುದು ನನ್ನ ದೃಢವಾದ ನಂಬಿಕೆ. ಏಕೆಂದರೆ, ಆ ಮತ ಗ್ರಂಥದ ಐತಿಹಾಸಿಕ ಮತ್ತು ಇತರ ಭಾಗಗಳು ವಿಚಾರವಾದಿಗಳಿಗೂ ಕ್ರೈಸ್ತರಲ್ಲದವರಿಗೂ ಸಂದೇಹ ಚರ್ಚೆಗಳಿಗೆ ಎಡೆ ಕೊಡುವುದಲ್ಲದೆ ಅದರಲ್ಲಿನ ಪವಾಡ ಕಥೆಗಳು ಅವರ ಗೌರವಕ್ಕೆ ಯೋಗ್ಯವಾಗದಿರಬಹುದು. ಆದರೆ ನೀತಿ ತತ್ತ್ವಗಳು, ಮಾನವ ವರ್ಗದ ಶಾಂತಿ ಸೌಖ್ಯ

ರ್ದಗಳಿಗೆ ಸಹಕಾರಿಗಳಾಗಿರುವುದರಿಂದ, ಆಧ್ಯಾತ್ಮಿಕ ತತ್ತ್ವಗಳ ವಿಪರೀತಕ್ಕೆ ಎಡೆಗೊಡದೆ, ಪಂಡಿತರಿಗೂ ಪಾಮರರಿಗೂ ಏಕರೀತಿಯಲ್ಲಿ ಗ್ರಾಹ್ಯವಾಗುವುವು ಈ ಸುಲಭವೂ ಸರಳವೂ ಆದ ಮತ ತತ್ತ್ವವೂ ನೀತಿಯೂ ಒಬ್ಬನೇ ಆದ ದೇವರ ವಿಷಯದಲ್ಲಿ—ಯಾವ ದೇವರು ಮತ, ಅಂತಸ್ತು, ಐಶ್ವರ್ಯ ಈ ವ್ಯತ್ಯಾಸಗಳಿಲ್ಲದೆ ಎಲ್ಲ ಪ್ರಾಣಿಗಳನ್ನೂ ಬದಲಾವಣೆ, ನಿರಾಶೆ, ದುಃಖ ಮರಣಗಳಿಗೆ ಈಡು ಮಾಡಿರುವನೋ ಮತ್ತು ಹಾಗೆಯೇ ಪ್ರಕೃತಿಯಲ್ಲಿ ಸಮೃದ್ಧಿಯಾಗಿ ತುಂಬಿರುವ ತನ್ನ ಕೃಪೆಯನ್ನು ಅನುಭವಿಸಲು ಎಲ್ಲರಿಗೂ ಅವಕಾಶ ಕಲ್ಪಿಸಿರುವನೋ ಆ ಒಬ್ಬ ದೇವರ ವಿಷಯದಲ್ಲಿ—ಮನುಷ್ಯನ ಭಾವನೆಗಳನ್ನು ಉತ್ತಮ ಪಡಿಸುವುದಕ್ಕೂ ಅವನ ಮನಸ್ಸನ್ನು ವಿಶಾಲಪಡಿಸುವುದಕ್ಕೂ ಉತ್ತಮ ಸಹಕಾರಿಯಾಗುವುವು, ಅಲ್ಲದೆ ಮಾನವನು ತನ್ನ ವಿಷಯದಲ್ಲಿಯೂ ತನ್ನ ಜನಾಂಗದ ವಿಷಯದಲ್ಲಿಯೂ ಪಾಲಿಸಬೇಕಾದ ಅನೇಕ ಕರ್ತವ್ಯಗಳಲ್ಲಿ ಅನುಸರಿಸಬೇಕಾದ ನಡೆವಳಿಕೆಯ ಕ್ರಮವನ್ನು ವ್ಯವಸ್ಥೆಗೊಳಿಸಲೂ ಇದು ಬಹಳ ಯೋಗ್ಯವಾಗಿದೆ ಈ ಕಾರಣಗಳಿಂದ "ಹೊಸ ಒಡಂಬಡಿಕೆ" ಯ ನೀತಿ ತತ್ತ್ವಸ್ವರೂಪದ ಪ್ರಚಾರವು ಹೆಚ್ಚು ಫಲವಾಗದೆ ಇರಲಾರದೆಂದು ನಂಬಿರುತ್ತೇನೆ"

ಈ ವಾಕ್ಯಗಳಿಂದ ರಾಮಮೋಹನರಿಗೆ ಕ್ರೈಸ್ತಮತದಲ್ಲಿದ್ದ ಭಾವನೆ ಏನೆಂಬುದು ಸ್ಪಷ್ಟವಾಗುವುದು ಅವರ ದೃಷ್ಟಿಯೆಲ್ಲವೂ ಆಮತದ ಆಧ್ಯಾತ್ಮಿಕ ವಿಚಾರಗಳಿಗಿಂತಲೂ ಅದು ಬೋಧಿಸಿದ ನೀತಿಮಾರ್ಗದಲ್ಲಿ ಹೆಚ್ಚಾಗಿತ್ತು ಆ ನೀತಿಮಾರ್ಗವು ಸರ್ವಮತಗಳಿಗೂ ಸಮಾನವಾದ ಗುಣವಾದುದರಿಂದ ಅದು ಎಲ್ಲರಿಗೂ ಸಮ್ಮತವಾದೀತೆಂದು ಭಾವಿಸಿದ್ದರು ಕ್ರೈಸ್ತಮತಸ್ಥರಲ್ಲಿಯೇ ಆ ಮತ ತತ್ತ್ವಗಳ ವಿಚಾರದಲ್ಲಿದ್ದ ಚರ್ಚಾಸ್ಪದ ವಿಷಯಗಳಿಗೆ ಕೈ ಹಾಕದೆ, ಸರ್ವಾನುಮತವಾದ ವಿಷಯಗಳನ್ನೇ ಕುರಿತು ಪ್ರಸ್ತಾಪಿಸಿದ್ದರು ಕ್ರೈಸ್ತಮತ ತತ್ತ್ವಗಳ ಚರ್ಚೆಗಳಿಗೆ ಕೈ ಹಾಕುವುದು ಅವರಿಗೆ ಸರ್ವಥಾ ಇಷ್ಟವಾಗಿರಲಿಲ್ಲ ಮತ್ತು ತಮ್ಮ ಪುಸ್ತಕದಿಂದ ಮುಂದೆ ವಿವಾದಗಳು ಹುಟ್ಟುವುವೆಂಬ ನಿರೀಕ್ಷೆಯೂ ಇರಲಿಲ್ಲ "ಉಪದೇಶಾವಳಿ" ಯನ್ನು ಸಂಸ್ಕೃತಕ್ಕೂ ಬಂಗಾಳಿಗೂ ಭಾಷಾಂತರಿಸಬೇಕೆಂದೂ ಉದ್ದೇಶಿಸಿದ್ದರಂತೆ ಆದರೆ ಅದಕ್ಕೆ ಅವಕಾಶವಿಲ್ಲವಾಯಿತು

"ಏಸುವಿನ ಉಪದೇಶಾವಳಿ" ಯು ರಾಮಮೋಹನರ ಶತ್ರುಮಿತ್ರರನ್ನೆಲ್ಲ ಆಶ್ಚರ್ಯಗೊಳಿಸಿತು. ಆ ಕಾಲದಲ್ಲಿ ಕ್ರೈಸ್ತಮತಕ್ಕೆ ವಿರೋಧವು ಬಹಳ ಹೆಚ್ಚಾಗಿತ್ತು. ಹಾಗಿದ್ದುದರಿಂದ ಹಿಂದೂವಾದ ರಾಮಮೋಹನರು ಕ್ರೈಸ್ತಮತ ವಿಚಾರದಲ್ಲಿ ಇಷ್ಟು ಆದರವನ್ನು ತೋರಿಸಿದುದು ಬ್ರಾಹ್ಮಣ ವರ್ಗದ ಮಿತ್ರರಿಗೆ ಸಹ್ಯವಾಗಲಿಲ್ಲ. ರಾಮಮೋಹನರು ಕಲ್ಕತ್ತೆಯಲ್ಲಿ ನೆಲಸಿದ ಮೋಶೆ ಸೆರಂಪುರದ ಕ್ರೈಸ್ತ ಪಾದ್ರಿಗಳಲ್ಲಿ ಕೇವಲ ಮಿತ್ರತ್ವದಿಂದಲೇ ಇದ್ದರೆಂದು ಪಾದ್ರಿಗಳ ವರದಿಗಳಿಂದಲೇ ತಿಳಿದು ಬರುವುದು. ಅವರು ಕೈಕೊಂಡ ವಿದ್ಯಾ ಪ್ರಚಾರ ಮೊದಲಾದ ಸರ್ವ ಜನೋಪಯುಕ್ತ ಕಾರ್ಯಗಳಲ್ಲಿ ರಾಮಮೋಹನರು ನೆರವಾಗುತ್ತಿದ್ದರು. ಅವರು ವಿಗ್ರಹಾರಾಧನೆಯನ್ನು ತ್ಯಜಿಸಿದ್ದೂ, ಹಿಂದೂ ವಿಗ್ರಹಾರಾಧನೆಗೆ ವಿರೋಧವಾಗಿ ಚಳುವಳಿ ನಡೆಸಿದ್ದೂ, ಕ್ರೈಸ್ತ ಮತದ ಮೇಲ್ಮೆಯನ್ನು ಗ್ರಹಿಸಿ ಕಾಲಕ್ರಮದಲ್ಲಿ ಆ ಮತವನ್ನು ಅಂಗೀಕರಿಸುವರೆಂಬ ನಿರೀಕ್ಷೆಯನ್ನು ಪಾದ್ರಿಗಳಿಗೆ ಒದಗಿಸಿತ್ತು. ಹೀಗಿದ್ದಾಗ ರಾಮಮೋಹನರು ಕ್ರೈಸ್ತ ಮತದ ನ್ಯೂನತೆಗಳನ್ನು ಪ್ರಕಟಿಸಿ ತಮ್ಮ ಮತ ಪ್ರಚಾರಕಾರ್ಯಕ್ಕೆ ಅಡ್ಡಿ ತರುತ್ತಿದ್ದಾರೆಂದು ಅವರು ವಿರೋಧಿಸಿದರು. ವಾದವಿವಾದಗಳು ಲೆಕ್ಕವಿಲ್ಲದಷ್ಟು ಬೆಳೆದುವು.

ಕ್ರೈಸ್ತ ಮತ ಗ್ರಂಥವಾದ ಬೈಬಲ್ಲಿನಲ್ಲಿರುವ ತತ್ತ್ವ ವಿಚಾರಗಳನ್ನೂ ಪವಾಡಗಳನ್ನೂ ಬಿಟ್ಟು ಅದರಲ್ಲಿನ ನೀತಿ ಮತ್ತು ವ್ಯವಹಾರ ಭಾಗವನ್ನು ಬೇರೆಮಾಡಿದ್ದು ಕ್ರೈಸ್ತ ಪಾದ್ರಿಗಳಿಗೆ ಪ್ರಿಯವಾಗಲಿಲ್ಲ. "ಭಾರತ ಮಿತ್ರ" ಎಂಬ ಹೆಸರಿನ ಕ್ರೈಸ್ತ ಮತ ಪ್ರಚಾರಕರ ವಾರಪತ್ರಿಕೆಯಲ್ಲಿ ಪಾದ್ರಿ ಸ್ಮಿತ್ ಎಂಬವನು ರಾಮಮೋಹನರ ಪುಸ್ತಕವನ್ನು ಖಂಡಿಸಿ ಲೇಖನ ಬರೆದನು. ಅದೇ ಪತ್ರಿಕೆಯ ಸಂಪಾದಕನಾದ ಡಾಕ್ಟರ್ ಮಾರ್ಷ್‍ಮನ್ನನು ಸಂಪಾದಕೀಯ ಲೇಖನದಲ್ಲಿ ಖಂಡನೆಯನ್ನು ಪರಿಪೋಷಿಸಿದನು. ಅವರ ಆಕ್ಷೇಪಗಳ ಅಂಶಗಳೇನೆಂದರೆ: ಮತ ತತ್ತ್ವಗಳು 'ಹೊಸ ಒಡಂಬಡಿಕೆ' ಯ ಹಾಸು ಹೊಕ್ಕಾಗಿವೆ. ಮತ ತತ್ತ್ವಗಳೇ ಬೈಬಲ್ಲಿನ ಜೀವಾಳವೆಂದು ಏಸುವೇ ಹೇಳಿರುವಾಗ ಅವನ್ನು ಬಿಡುವುದು ಹೇಗೆ ಸಂಗತವಾದೀತು. ಮನುಜನ ಶಾಂತಿಸುಖಗಳಿಗೆ ಏಸುವಿನ ನೀತಿವಾಕ್ಯಗಳು ಎಷ್ಟು ಮುಖ್ಯವೋ ಆಧ್ಯಾತ್ಮಿಕ ತತ್ತ್ವಗಳೂ ಅಷ್ಟೇ ಮುಖ್ಯವಾದುವು. ತತ್ತ್ವ,

ಪವಾಡ, ನೀತಿ ಈ ಎಲ್ಲ ಅಂಶಗಳಿಂದ ಕೂಡಿರುವ ಮತ ಗ್ರಂಥವನ್ನು ಸಂಗ್ರಹಿಸುವುದರಲ್ಲಿ ಎಲ್ಲ ಅಂಶಗಳನ್ನೂ ಕ್ರೋಢೀಕರಿಸಿದರೇನೇ ಅದು ಮೂಲ ಗ್ರಂಥದ ದೈವ ವಾಣಿಯ ಕೈಗನ್ನಡಿ ಯಾದೀತೇ ಹೊರತು ಒಂದು ದೃಷ್ಟಿಯಿಂದ ಮಾತ್ರ ಆರಿಸಿದ ವಾಣಿಯು ಆದರಣೀಯವಾಗದು. ಭಾರತೀಯರ ಪ್ರಯೋಜನಕ್ಕೆಂದು ರಚಿಸಿದ ಸಂಗ್ರಹವು ಅವರಿಗೆ ಹಾನಿಕರವೇ ಹೊರತು ಪ್ರಯೋಜನಕಾರಿಯಾಗದು. ಪವಾಡಗಳು ನಂಬಲರ್ಹವಲ್ಲವೆಂದು ಅವುಗಳನ್ನು ಗೌರವದಿಂದ ಕಾಣದೆ ಅಲ್ಲಗಳೆದಿದ್ದುದು ಇನ್ನೊಂದು ಆಕ್ಷೇಪ. ಏಸುವು ಕೇವಲ ನೀತಿಬೋಧಕನಾಗಿ ಪರಿಗಣಿತನಾಗಿರುವನೆಂಬುದು ಮತ್ತೊಂದು ಆಕ್ಷೇಪ.

ಮಾರ್ಷ್‌ಮನ್ನನು ಈ ಪುಸ್ತಕವನ್ನು ಖಂಡಿಸಿ ರಾಮಮೋಹನರನ್ನು 'ಬುದ್ಧಿವಂತನಾದ ಮೂರ್ತಿಪೂಜಕ' ಎಂದು ಕರೆದನು. ಇದರ ಮೇಲೆ ಉತ್ತರ ಪ್ರತ್ಯುತ್ತರಗಳು ಹೊರಟವು. ರಾಮಮೋಹನರು ಕ್ರೈಸ್ತ ಮತಸ್ಥರಲ್ಲಿ ಮೂರು ವಿಜ್ಞಾಪನೆಗಳನ್ನು ಪ್ರಕಟಿಸಿದರು. ಮೊದಲನೆಯದರಲ್ಲಿ, ತಮ್ಮ ಪುಸ್ತಕದ ಮೇಲೆ ಬಂದಿದ್ದ ಆಕ್ಷೇಪಣೆಗಳಿಗೆ ಸಮಾಧಾನಗಳನ್ನು ಕೊಟ್ಟರು. ಇದಕ್ಕೆ ಮಾರ್ಷ್‌ಮನನ್ನು ೧೮೨೦ ರಲ್ಲಿ "ಭಾರತ ಮಿತ್ರ" ದಲ್ಲಿ ಉತ್ತರ ಕೊಟ್ಟನು. ಇದಕ್ಕೆ ಉತ್ತರವಾಗಿ ರಾಮಮೋಹನರು ೧೮೨೧ ರಲ್ಲಿ ತಮ್ಮ ಎರಡನೆಯ ಮತ್ತು ೧೮೨೩ ರನೆಯ ಜನವರಿ ೩೦ರಲ್ಲಿ ಮೂರನೆಯ ಬಿನ್ನಹಗಳನ್ನು ಪ್ರಕಟಿಸಿದರು. ಹಿಂದಿನ ಬಿನ್ನಹಗಳನ್ನೂ ಇತರ ವಾದಗ್ರಸ್ತ ಲೇಖನಗಳನ್ನೂ ಮುದ್ರಿಸಿದ ಬ್ಯಾಪ್ಟಿಸ್ಟ್ ಕ್ರೈಸ್ತ ಮುದ್ರಣಾಲಯವು ತಮ್ಮ ಮತಕ್ಕೆ ವಿರೋಧವಾದ ವಿಚಾರಗಳಿಗೆ ಸಂಬಂಧಿಸಿದ್ದುದರಿಂದ ಮೂರನೆಯ ಬಿನ್ನಹವನ್ನು ಎಷ್ಟು ಹಣಕೊಟ್ಟರೂ ಮುದ್ರಿಸುವುದಿಲ್ಲವೆಂದು ಹೇಳಿತು. ಆದುದರಿಂದ ರಾಮಮೋಹನರು ಕೂಡಲೆ ತಮ್ಮ ಸ್ವಂತ ಹಣದಿಂದಲೇ ಒಂದು ಮುದ್ರಣಾಲಯವನ್ನು ಸ್ಥಾಪಿಸಿದರು. ಅದಕ್ಕೆ "ಯುನಿಟೇರಿಯನ್ ಪ್ರೆಸ್" ಎಂದು ಹೆಸರಿಟ್ಟರು. ತಮ್ಮ ಮೂರನೆಯ ಬಿನ್ನಹವನ್ನು ಈ ಮುದ್ರಣಾಲಯದಲ್ಲಿಯೇ ಅಚ್ಚುಮಾಡಿದರು. ಇದು ೨೫೬ ಪುಟಗಳಷ್ಟಿದ್ದು ರಾಮಮೋಹನರ ವಾದಗ್ರಸ್ತ ಲೇಖನಗಳಲ್ಲಿ ಬಹಳ ದೊಡ್ಡದಾಗಿದೆ. ಇದರ ಭಾಷೆಯು ಹಿಂದಿನವುಗಳಷ್ಟು ಸೌಮ್ಯವಾಗಿಲ್ಲ; ಪಾದ್ರಿಗಳ ಉಗ್ರಖಂಡನೆ

ಗಳೇ ಇದಕ್ಕೆ ಕಾರಣವಿರಬಹುದು. ಈ ಬಿನ್ನಹವು ಅನೇಕರ ಮೆಚ್ಚಿಕೆ ಪ್ರಶಂಸೆಗಳನ್ನು ಪಡೆಯಿತು. ಇಂಡಿಯದಲ್ಲಿನ 'ಇಂಡಿಯ ಗೆಜಟ್' 'ಕಲ್ಕತ್ತ ಜರ್ನಲ್' ಮೊದಲಾದ ಪತ್ರಿಕೆಗಳಲ್ಲಿ ಪ್ರಶಂಸಾ ಲೇಖನಗಳು ಪ್ರಕಟವಾದುವು. ಇಂಗ್ಲೆಂಡಿನ ಯೂನಿಟೇರಿಯನ್ ಸಂಗಡದ ಪತ್ರಿಕೆಯಾದ "ಮಂತ್ಲಿ ರೆಪಾಜಿಟರಿ" ಎಂಬ ಪತ್ರಿಕೆಯು ಹೀಗೆ ಬರೆಯಿತು: "ನಮ್ಮ ಅಭಿಪ್ರಾಯದಲ್ಲಿ ಇದು ಹಿಂದೂ ಸುಧಾರಕನ ಪುಸ್ತಕಗಳಲ್ಲೆಲ್ಲ ಬಹು ಮುಖ್ಯವಾದುದು. ಆತನು ಏಕಮೂರ್ತಿ ತತ್ತ್ವವನ್ನೂ ತ್ರಿಮೂರ್ತಿ ತತ್ತ್ವವನ್ನೂ ಬಹಳ ಶ್ರದ್ಧೆಯಿಂದ ವ್ಯಾಸಂಗಮಾಡಿರುವನು. ಏಕ ಮೂರ್ತಿ ಪಕ್ಷದ ತತ್ತ್ವಗಳನ್ನು ಅದೇಶಕದವರು ಈ ದೇಶದಲ್ಲಿ ವಿವರಿಸಬಹುದಾದ ನಿಪುಣತೆಯನ್ನೂ ಮೀರಿಸಬಹುದಾದ ರೀತಿಯಲ್ಲಿ ಸಮರ್ಥಿಸಿರುವನು." ಈ ಪುಸ್ತಕವನ್ನು ವಿಮರ್ಶಿಸುತ್ತ "ಇಂಡಿಯ ಗೆಜೆಟ್" ಪತ್ರಿಕೆಯಲ್ಲಿ ಈ ಸಂಪಾದಕೀಯ ಟೀಕೆ ಬಂತು: "ಮಾನವರಲ್ಲೆಲ್ಲ ರಾಮಮೋಹನನು ಅವನ ಔದಾರ್ಯಕ್ಕೂ, ಪಾಂಡಿತ್ಯಕ್ಕೂ, ಒಟ್ಟಿನಲ್ಲಿ ಬುದ್ಧಿಯ ಮೇಲ್ಮೆಗೂ, ಪ್ರಸಿದ್ಧಿ ಪಡೆದಿರಬೇಕು. ಅವನಿಗೆ ತಕ್ಕ ಪ್ರತಿದ್ವಂದ್ವಿಯನ್ನು ಅವನು ಇಲ್ಲಿ ಇನ್ನೂ ಕಂಡಿಲ್ಲವೆಂದು ನಾವು ಸಂಕೋಚದಿಂದ ಹೇಳಬೇಕಾಗಿದೆ."

ಇಂಗ್ಲೆಂಡಿನಲ್ಲಿ ಯೂನಿಟೇರಿಯನ್ ಸಂಘವು ರಾಮಮೋಹನರ "ಏಸುವಿನ ಉಪದೇಶಾವಳಿ" ಯನ್ನೂ ಅವರ ಮೂರು ಬಿನ್ನಹಗಳನ್ನೂ ಒಟ್ಟುಗೂಡಿಸಿ ಗ್ರಂಥರೂಪದಲ್ಲಿ ಪ್ರಕಟಿಸಿತು. ಕೆಲವು ವರ್ಷಗಳ ಮೇಲೆ ಇದೇ ಗ್ರಂಥವು ಅಮೆರಿಕದಲ್ಲಿಯೂ ಪುನಃ ಲಂಡನ್ನಿನಲ್ಲಿಯೂ ಪ್ರಕಟವಾಯಿತು. ಈ ಲೇಖನ ಸಮುಚ್ಚಯಗಳಿಂದ ವಿದೇಶಗಳಲ್ಲಿ ಮೊದಲೇ ಹರಡಿದ್ದ ರಾಮಮೋಹನರ ಕೀರ್ತಿಯು ಮತ್ತಷ್ಟು ವ್ಯಾಪಿಸುವಂತಾಯಿತು.

ರಾಮಮೋಹನರ ಈ ಲೇಖನಗಳಿಂದ ಕ್ರೈಸ್ತ ಮತದ ತತ್ತ್ವಗಳು ವಿಚಾರಕ್ಕೆ ಬಂದುವು. ಇದರಿಂದ ಒಂದು ಕಡೆ ಪಾದ್ರಿಗಳಿಗೂ ರಾಮಮೋಹನರಿಗೂ ಭಿನ್ನತೆಯು ತೀವ್ರವಾಯಿತು. ಮತ್ತೊಂದು ಕಡೆ ಬ್ರಾಹ್ಮಣ ಪಕ್ಷದವರು ಅವರ ಕ್ರೈಸ್ತಮತದಲ್ಲಿನ ಆಸಕ್ತಿಯನ್ನು ನೋಡಿ

ಅವರು ಬ್ರಾಹ್ಮಣರಲ್ಲವೆಂದು ದ್ವೇಷಿಸಿದರು ಅನೇಕ ಮತಗಳಿಗೆ ಆವಾಸವಾದ ಇಂಡಿಯದಲ್ಲಿ ರಾಮಮೋಹನರು ಸ್ವಮತವಾದ ಬ್ರಾಹ್ಮಣ ಮತದಲ್ಲಿನ ನ್ಯೂನತೆಗಳನ್ನು ಹೋಗಲಾಡಿಸಲು ಪ್ರಯತ್ನಿಸಿದಂತೆಯೇ ಎಲ್ಲ ಮತಗಳ ಮೂಲ ತತ್ತ್ವಗಳೂ ಒಂದೇ ಎಂಬ ವಿಶಾಲ ದೃಷ್ಟಿಯಿಂದ ಇತರ ಮತಗಳಲ್ಲಿನ ಕುಂದು ಕೊರತೆಗಳನ್ನೂ ಪ್ರಕಾಶಕ್ಕೆ ತಂದು ಅವುಗಳನ್ನು ಪರಿಷ್ಕರಿಸಲು ಯತ್ನಿಸಿದರು 'ಹೊಸ ಒಡಂಬಡಿಕೆ'ಯ ಮತ ತತ್ತ್ವ ಭಾಗಗಳನ್ನು ಉಗ್ರವಾಗಿ ಟೀಕಿಸಿದ್ದರೂ ಆ ಮತ ಗ್ರಂಥವನ್ನು ಹಾಸ್ಯಕ್ಕೀಡು ಮಾಡುವುದಾಗಲಿ ಅದರ ಯೋಗ್ಯತೆ ಪೂಜ್ಯತೆಗಳನ್ನು ಕಡಿಮೆ ಮಾಡುವುದಾಗಲಿ ಅವರ ಉದ್ದೇಶವಾಗಿರಲಿಲ್ಲ ಅವರಿಗೆ ಎಲ್ಲ ಮತಗಳಲ್ಲಿಯೂ ಏಕ ರೀತಿಯಾದ ಗೌರವವಿತ್ತು ಕ್ರೈಸ್ತ ಮತ ಗ್ರಂಥಗಳ ವ್ಯಾಸಂಗ ಪರಿಶೋಧನೆಗಳ ಫಲವಾಗಿ ಆ ಮತವು ವಿಗ್ರಹಾರಾಧನೆ ಮೊದಲಾದ ದೂಷ್ಯ ಪ್ರಭಾವಗಳಿಗೆ ಸಿಕ್ಕಿತ್ತೆಂಬುದು ವ್ಯಕ್ತವಾಯಿತು ಕ್ರೈಸ್ತ ಪಾದ್ರಿಗಳು ಬೋಧಿಸುತ್ತಿದ್ದ ತ್ರಿಮೂರ್ತಿ ತತ್ತ್ವವು ಏಸುವು ಬೋಧಿಸಿದ ತತ್ತ್ವಕ್ಕೆ ವಿರುದ್ಧವೆಂದು ಅವರು ಯೋಚಿಸಿದರು , ಮತ್ತು ಈ ಪದ್ಧತಿಯು ಹಿಂದೂಗಳ ಬಹು ದೈವ ಪೂಜೆಗೆ ಹೋಲುವುದೆಂಬುದನ್ನೂ ಗ್ರಹಿಸಿದರು ರಾಮಮೋಹನರು ನಡೆಸಿದ ವಾದ ವಿವಾದಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರ ಉದ್ದೇಶವು ಬರಿಯ ಖಂಡನೆಯಾಗಿರದೆ ನಿಜವಾದ ತತ್ತ್ವಾನ್ವೇಷಣ ಬುದ್ಧಿಯಿಂದ ಕೂಡಿತ್ತೆಂಬುದು ಸ್ಪಷ್ಟವಾಗುವುದು ಹಿಂದೂ ಮತಕ್ಕೆ ಸೇರಿದವರು ಕ್ರೈಸ್ತ ಮತ ತತ್ತ್ವಗಳಲ್ಲಿ ಇಷ್ಟು ಸಂಪೂರ್ಣ ಪಾಂಡಿತ್ಯವನ್ನು ಪಡೆದಿದ್ದರೆಂಬುದು ಈಗಲೂ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡತಕ್ಕದ್ದಾಗಿದೆ ರಾಮಮೋಹನರ ಅತಿಶಯ ಜ್ಞಾನವೆಂದರೆ ಕ್ರೈಸ್ತ ಪಾದ್ರಿಗಳೊಡನೆ ವಾದದಲ್ಲಿ ಅವರಿಗೆ ಜಯವು ಲಭಿಸಿದುದು ಅವರ ವಾದವು ನಿರ್ದುಷ್ಟವೂ ಸಮರ್ಪಕವೂ ಆದುದೆಂದು ಕ್ರೈಸ್ತ ಪಾದ್ರಿಗಳೂ ಒಪ್ಪಿಕೊಳ್ಳಬೇಕಾಯಿತು

ರಾಮಮೋಹನರ ಪ್ರಜ್ಞಾತಿಶಯವೂ, ವಿಚಾರಸರತೆಯೂ, ಅನೇಕ ಭಾಷೆಗಳಲ್ಲಿನ ಪಾಂಡಿತ್ಯವೂ, ಇಂಗ್ಲೆಂಡ್ ಅಮೆರಿಕ ದೇಶಗಳಿಗೂ ವ್ಯಾಪಿಸಿ ಅಲ್ಲಿನವರ ಪ್ರಶಂಸೆಯನ್ನೂ ತಂದಿತು ಈ ವಾದದಲ್ಲಿ ಕ್ರೈಸ್ತ ಪಾದ್ರಿ

ಗಳು ರೋಷ, ಆಕ್ರೋಶಗಳನ್ನು ಪ್ರಕಟಿಸಿ ಗಾಂಭೀರ್ಯವನ್ನು ಮೀರಿ ವರ್ತಿಸುತ್ತಿದ್ದರು. ರಾಮಮೋಹನರು ಇದಕ್ಕೆ ಪ್ರತಿಯಾಗಿ ತಮ್ಮ ವಾದವನ್ನು ಮರ್ಯಾದೆಯಿಂದಲೂ ಗಾಂಭೀರ್ಯದಿಂದಲೂ ನಡೆಸಿದರು. ಮಾರ್ಷ್‌ಮನ್ನನು ಹಿಂದೂ ಶಾಸ್ತ್ರಗಳು ಅಪದ್ಧಜನಿತವೆಂದು ಆಕ್ಷೇಪಿಸಿದರೆ ರಾಮಮೋಹನರು "ನಾವು ಪವಿತ್ರವಾದ ಮತಾಚಾರಗಳ ವಿಷಯದಲ್ಲಿ ಚರ್ಚೆ ನಡೆಸುತ್ತಿದ್ದೇವೆಯೇ ಹೊರತು ಒಬ್ಬರನ್ನೊಬ್ಬರು ಹೀಯಾಳಿಸುವುದರಲ್ಲಿ ಅಲ್ಲವೆಂಬುದನ್ನು ಮರೆಯಬಾರದು" ಎಂದು ಉತ್ತರ ಬರೆದರು.

ಹಿಂದೂ ವೇದಾಂತವನ್ನು ಖಂಡಿಸಿದ ಕ್ರೈಸ್ತಪಾದ್ರಿಗಳಿಗೆ ಅದರ ತಿಳಿವಳಿಕೆ ಇರಲಿಲ್ಲವೆಂಬುದು ವ್ಯಕ್ತವಾಗಿಯೇ ಇದೆ. ಹಿಂದೂ ವೇದಾಂತದ ಜ್ಞಾನಪಡೆಯಲು ಅನೇಕ ವರ್ಷಗಳ ವ್ಯಾಸಂಗವು ಆವಶ್ಯಕ. ರಾಮಮೋಹನರು ಸಂಸ್ಕೃತ ವಿದ್ಯಾಪಾರಂಗತರಾಗಿದುದ್ದರಿಂದ ವೇದಾಂತ ತತ್ತ್ವವು ಅವರಿಗೆ ಕರತಲಾಮಲಕವಾಗಿತ್ತು. ಅಲ್ಲದೆ ಅವರ ಬುದ್ಧಿಯು ಸೂಕ್ಷ್ಮವೂ, ವಿಚಾರ ಪೂರಿತವೂ ಆಗಿತ್ತು. ಕ್ರೈಸ್ತಪಾದ್ರಿಗಳಲ್ಲಿ ವಾದ ನಡೆಸುವ ಸಂದರ್ಭದಲ್ಲಿ ಕ್ರೈಸ್ತಮತಪ್ರಚಾರವನ್ನು ಕುರಿತು ಕೆಲವು ಸೂಚನೆಗಳನ್ನು ಕೊಟ್ಟರು. ಮೊದಲನೆಯದಾಗಿ, ದೇಶವನ್ನು ಜಯಿಸಿದ್ದ ಬ್ರಿಟಿಷರು, ಮತಾಚಾರಗಳಲ್ಲಿ ತಾವು ಪ್ರವೇಶಿಸುವುದಿಲ್ಲವೆಂದು ಭರವಸೆ ಕೊಟ್ಟಿದ್ದಂತಹವರು, ಪರಾಜಿತರಾದ ಭಾರತೀಯರಲ್ಲಿ ತಮ್ಮ ಮತವನ್ನು ಪ್ರಕಟವಾಗಿಯೇ ಹರಡುವುದೂ, ಅವರ ಮತವನ್ನು ಹೀಯಾಳಿಸುವುದೂ, ನ್ಯಾಯವಲ್ಲವೆಂದು ಹೇಳಿದರು. ಎರಡನೆಯದಾಗಿ, ಹಿಂದೂಮತವನ್ನಾಗಲಿ ಇಸ್ಲಾಂ ಮತವನ್ನಾಗಲಿ ದೂಷಿಸುವುದಕ್ಕಾಗಿ ಲೇಖನಗಳನ್ನು ಪ್ರಕಟಿಸುವುದೂ ಉಪನ್ಯಾಸಗಳನ್ನು ಮಾಡುವುದೂ ಸಾಧುವಲ್ಲ. ಮೂರನೆಯದಾಗಿ, ಮತಪ್ರಚಾರಕ್ಕಾಗಿ ಅರಿಯದವರಿಗೆ ಪ್ರಾಪಂಚಿಕ ಸೌಖ್ಯಗಳ ಆಶೆತೋರಿಸಿ ಬೇರೆ ಮತಕ್ಕೆ ಸೇರಿಸುವುದೂ ಸರಿಯಲ್ಲವೆಂದು ಹೇಳಿದರು. ಬಂಗಾಳದ ಪ್ರಜೆಗಳು ಬಡವರು ಮತ್ತು ಭಯಸ್ಥರು. ಇಂಗ್ಲಿಷರ ಹೆಸರೆಂದರೆ ಗಾಬರಿ ಪಡುವವರು. ಅವರನ್ನು ಆಡಳಿತದ ದರ್ಪದಿಂದ ಅಧೀನಪಡಿಸಿಕೊಳ್ಳುವುದು ನಿಂದನೀಯವೆಂದು ಹೇಳಿದರು. ಇದರಿಂದ ಕ್ರೈಸ್ತಪಾದ್ರಿಗಳಿಗೆ ತಮ್ಮ ಮತ ಪ್ರಚಾರಕಾರ್ಯಕ್ಕೆ ರಾಮಮೋಹನರು

ಅದ್ದಿತಗುತ್ತಿರುವರೆಂಬ ಭೀತಿತಟ್ಟಿತು ಕ್ರೈಸ್ತ ಪಾದ್ರಿಗಳ ಕಾರ್ಯವು ಸಂಪೂರ್ಣ ಸಾರ್ಥಕವಾಗದಿರುವುದನ್ನೂ ರಾಮಮೋಹನರು ಕಂಡಿದ್ದರು ಪಾದ್ರಿಗಳು ಅನುಸರಿಸುತ್ತಿದ್ದ ಪ್ರಚಾರ ಮಾರ್ಗವು ಯುಕ್ತವಾಗಿಲ್ಲವೆಂಬುದನ್ನು ಅವರಿಗೆ ತಿಳಿಸಿದರು ಪಾದ್ರಿಗಳು ಬೈಬಲ್ಲಿನ ಸಾವಿರಾರು ಪ್ರತಿಗಳನ್ನು ಜನರಲ್ಲಿ ಹಂಚುವುದರಿಂದಲೇ ಪ್ರಚಾರ ಕಾರ್ಯವು ಫಲಕಾರಿಯಾಗದೆಂದೂ ಭಾರತೀಯರ ಸ್ಥಿತಿಗತಿಗಳನ್ನೂ, ಅವರ ಆಚಾರ ವ್ಯವಹಾರಗಳನ್ನೂ, ಸಾಮಾಜಿಕ ಸ್ಥಿತಿಗಳನ್ನೂ, ಪರೀಕ್ಷಿಸಿ ಅವಕ್ಕೆ ಅನುಸಾರವಾಗಿ ನಡೆಸಬೇಕೆಂದೂ ಹೇಳಿದರು ಈ ನ್ಯೂನತೆಗಳಿದ್ದರೂ ಪಾದ್ರಿಗಳೂ, ಕ್ರೈಸ್ತ ಸಂಸ್ಥೆಗಳೂ ಭಾರತ ಜನಾಂಗವು ಮುಂದಡಿಯಿಡುವುದರಲ್ಲಿ ಹೆಚ್ಚು ಪ್ರಯೋಜನಕರವೆಂದು ಭಾವಿಸಿದ್ದರು

ಕ್ರೈಸ್ತ ಧರ್ಮದಲ್ಲಿ ತ್ರಿಮೂರ್ತಿ ತತ್ತ್ವ ಮತ್ತು ಏಕಮೂರ್ತಿ ತತ್ತ್ವ ಎಂಬ ಎರಡು ಪಂಗಡಗಳುಂಟು. ತ್ರಿಮೂರ್ತಿ ತತ್ತ್ವದಲ್ಲಿ ದೇವರು ದೇವಪಿತ, ದೇವ ಕುಮಾರ ಮತ್ತು ಪವಿತ್ರಾತ್ಮ ಎಂಬ ಮೂರು ಅಂಶಗಳಿಂದ ಕೂಡಿದ್ದಾನೆ ಈ ಅಂಶಗಳು ಬೇರೆ ದೇವರುಗಳಲ್ಲ, ಈ ಅಂಶಗಳೆಲ್ಲ ಒಬ್ಬ ದೇವರಲ್ಲಿಯೇ ಅಂತರ್ಗತವಾಗಿವೆ ದೇವರ ದಿವ್ಯ ಕರ್ತೃತ್ವ ಮತ್ತು ನಿಯಾಮಕತ್ವಾಂಶವೇ ದೇವಪಿತ, ಅವನ ಅವತಾರ ಸ್ವರೂಪವೇ ದೇವಕುಮಾರ, ಏಸುಕ್ರಿಸ್ತ, ದೇವರಿಗೂ ಅವತಾರ ಪುರುಷನಿಗೂ ಸಂಬಂಧವನ್ನು ಕಲ್ಪಿಸುವ ಮತ್ತು ವಿಶ್ವದಲ್ಲೆಲ್ಲ ಅಂತರ್ಯಾಮಿಯಾಗಿ ವ್ಯಾಪಿಸಿರುವ ಶಕ್ತಿವಿಶೇಷವೇ ಪವಿತ್ರಾತ್ಮ ಈ ತತ್ತ್ವದವರಿಗೆ ಬೈಬಲ್ಲು ನಿರ್ದೋಷವಾದ ಅಪೌರುಷೇಯವಾದ ಪ್ರಮಾಣಗ್ರಂಥ ಅದರಲ್ಲಿ ಹೇಳಿರುವುದೆಲ್ಲ ನಂಬಲೇಬೇಕಾದುವು ಈ ತತ್ತ್ವವು ಸಾಂಪ್ರದಾಯಿಕವಾದುದು ಸುಮಾರು ಹದಿನೇಳನೆಯ ಶತಮಾನದಲ್ಲಿ ಕ್ರೈಸ್ತ ಧರ್ಮದಲ್ಲಿ ನವೀನ ಮಾರ್ಗ ತಲದೋರಿತು ಇದೇ ಏಕ ಮೂರ್ತಿ ತತ್ತ್ವ ಈ ತತ್ತ್ವದಲ್ಲಿ ದೇವರೊಬ್ಬನೇ, ಅಂಶಭೇದಗಳಿಗೆಡೆಯಿಲ್ಲ ಏಸುವು ಅವತಾರ ಪುರುಷನಲ್ಲ, ಆದರೆ ಒಬ್ಬ ಮಹಾತ್ಮನು ಮಾತ್ರ ಈ ತತ್ತ್ವದವರು ಬೈಬಲ್ಲನ್ನು ನಿರ್ದೋಷವೆಂದು ಭಾವಿಸುವುದಿಲ್ಲ ಮತ್ತು ಅದರಲ್ಲಿನ ಇತಿಹಾಸಾಂಶಗಳು ಪವಾಡ ಕಥೆ ಮೊದಲಾದುವುಗಳನ್ನು ನಂಬುವುದಿಲ್ಲ.

ಮೇಲೆ ವಿವರಿಸಿದ ವಾದವಿವಾದಗಳಲ್ಲಿ ಹಿಂದೂ ಮತ್ತು ಕ್ರೈಸ್ತ ಮತ ತತ್ತ್ವಗಳು ಚರ್ಚೆಗೆ ಬರುವುದು ಅನಿವಾರ್ಯವಾಯಿತು. ರಾಮಮೋಹನರು ಉಪನಿಷತ್ತಿನ ಅಭಿಪ್ರಾಯವನ್ನು ಹಿಡಿದು ದೇವರೊಬ್ಬನೇ ಎಂದು ಸಾರಿದ್ದರು. ಬೈಬಲ್ಲೂ ಅದೇ ಅಭಿಪ್ರಾಯವನ್ನು ಸಮರ್ಥಿಸುವುದೆಂದು ಹೇಳಿದರು. ಇದು ಕ್ರೈಸ್ತ ಮತಸ್ಥರಿಗೆ ಒಪ್ಪಿಗೆಯಾಗಲಿಲ್ಲ. ಆಗ ಇಂಡಿಯದಲ್ಲಿದ್ದ ಹೆಚ್ಚು ಮಂದಿ ಕ್ರೈಸ್ತ ಮತಸ್ಥರು ತ್ರಿಮೂರ್ತಿ ಪೂಜಕರಾಗಿದ್ದರು.

ರಾಮಮೋಹನರ ಮತ್ತು ಕ್ರೈಸ್ತರ ಈ ಏಕಮೂರ್ತಿ ಮತ್ತು ತ್ರಿಮೂರ್ತಿ ತತ್ತ್ವದ ವಾದ ನಡೆಯುತ್ತಿರುವಲ್ಲಿ ಬಹು ಜನರ ಗಮನವನ್ನು ಆಕರ್ಷಿಸಿದ ಒಂದು ಸಂಗತಿ ನಡೆಯಿತು. ರಾಮಮೋಹನರು ಪಾದ್ರಿಗಳಾದ ವಿಲಿಯಂ ಆಡಮ್ ಮತ್ತು ಏಟ್ಸ್‌ರ ಸಹಾಯದಿಂದ ಬೈಬಲ್ಲನ್ನು ಬಂಗಾಳಿಗೆ ಪರಿವರ್ತಿಸುವುದರಲ್ಲಿದ್ದರು. ಆ ಸಂದರ್ಭದಲ್ಲಿ ಏಸುಕ್ರಿಸ್ತನ ದೇವತ್ವದ ವಿಷಯದಲ್ಲಿ ಚರ್ಚೆಗಳು ಹುಟ್ಟಿದುವು. ರಾಮಮೋಹನರು ಏಕಮೇವಾದ್ವಿತೀಯ ಬ್ರಹ್ಮೋಪಾಸಕರೆಂಬುದನ್ನು ನೋಡಿದ್ದೇವೆ. ವೈದುಷ್ಯದಿಂದಲೂ ವಿಚಾರಪರತೆಯಿಂದಲೂ ಕೂಡಿದ ಅವರ ಚರ್ಚೆಗಳಿಂದ ಆಡಮ್ ಮತ್ತು ಏಟ್ಸ್ ಅವರ ನಂಬಿಕೆಗಳೂ ಕದಲಿದುವು. ರಾಮಮೋಹನರ ಅಭಿಪ್ರಾಯಗಳನ್ನು ಒಪ್ಪದೆ ಏಟ್ಸ್ ಅವರೊಡನೆ ಸೇರುವುದನ್ನು ಬಿಟ್ಟನು. ರಾಮಮೋಹನರ ಮತ್ತು ಆಡಮ್ ಅವರ ಚರ್ಚೆಗಳು ಹೆಚ್ಚಿ ತೀವ್ರವಾದ ಹಾಗೆಲ್ಲ ಆಡಮ್ಸಿಗೆ ತ್ರಿಮೂರ್ತಿ ತತ್ತ್ವದಲ್ಲಿ ನಂಬಿಕೆಯು ಸಂಪೂರ್ಣವಾಗಿ ತಪ್ಪಿ ಕೊನೆಗೆ ೧೮೨೧ ರಲ್ಲಿ ಏಕಮೂರ್ತಿ ಪಕ್ಷವನ್ನು ಬಹಿರಂಗವಾಗಿ ಅಂಗೀಕರಿಸಿದನು. ರಾಮಮೋಹನರು ಸುಮಾರು ಅದೇ ಕಾಲದಲ್ಲಿ ಪ್ರಕಟಿಸಿದ ಕ್ರೈಸ್ತ ಮತಸ್ಥರಲ್ಲಿನ ಎರಡನೆಯ ಬಿನ್ನಹವೂ ಆಡಮ್‌ನ ಈ ಭಿನ್ನಮತ ಅಂಗೀಕಾರಕ್ಕೆ ಸಹಾಯ ಮಾಡಿತು. ಈ ಮತಾಂತರದ ಮೇಲೆ ವೈದಿಕ ಕ್ರೈಸ್ತ ಸಂಗಡಗಳಲ್ಲಿ ಉಗ್ರವಾದ ಖಂಡನೆ ಹುಟ್ಟಿತು. ಕ್ರೈಸ್ತ ಪುರಾಣದಲ್ಲಿ ಆಡಮ್ ಮೊದಲನೆಯ ಮನುಷ್ಯ. ಅವನು ಬಹುಕಾಲ ಭಗವಂತನಲ್ಲಿ ಸಂಪೂರ್ಣ ಭಕ್ತಿ ನಂಬಿಕೆಗಳನ್ನಿಟ್ಟಿದ್ದನು. ಭಗವಂತನ ದ್ವೇಷಿಯಾದ ಸೈತಾನನು ಇದನ್ನು ಸಹಿಸದೆ ಆಡಮ್‌ನ ಮನಸ್ಸನ್ನು ಪ್ರೇರಿಸಿ ದುರ್ಮಾರ್ಗಕ್ಕೆ ಸೆಳೆದನು. ಇದರಿಂದ

ಆಡಮ್ ನರಕಭಾಗಿಯಾದನು. ತ್ರಿಮೂರ್ತಿ ತತ್ತ್ವವನ್ನು ಬಿಟ್ಟು ಏಕ ಮೂರ್ತಿ ತತ್ತ್ವವನ್ನು ಹಿಡಿದ ಈ ಆಡಮ್‌ನನ್ನು ಕ್ರೈಸ್ತರು 'ಪತಿತನಾದ ಎರಡನೆಯ ಆಡಮ್'' ಎಂದು ಕರೆದರು. ಕ್ರೈಸ್ತ ಮತ ಧರ್ಮಕ್ಕೆ ಉಚಿತವಲ್ಲದ ರೀತಿಯಲ್ಲಿ ತ್ರಿಮೂರ್ತಿ ತತ್ತ್ವವಾದಿಗಳು ಆಡಮ್‌ನನ್ನು ತುಚ್ಛವಾಗಿ ಕಂಡು ಬಹುವಾಗಿ ಅವಮಾನ ಪಡಿಸಿದರು. ಅವನು ಕ್ರೈಸ್ತ ಮತಕ್ಕೆ ಸೇರಿದ ಸಾಮಾನ್ಯ ವ್ಯಕ್ತಿಯಂತಲ್ಲದ ಪಾದ್ರಿಯಾಗಿದ್ದುದರಿಂದ ಈ ಖಂಡನ ಅವಮಾನಗಳು ಹೆಚ್ಚಿದುವು. ಕಲ್ಕತ್ತೆಯಲ್ಲಿನ ಪಾದ್ರಿಮುರಾಧಿಕಾರಿಯು (ಬಿಷಪ್) ಆಡಮ್‌ನನ್ನು ಗಡೀಪಾರು ಮಾಡಬೇಕೆಂಬ ಸೂಚನೆಯನ್ನು ಇಂಗ್ಲೆಂಡಿನ ಅಧಿಕಾರಿಗಳಿಗೆ ತಿಳಿಸಿ ಅವರಿಂದ ಒಂದು ಆಜ್ಞೆಯನ್ನು ತರಿಸಲು ಪ್ರಯತ್ನ ಮಾಡಿದನು. ಆದರೆ ಇಂಗ್ಲೆಂಡಿನ ಅಧಿಕಾರಿಗಳು ಅದಕ್ಕೆ ಒಪ್ಪದಿರಲು ಆಡಮ್ ಕಲ್ಕತ್ತೆಯಲ್ಲಿಯೇ ಉಳಿಯುವಂತಾಯಿತು. ರಾಮಮೋಹನರೇ ಆಡಮ್‌ನ ಈ ಮತಾಂತರ ಪರಿವರ್ತನೆಗೆ ಕಾರಣರೆಂದು ಅವರ ಮೇಲೆಯೂ ಹಿಂದೂ ಶಾಸ್ತ್ರಗಳ ಮೇಲೆಯೂ ತಮ್ಮ ಖಂಡನೆಯ ಕತ್ತಿಯನ್ನು ಬೀಸಿದರು. ಮೊದಲೇ ಕುಮುಲುತ್ತಿದ್ದ ರೋಷಾಗ್ನಿಯು ಉರಿಯಲು ಮೊದಲಾಯಿತು. ತಮ್ಮ "ಭಾರತ ಮಿತ್ರ'' ಎಂಬ ಪತ್ರಿಕೆಯಲ್ಲಿಯೂ, "ಸಮಾಚಾರ ದರ್ಪಣ'' ಎಂಬ ಬಂಗಾಳಿ ಪತ್ರಿಕೆಯಲ್ಲಿಯೂ ಉಗ್ರವಾದ ಲೇಖನಗಳನ್ನು ಬರೆದರು. ರಾಮಮೋಹನರು ಸ್ವಲ್ಪವೂ ಹಿಂತೆಗೆಯದೆ ಅವಕ್ಕೆಲ್ಲ ಉತ್ತರಗಳನ್ನು ಸಿದ್ಧಪಡಿಸಿ ಪ್ರಕಟಿಸಿದರು. ಕೆಲವು ಕಾಲದ ಮೇಲೆ ಅವರ ಉತ್ತರಗಳನ್ನು 'ಸಮಾಚಾರ ದರ್ಪಣ'ದಲ್ಲಿ ಪ್ರಕಟಿಸುವ ಸಾಮಾನ್ಯ ಮರ್ಯಾದೆಯೂ ಅವರಿಗೆ ದೂರವಾದ ಕಾರಣ ತಮ್ಮ ಲೇಖನಗಳ ಪ್ರಕಟನೆಗಾಗಿ ರಾಮಮೋಹನರು ೧೮೨೩ರಲ್ಲಿ "ಬ್ರಾಹ್ಮಣ ಪತ್ರಿಕೆ'' ಎಂಬ ಪತ್ರಿಕೆಯನ್ನು ಪ್ರಕಟಿಸಿದರು. ಈ ಪತ್ರಿಕೆಯ ಹನ್ನೆರಡು ಸಂಚಿಕೆಗಳಲ್ಲಿ ನಾಲ್ಕು ಮಾತ್ರ ಉಳಿದಿವೆ. ಕ್ರೈಸ್ತರ ತ್ರಿಮೂರ್ತಿ ತತ್ತ್ವವನ್ನು ಖಂಡಿಸಿ ಅದು ಹಿಂದೂ ಬಹುದೈವ ತತ್ತ್ವಕ್ಕೆ ಸಮನಾದುದೆಂಬುದನ್ನು ವ್ಯಕ್ತಪಡಿಸಿದರು. ಈ ಲೇಖನಗಳನ್ನೆಲ್ಲ ತಮ್ಮ ನಿಜವಾದ ಹೆಸರಿನಿಂದ ಪ್ರಕಟಿಸದೆ ಶಿವಪ್ರಸಾದ ಶರ್ಮ ಎಂಬ ಕಲ್ಪಿತ ಹೆಸರಿನಿಂದ ಪ್ರಕಟಿಸಿದರು. ರಾಮಮೋ

ಹನರ ಈ ಲೇಖನ ಪರಂಪರೆಗಳಿಂದ ಪಾದ್ರಿಗಳು ತಮ್ಮ ಸೋಲನ್ನು ಪ್ರತ್ಯಕ್ಷವಾಗಿ ಒಪ್ಪಿಕೊಳ್ಳದಿದ್ದರೂ ಮುಂದೆ ಚರ್ಚೆಯನ್ನು ಬೆಳೆಸದೆ ಸುಮ್ಮನಾದರು.

ರಾಮಮೋಹನರಿಗೆ ಹೊಸ ಜವಾಬ್ದಾರಿ ಒದಗಿತು. ಆಡಮ್ ಪಾದ್ರಿಗಳ ಸಹವಾಸವನ್ನು ಬಿಟ್ಟಮೇಲೆ ಕಲ್ಕತ್ತೆಯಲ್ಲಿ ಏಕಮೂರ್ತಿ ದೈವ ಸಂಘವೊಂದನ್ನು ಸ್ಥಾಪಿಸಿದನು; ಅದಕ್ಕೆ ರಾಮಮೋಹನರೂ ಸಹಾಯ ಮಾಡಿದರು. ಅದರ ಉದ್ದೇಶವು ಮೂಢನಂಬಿಕೆಗಳನ್ನು ಪರಿಹಾರ ಮಾಡುವುದೂ ಕ್ರೈಸ್ತಮತದ ತತ್ತ್ವಗಳನ್ನು ಜನರಲ್ಲಿ ವಿಶದಪಡಿಸುವುದೂ ಆಗಿತ್ತು; ಆದರೆ ಕ್ರೈಸ್ತ ಮತಕ್ಕೆ ಜನರನ್ನು ಸೇರಿಸುವುದಾಗಿರಲಿಲ್ಲ. ಈ ಉದ್ದೇಶಕ್ಕಾಗಿ ಕ್ರೈಸ್ತ ಮತವಿಚಾರಗಳ ಚರ್ಚೆಯೂ, ವಿದ್ಯಾ ಪ್ರಚಾರವೂ, ಪುಸ್ತಕ ಪ್ರಕಟನೆಯೂ ಅವಶ್ಯವಾಗಿದ್ದುವು. ಮಕ್ಕಳ ಇಂಗ್ಲಿಷ್ ವಿದ್ಯಾಭ್ಯಾಸಕ್ಕಾಗಿ ಒಂದು ಆಂಗ್ಲೋ-ಹಿಂದೂ ಪಾಠಶಾಲೆ ಏರ್ಪಾಡಾಯಿತು. ಪುಸ್ತಕ ಪ್ರಕಟನೆಗೆ ಸಹಾಯವಾಗಲು ಒಂದು ಮುದ್ರಣಾಲಯವೂ ಸ್ಥಾಪಿತವಾಯಿತು. ಇದೇ ಹಿಂದೆ ಹೇಳಿರುವ "ಯೂನಿಟೇರಿಯನ್ ಪ್ರೆಸ್" ಎಂಬುದು. ರಾಮಮೋಹನರೇ ಇದರ ಚಾಲಕರಾಗಿದ್ದರು ಮತ್ತು ಈ ಮುದ್ರಣಾಲಯವು ಅವರ ಸ್ವಂತ ಆಸ್ತಿಗೆ ಸೇರಿದ್ದಾಗಿತ್ತು.

ಈ ಸಂಘಕ್ಕೆ ಅನೇಕ ಪ್ರಸಿದ್ಧ ಐರೋಪ್ಯರೂ ಭಾರತೀಯರೂ ಸೇರಿದರು. ಭಾರತೀಯರಲ್ಲಿ ಮುಖ್ಯರಾದವರು ದ್ವಾರಕಾನಾಥ ಠಾಕೂರರು ಮತ್ತು ಪ್ರಸನ್ನ ಕುಮಾರ ಠಾಕೂರರು. ಆಡಮ್ ಪ್ರತಿ ಭಾನು ಬೆಳಗ್ಗೆ ಪ್ರಾರ್ಥನೆ ನಡೆಸುತ್ತಿದ್ದನು. ರಾಮಮೋಹನರೂ, ಅವರ ಮನೆಯವರೂ, ಇತರ ಸ್ನೇಹಿತರೂ, ಕ್ರಮವಾಗಿ ಆ ಪ್ರಾರ್ಥನೆಗಳಿಗೆ ಹೋಗುತ್ತಿದ್ದರು. ರಾಮಮೋಹನರು ಅಲ್ಲಿಗೆ ಹೋಗುತ್ತಿದ್ದುದು ಅವರ ದ್ವೇಷಿಗಳ ಆಕ್ಷೇಪಣೆಗೆ ಅವಕಾಶವಾಯಿತು. ಅವರು ಏಕಮೂರ್ತಿ ದೈವ ಸಂಘಕ್ಕೆ ಏಕೆ ಹೋಗಬೇಕೆಂದು ಅವರು ಪ್ರಶ್ನಿಸಲು ರಾಮಮೋಹನರು ಹೀಗೆ ಉತ್ತರ ಹೇಳಿದರು: "ಏಕಮೂರ್ತಿತತ್ತ್ವವಾದಿಗಳು ದೇವರೊಬ್ಬನೇ

ಎಂದು ನಂಬಿರುವರು, ಸಾರುವರು ಈ ಅಭಿಮತವನ್ನೇ ಕ್ರೈಸ್ತ ಮತ ಗ್ರಂಥಗಳೂ ಹಿಂದೂ ಆರ್ಷೇಯ ಶಾಸ್ತ್ರಗಳಾದ ವೇದಗಳೂ ಸಾರುತ್ತಿರುವುವು ”

ರಾಮಮೋಹನರು ತಮ್ಮ ಮತ್ತು ತಮ್ಮ ಸ್ನೇಹಿತರ ಪ್ರಯತ್ನದಿಂದ ವಿಲಿಯಂ ಆಡಮ್‌ನ ಸಂಸ್ಥೆಯ ನಿರ್ವಾಹಕ್ಕಾಗಿ ಹೆಚ್ಚು ಹಣವನ್ನು ಸಂಗ್ರಹಿಸಿದರು ರಾಮಮೋಹನರು ೫,೦೦೦ ರೂಪಾಯಿಗಳನ್ನೂ ದ್ವಾರಕಾನಾಥ ಠಾಕೂರರು ೨,೫೦೦ ರೂಪಾಯಿಗಳನ್ನೂ ದಾನಮಾಡಿದರು ಇಷ್ಟು ದ್ರವ್ಯ ಸಂಪತ್ತಿಯೂ ಪ್ರಸಿದ್ಧ ಪುರುಷರ ಸೇವಾ ಬಲವೂ ದೊರಿತರೂ ಈ ಸಂಸ್ಥೆಯು ಒಂದು ಕಡೆ ಐರೋಪ್ಯರ ಸಹಾನುಭೂತಿಯನ್ನು ಪಡೆಯದೆಯೂ ಮತ್ತೊಂದು ಕಡೆ ದೇಶೀಯ ವಿದ್ಯಾವಂತರ ಒತ್ತಾಸೆಯನ್ನು ಪಡೆಯದೆಯೂ ಇತ್ತು ಆಡಮ್‌ನ ಅನುಯಾಯಿಗಳ ಸಂಖ್ಯೆಯು ಕ್ರಮೇಣ ಕಡಿಮೆಯಾಯಿತು ಈ ಏಕಮೂರ್ತಿ ಸಂಘವನ್ನು ಊರ್ಜಿತ ಪಡಿಸಲು ಪುನಃ ಪುನಃ ಕೆಲವು ಪ್ರಯತ್ನಗಳು ನಡೆದುವು ಆದರೆ ಅವು ಫಲಿಸಲಿಲ್ಲ ರಾಮಮೋಹನರು ಮಾತ್ರ ಸ್ವಲ್ಪವೂ ಎದೆಗುಂದದೆ ಆಡಮ್‌ನನ್ನು ಸ್ಥಿರೀಕರಿಸದೆ ಏಕರೀತಿಯಾಗಿ ವರ್ತಿಸಿದರು ಈ ಕಾಲದಲ್ಲಿ ಆಡಮ್‌ನ ಜೀವನ ವೆಚ್ಚಗಳನ್ನೆಲ್ಲ ರಾಮಮೋಹನರೇ ವಹಿಸಿದ್ದಲ್ಲದೆ ಮುಂದೆ ತಮ್ಮ ಉಯಿಲಿನಲ್ಲಿಯೂ ಆಡಮ್‌ನಿಗೂ ಅವನ ಕುಟುಂಬಕ್ಕೂ ಹಣವನ್ನು ನಿಗದಿಮಾಡಿದರು ಇದರಿಂದ ಆಡಮ್ಮನಿಗೂ ರಾಮಮೋಹನರಿಗೂ ಇದ್ದ ಸ್ನೇಹದ ಆಳವೆಷ್ಟೆಂಬುದೂ, ಅವರ ಮನೋವೈಶಾಲ್ಯದ ಮತ್ತು ಔದಾರ್ಯದ ಘನತೆ ಎಷ್ಟೆಂಬುದೂ, ವ್ಯಕ್ತವಾಗುವುವು

ರಾಮಮೋಹನರು ನಡೆಸಿದ ಏಕಮೂರ್ತಿ ಮತ್ತು ತ್ರಿಮೂರ್ತಿ ತತ್ತ್ವವಾದದ ಜೊತೆಗೆ ಮತ್ತೊಬ್ಬರ ಪ್ರತಿಭಟನೆಯನ್ನೂ ಎದುರಿಸಬೇಕಾಗಿತ್ತು ಆ ಕಾಲದಲ್ಲಿ ಕಲ್ಕತ್ತೆಯಲ್ಲಿ ಡಾಕ್ಟರ್ ಟೆಟ್ಲರ್ ಎಂಬವನು ವೈದ್ಯಶಾಲೆಯ ಅಧಿಕಾರಿಯೂ, ಹಿಂದೂ ಕಾಲೇಜಿನ ಪ್ರಾಧ್ಯಾಪಕನೂ, ಆಗಿದ್ದನು. ಅವನು ಸ್ವಭಾವತಃ ವಿಲಕ್ಷಣ ಮತಿಯುವನಾಗಿದ್ದನು.

ಅವನು ವೈದ್ಯದೊಂದಿಗೆ ಮತವಿಚಾರಗಳಲ್ಲಿಯೂ ಆಸಕ್ತಿಯನ್ನು ತೋರಿಸಿ ತ್ರಿಮೂರ್ತಿ ದೈವ ಪಕ್ಷವನ್ನು ಹಿಡಿದು ಲೇಖನಗಳನ್ನು ಬರೆಯುತ್ತಿದ್ದನು. ದೇವರು ಮನುಷ್ಯ ವೇಷದಲ್ಲಿ ಅವತಾರವೆತ್ತುವನೆಂದು ನಂಬಿದ್ದನು. ಇವನ್ನು ರಾಮಮೋಹನರು ಅರಿತುಕೊಂಡು ಆ ನಂಬಿಕೆಯು ಹಿಂದೂ ಮತ್ತು ಕ್ರೈಸ್ತಮತಗಳಿಗೆ ಸಾಮಾನ್ಯ ಲಕ್ಷಣವಾದುದರಿಂದ ಟಿಟ್ಲರನಿಗೆ ತಾವಿಬ್ಬರೂ ಏಕಮೂರ್ತಿ ದೈವವಾದದ ಪ್ರಚಾರವನ್ನು ನಡೆಸುವುದರಲ್ಲಿ ಸಹಕರಿಸಬೇಕೆಂದು ಪತ್ರ ಬರೆದರು. ರಾಮಮೋಹನರು ಏಕಮೂರ್ತಿ ದೈವವಾದಿಯೆಂಬುದು ಪ್ರಸಿದ್ಧವಾಗಿತ್ತು. ಟಿಟ್ಲರನಿಗೆ ರಾಮಮೋಹನರ ಕಾಗದದಿಂದ ಕೋಪಬಂದು ೧೮೨೩ ರ ಮೇ ತಿಂಗಳಲ್ಲಿ ವಾದಕ್ಕೆ ಪ್ರಾರಂಭವಾಯಿತು. ಕ್ರೈಸ್ತರು ಏಸುವಿನ ದೇವತ್ವದಲ್ಲಿಟ್ಟಿದ್ದ ನಂಬಿಕೆಯನ್ನು ಹಿಂದೂಗಳ ನಂಬಿಕೆಯೊಂದಿಗೆ ಹೋಲಿಸಿದ್ದು ಟಿಟ್ಲರನಿಗೆ ಸರಿಬೀಳದೆ ರಾಮಮೋಹನರನ್ನೂ ಹಿಂದೂ ಮತವನ್ನೂ ದೂಷಿಸಿದನು. ಇದಕ್ಕೆ ಉತ್ತರವಾಗಿ ರಾಮಮೋಹನರು ಈ ರೀತಿ ಬರೆದರು :

" ದೇವರು ಬಣ್ಣದಲ್ಲಿಯೂ, ಆಕಾರದಲ್ಲಿಯೂ ಯಾವ ಗೊತ್ತಾದ ನಿಯಮಕ್ಕೂ ಒಳಪಡದೆ ಮನುಷ್ಯ ಜನ್ಮವನ್ನು ಪಡೆಯುವನೆಂಬ ನಂಬಿಕೆಯ ಆಧಾರದ ಮೇಲೆ ನಮ್ಮ ನಿಮ್ಮ ಮತಗಳು ಹುಟ್ಟಿರತಕ್ಕದ್ದು. ಹೇಗೆ ಏಸು ದೇವನು ಜೂಡನ ವಂಶದಲ್ಲಿ, ಡೇವಿಡ್ಡನ ಸಂತತಿಯಲ್ಲಿ, ಜೋಸೆಫ್‌ನ ಶ್ರೇಷ್ಠಪುತ್ರನೋ, ಹಾಗೆಯೇ ರಾಮದೇವರು ರಘುವಂಶದಲ್ಲಿ, ಭಗೀರಥನ ಸಂತತಿಯಲ್ಲಿ, ದಶರಥನ ಶ್ರೇಷ್ಠಪುತ್ರನೆಂಬುದನ್ನು ತಿಳಿಯದೆ ಇರಲಾರಿರಿ. ರಾಮದೇವರು ರಘುವಂಶೀಯರಿಗೂ ಇತರರಿಗೂ ರಾಜನಾದಂತೆ ಏಸು ದೇವರು ಜ್ಯೂಸ್ ಮತ್ತು ಜೆಂಟೈಲರಿಗೆ ರಾಜನು. ಆಯಾ ಮತ ಗ್ರಂಥಗಳಿಂದ ಈ ಇಬ್ಬರೂ ಅದ್ಭುತ ಕಾರ್ಯಗಳನ್ನು ನಡೆಸಿದಂತೆ ತಿಳಿದು ಬರುತ್ತದೆ. ಇಬ್ಬರೂ ಭೂಲೋಕದಲ್ಲಿ ಸೈತಾನನ ಪ್ರಲೋಭಗಳಿಗೆ ಸಿಕ್ಕಿದರು ; ಇಬ್ಬರನ್ನೂ ಲೋಕವು ಈಗಲೂ ಪೂಜಿಸುವುದು. ದೇವರು ಜೂಡನ ವಂಶದಲ್ಲಿ ಹುಟ್ಟುವುದು ಸಾಧ್ಯವಾದರೆ ಅದೇ ದೇವರು ರಘುವಿನ ವಂಶದಲ್ಲಾಗಲಿ ಅಥವಾ ಇತರ ಜನಾಂಗದಲ್ಲಾಗಲಿ ಹುಟ್ಟುವುದು ಹೇಗೆ ಅಸಾಧ್ಯವಾದೀತು ?

“ ನಿಮ್ಮ ವಾದದಂತೆ ಒಬ್ಬನೇ ದೇವರ ಮೂರು ರೂಪಗಳನ್ನು ನಂಬುವುದಕ್ಕೂ ಹಿಂದೂಗಳ ಅಭಿಪ್ರಾಯದಂತೆ ದೇವರು ಮುನ್ನೂರು ಮೂವತ್ತು ಕೋಟಿ ರೂಪಗಳನ್ನು ಧರಿಸಿರುವನೆಂದು ಹೇಳುವುದಕ್ಕೂ ವ್ಯತ್ಯಾಸವುಂಟೆಂದು ಹೇಳಬಹುದು ಆದರೆ ಈ ಸಂಖ್ಯಾತ್ಮಕ ವಾದವೆಲ್ಲ ಮನುಷ್ಯನ ತರ್ಕದಿಂದ ಹುಟ್ಟಿರುವುದರಿಂದಲೂ ಈ ತರ್ಕವು ನಿರ್ದುಷ್ಟವಲ್ಲದ್ದರಿಂದಲೂ ಸರ್ವಶಕ್ತನಾದ ದೇವರ ಮೂರು ರೂಪಗಳನ್ನು ಒಂದು ಮಾಡತಕ್ಕ ಅಥವಾ ಒಂದು ರೂಪವನ್ನು ಮೂರಾಗಿ ಮಾಡತಕ್ಕ ವಾದವೇ ಮುನ್ನೂರು ಮೂವತ್ತು ಕೋಟಿ ದೇವರುಗಳನ್ನು ಏಕವಾಗಿ ಅಥವಾ ಬಹುವಾಗಿ ಎಣಿಸಬಹುದು ಈ ಭಿನ್ನ ಭಾವನೆಗಳಿಗೆ ಮನುಷ್ಯನ ತರ್ಕದಲ್ಲಿನ ಭ್ರಮೆಯೇ ಕಾರಣ ”

ರಾಮಮೋಹನರು ಈ ಉತ್ತರಗಳನ್ನು “ ರಾಮದಾಸ ” ಎಂಬ ಅಂಕಿತದಿಂದ ಬರೆದರು ಇದರಿಂದ ಟಿಟ್ಲರನ ತನ್ನ ಸೋಲನ್ನು ಒಪ್ಪಿಕೊಳ್ಳುವನೆ [illegible] ಒಂದರೂ ಹಾಗೆ ಮಾಡದೆ ಚರ್ಚೆಯನ್ನು ಮುಂದುವರಿಸಿದನು. “ ಬಂಗಾಳಿ ಹರ್ಕಾರ ” ಎಂಬ ಪತ್ರಿಕೆಯಲ್ಲಿ ತನ್ನ ಉತ್ತರವನ್ನು ಬರೆದನು. ಆದರೆ ಅದರಲ್ಲಿ [illegible] ಸಮ[illegible]ನೆಗಿಂತ ಬೈಗುಳವೇ ಹೆಚ್ಚಾಗಿತ್ತು. ಅದರಲ್ಲಿ ಹಿಂದೂ ಪ್ರತಿಮಾರಾಧನೆಯೂ ಕ್ರೈಸ್ತ ಏಕಮೂರ್ತಿವಾದವೂ ಒಂದೆಂದೂ ಎರಡೂ ಸ್ವತಂತ್ರ ಜನ್ಯವಾದವೆಂದೂ ಹೇಳಿದನು. ಇದಕ್ಕೆ ಪೋಷಕವಾಗಿ “ ಬಂಗಾಳಿ ಹರ್ಕಾರ ” ದ ಸಂಪಾದಕನೂ ಹೀಗೆ ವಾದಿಸಿದನು —

“ ದೇವರು ಮನುಷ್ಯಾಕಾರದಲ್ಲಿದ್ದನೆಂಬ ನಮ್ಮ ಅಭಿಪ್ರಾಯಕ್ಕೂ ಸರ್ವಶಕ್ತನಾದ ದೇವರು ಕಲ್ಲು, ಲೋಹ, ಮರಗಳಿಂದ ಮಾಡಲ್ಪಟ್ಟಿವನೆಂದು ಭಾವಿಸುವ ಹಿಂದೂಗಳ ಅಭಿಪ್ರಾಯಕ್ಕೂ ಬಹಳ ವ್ಯತ್ಯಾಸವುಂಟೆಂದು ಹೇಳಬೇಕಾಗುತ್ತದೆ ”

ಇವಕ್ಕೆ ರಾಮಮೋಹನರು ಈ ರೀತಿ ಉತ್ತರ ಬರೆದರು —

“ಕೌಸಲ್ಯೆ ದಶರಥರ ಮಗನಾಗಿ ಜನ್ಮವೆತ್ತಿದ ರಾಮದೇವರು ಮರ, ಕಲ್ಲು, ಲೋಹಗಳಿಂದ ಆದವನೆಂದು ಭಾವಿಸುವ ಒಬ್ಬ ಹಿಂದೂವಾದರೂ

ಭರತಖಂಡದಲ್ಲಿ ಇರುವನೆ ? ಇಂಥವನು ಒಬ್ಬನಾದರೂ ಇದ್ದ ಪಕ್ಷದಲ್ಲಿ ನಿಮ್ಮ ತಪ್ಪು ಅಭಿಪ್ರಾಯಕ್ಕೆ ಸ್ವಲ್ಪವಾದರೂ ಕಾರಣವುಂಟು. ಹಿಂದೂ ದೇವಾಲಯಗಳಲ್ಲಿ ಭಕ್ತರ ಮನಸ್ಸನ್ನು ಆಕರ್ಷಿಸುವ ಸದುದ್ದೇಶದಿಂದ ಪ್ರತಿಷ್ಠೆಮಾಡಿರುವ ನೂರಾರು ವಿಗ್ರಹಗಳನ್ನೇ ನೋಡಿ ಕಾಣಬಹುದು. ಆದರೂ ಅನೇಕ ಪೂಜ್ಯ ಹಿಂದೂಗಳು ಇಂಥ ವಿಗ್ರಹಗಳು ಪೂಜೆಗೆ ಅವಶ್ಯವೆಂದು ಭಾವಿಸುವುದಿಲ್ಲ ಮತ್ತು ರಾಮನನ್ನು ವಿಗ್ರಹವಿಲ್ಲದೆಯೇ ಪೂಜಿಸುತ್ತಾರೆ. ಆದರೆ ಇದರಿಂದಲೇ ದೇವರ ಅಥವಾ ಮನುಷ್ಯನ ಒಂದು ವಿಗ್ರಹವನ್ನಾಗಲಿ ಒಂದು ಪಟವನ್ನಾಗಲಿ ಆ ದೇವರ ಅಥವಾ ಮನುಷ್ಯನ ಪ್ರತಿಕೃತಿಯೆಂದಾಗಲಿ ಅಥವಾ ನಿಜವಾದ ಆ ವ್ಯಕ್ತಿಗಳನ್ನು ಈ ವಿಗ್ರಹಾದಿ ರೂಪಗಳಿಗೆ ರೂಪಾಂತರಗೊಳಿಸಿದೆ ಎಂದಾಗಲಿ ಭಾವಿಸಬಹುದೆ ? ಇದು ವಾಸ್ತವವಾದಲ್ಲಿ ತಮ್ಮ ಆಕೃತಿಗಳನ್ನು ಚಿತ್ರರೂಪದಲ್ಲಿ ಬರೆಸಿದ ಅಥವಾ ಕೆತ್ತಿಸಿದ ಮನುಷ್ಯರು ತಮ್ಮ ನಿಜವಾದ ಸತ್ವವನ್ನು ಕಳೆದುಕೊಳ್ಳಬೇಕಾಯಿತು— ತಮ್ಮ ಮೂಲಭೂತ ಗುಣಗಳು ಕಲ್ಲು, ಬಣ್ಣ, ಪಟಗಳಾಗಿ, ಕಳೆಗುಂದುವುದರಿಂದ. ಕ್ರೈಸ್ತರ ದೇವಾಲಯಗಳಲ್ಲಿನ ಏಸುವಿನ ಪ್ರತಿಮೆಯಿಂದಲೂ ಹಿಂದೂ ದೇವಾಲಯಗಳಲ್ಲಿನ ರಾಮದೇವರ ಪ್ರತಿಮೆಯಿಂದಲೂ ಆ ವ್ಯಕ್ತಿಗಳೇ ಅವೆಂದು ಯಾರೂ ವಾದಿಸಲಾರರು.''

ಈ ಉತ್ತರವು ಟಿಟ್ಲರನ ಬಾಯನ್ನು ಕಟ್ಟಿ ವಾದವನ್ನು ಮುಕ್ತಾಯಗೊಳಿಸಿತು.

ಕಲ್ಕತ್ತೆಯಲ್ಲಿನ ಕ್ರೈಸ್ತಮಠಾಧಿಕಾರಿ ಮಿಡ್ಲ್‌ಟನ್ ಎಂಬವನು ರಾಮಮೋಹನರಿಗೆ ಕ್ರೈಸ್ತಮತದಲ್ಲಿದ್ದ ಆಸಕ್ತಿಯನ್ನು ನೋಡಿ ಅವರನ್ನು ತನ್ನಲ್ಲಿಗೆ ಬರಮಾಡಿಕೊಂಡು, ಅವರು ಆ ಮತವನ್ನವಲಂಬಿಸಬೇಕೆಂದು ಪ್ರಾರ್ಥಿಸಿದನು. ಹಾಗೆ ಅವಲಂಬಿಸಿದರೆ ಅನೇಕ ಪ್ರಾಪಂಚಿಕ ಸೌಖ್ಯಗಳು ಒದಗುವುದಾಗಿ ಸೂಚಿಸಿದನು. "ಜೀವಿಸಿರುವಾಗ ಎಲ್ಲರೂ ಕೊಂಡಾಡುವರು ; ಸತ್ತಮೇಲೆ ಸ್ಮರಿಸಿಕೊಂಡು ದುಃಖಿಸುವರು, ಇಂಗ್ಲೆಂಡಿನಲ್ಲಿಯೂ ಇಂಡಿಯದಲ್ಲಿಯೂ ಜನರು ಗೌರವಿಸುವರು , ನವೀನ ಭರತಖಂಡದಲ್ಲಿ ಕ್ರೈಸ್ತಮತಾಚಾರ್ಯನೆಂಬ ಹೆಸರು ಮುಂದಿನ ಚರಿತ್ರೆ

ಯಲ್ಲಿ ಸಲ್ಲುವುದು "—ಈ ರೀತಿ ಸೂಚಿಸಿದ ಮಠಾಧಿಕಾರಿಯಲ್ಲಿ ರಾಮ ಮೋಹನರಿಗೆ ಕೋಪಬಂದಿತು ಪ್ರಾಪಂಚಿಕ ಸುಖ ಖ್ಯಾತಿಗಳಿಗಾಗಿ ತನ್ನನ್ನು ಕ್ರೈಸ್ತಮತಕ್ಕೆ ಸೇರಬೇಕೆಂದ ಹೇಳಿದನೇ ಹೊರತು ಆ ಮತದಲ್ಲಿ ತನಗಿದ್ದ ಆಸಕ್ತಿಗಾಗಲಿ ತನ್ನ ದೇಶದ ಅಭಿವೃದ್ಧಿಗಾಗಲಿ ಸೇರಬೇಕೆಂದು ಹೇಳಲಿಲ್ಲವಲ್ಲ ಎಂದು ರಾಮಮೋಹನರಿಗೆ ಅಸಮಾಧಾನವಾಯಿತು ಮಿಡ್ಲ್ಟನ್ನಿನ ಭೇಟಿ ಮುಗಿಸಿಕೊಂಡು ಮನೆಗೆ ಹಿಂದಿರುಗುತ್ತ ದಾರಿ ಯಲ್ಲಿ ಆಪ್ತನಾದ ಆಡಂನನ್ನು ಸಂದರ್ಶಿಸಿ, ನಡೆದ ಸಂದರ್ಭವನ್ನು ಅವ ನಲ್ಲಿ ವಿವರಿಸಿ, ವ್ಯಥೆಪಟ್ಟುಕೊಂಡರಂತೆ ಅವರು ಮಠಾಧಿಪತಿಯನ್ನು ಪುನಃ ಭೇಟಿ ಮಾಡಲಿಲ್ಲ ಒಂದು ರೀತಿಯಲ್ಲಿ ಬಿಷಪ್ಪಿನ ಮಾತು ವಾಸ್ತವವೇ ಆಗಿತ್ತು ರಾಮಮೋಹನರು ಕ್ರೈಸ್ತಮತವನ್ನು ಕೈಗೊಂಡಿ ದ್ದರೆ ಆ ಮತಚರಿತ್ರೆಯು ಇಂದಿರುವುದಲ್ಲಂತೂ ಬೇರೆ ರೀತಿಯಾಗಿಯೇ ಪರಿಣಮಿಸುತ್ತಿತ್ತು ಈ ಸಂದರ್ಭದಿಂದ ರಾಮಮೋಹನರಿಗೆ ಬಹಳ ಬೇಸರಿಕೆಯುಂಟಾಯಿತು ಅವರು ಕಾಲಕ್ರಮದಲ್ಲಿ ಕ್ರೈಸ್ತಮತವನ್ನು ಅವಲಂಬಿಸುವರೆಂದು ನಿರೀಕ್ಷಿಸುತ್ತಿದ್ದವರಿಗೆ ಅವರ ನಿರೀಕ್ಷಣೆಯು ತಪ್ಪಿತು ದೆಂದೂ ಭಾಸವಾಯಿತು

# ಪ್ರಕರಣ ೬

## ಪತ್ರಿಕೋದ್ಯಮ—ವೃತ್ತಪತ್ರಿಕಾ ಕಾನೂನು ನಿರೋಧ —ಇಂಗ್ಲಿಷ್ ವಿದ್ಯೆಗೆ ಪ್ರೋತ್ಸಾಹ

ಭರತಖಂಡದಲ್ಲಿ ಪತ್ರಿಕೋದ್ಯಮವು ವಿದೇಶೀಯರಿಂದಲೇ ಪ್ರಾರಂಭವಾಯಿತು. ಹದಿನೆಂಟನೆಯ ಶತಮಾನದ ಕೊನೆಭಾಗದಲ್ಲಿ ಇಂಗ್ಲೆಂಡಿನ ಜನತೆಯಲ್ಲಿ ಮೂಡಿದ ನವ ಚೈತನ್ಯ ಸಮಾರಂಭದಿಂದ ಅಲ್ಲಿ ಅನೇಕ ಪತ್ರಿಕೆಗಳು ಹೊರಟವು. ಆ ನವಚೈತನ್ಯ ಸಮೀರವು ಭರತಖಂಡಕ್ಕೂ ವ್ಯಾಪಿಸಿ, ಕೆಲವು ವಿದೇಶೀಯರು ಇಲ್ಲಿಯೂ ಪತ್ರಿಕೆಗಳನ್ನು ಪ್ರಕಟಿಸಿದರು. ಸುಮಾರು ೧೭೮೦ರಲ್ಲಿ ಕಲ್ಕತ್ತೆಯಲ್ಲಿ ಹಿಕ್ಕಿ ಎಂಬಾತನು ಇಂಗ್ಲಿಷಿನಲ್ಲಿ "ಗೆಜಟ್" ಎಂಬ ಪತ್ರಿಕೆಯನ್ನು ಹೊರಡಿಸಿದನು. ಆಗಿನ ಪತ್ರಿಕೆಗಳು ವ್ಯಾಪಾರದೃಷ್ಟಿಯಿಂದಾಗಲಿ ವಿದ್ಯಾಪ್ರಚಾರ ದೃಷ್ಟಿಯಿಂದಾಗಲಿ ಹೆಚ್ಚು ಪ್ರಯೋಜನಕಾರಿಗಳಾಗಿರಲಿಲ್ಲ. ದೇಶೀಯರಿಗೆ ಇಂಗ್ಲಿಷ್ ಬರದೆ ಇದ್ದುದೇ ಇದಕ್ಕೆ ಮುಖ್ಯಕಾರಣ. ದೇಶೀಯರಿಂದ ದೇಶಭಾಷೆಗಳಲ್ಲಿ ಪ್ರಕಟಿತವಾದ ಪತ್ರಿಕೆಗಳು ಆಗ ಇರಲಿಲ್ಲವೆಂದೇ ಹೇಳಬಹುದು.

ಆ ಕಾಲದಲ್ಲಿ ಪತ್ರಿಕಾಕರ್ತರ ಸ್ವಾತಂತ್ರ್ಯವನ್ನು ಬಂಧಿಸತಕ್ಕ ಯಾವ ಗೊತ್ತಾದ ಕಾನೂನೂ ಇರಲಿಲ್ಲ. ಆದರೂ ಕಂಪೆನಿ ಸರ್ಕಾರಕ್ಕೆ ಸಮ್ಮತವಲ್ಲದ ಸಮಾಚಾರಗಳು ಪತ್ರಿಕೆಗಳಲ್ಲಿ ಪ್ರಕಟವಾದರೆ ಸಂಪಾದಕರನ್ನು ದೇಶದಿಂದ ಹೊರಕ್ಕೆ ಗಡೀಪಾರು ಮಾಡುತ್ತಿದ್ದರು. ಲಾರ್ಡ್ ವೆಲ್ಲೆಸ್ಲಿಯು ಗವರ್ನರ್ ಜನರಲ್ಲಾಗಿ ಇಂಡಿಯಕ್ಕೆ ಬಂದಮೇಲೆ, ಸುಮಾರು ೧೭೯೮ರಲ್ಲಿ, ವೃತ್ತಪತ್ರಿಕಾ ಶಾಸನವು ರೂಢಿಗೆ ಬಂತು. ಆಗ ಇಂಗ್ಲೆಂಡಿಗೂ ಫ್ರಾನ್ಸಿಗೂ ವೈಮನಸ್ಯವಿದ್ದುದರಿಂದ ಇಂಡಿಯದಲ್ಲಿ ಪತ್ರಿಕಾ ಸಂಪಾದಕರು ಬ್ರಿಟಿಷರಿಗೆ ವಿರುದ್ಧವಾದ ಅಭಿಪ್ರಾಯಗಳನ್ನು ಜನರಲ್ಲಿ ಪ್ರಚಾರ ಮಾಡದೆ ಇರುವಂತೆ ನೋಡಿಕೊಳ್ಳಬೇಕಾಗಿತ್ತು. ಪತ್ರಿಕಾ

ಸಂಪಾದಕರು ತಾವು ಬರೆದ ಲೇಖನಗಳ ಹಸ್ತ ಪ್ರತಿಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅವಗಾಹನೆಗೆ ಕಳುಹಿಸಬೇಕಾಗಿತ್ತು ಮತ್ತು ಅವರು ಒಪ್ಪಿದ ಲೇಖನಗಳನ್ನು ಮಾತ್ರ ಪ್ರಕಟಿಸಬಹುದಾಗಿತ್ತು ದೇಶೀಯ ಪತ್ರಿಕೆಗಳಿಗೆ ಬಂದ ಸ್ವಾತಂತ್ರ್ಯ ನಿರೋಧದ ಆಜ್ಞೆಗಳಲ್ಲಿ ಇದೇ ಮೊದಲನೆಯದು ಆಮೇಲೆ ವೈಸ್‌ರಾಯಾಗಿ ಬಂದ ಹೇಸ್ಟಿಂಗ್ಸನು ಭಾವವೈಶಾಲ್ಯವುಳ್ಳವನಾಗಿದ್ದನು ಸರ್ಕಾರದ ಕಾನೂನುಗಳನ್ನು ಸಾರ್ವಜನಿಕರ ಚರ್ಚೆ ವಿಮರ್ಶೆಗೆ ಒಳಪಡಿಸುವುದರಿಂದ ಸರ್ಕಾರಕ್ಕೆ ಹೆಚ್ಚು ಪ್ರಯೋಜನವೆಂದು ಬಹಿರಂಗವಾಗಿಯೇ ತಿಳಿಸಿದನು ಆದುದರಿಂದ ಪತ್ರಿಕೆಗಳ ಲೇಖನ ಸ್ವಾತಂತ್ರ್ಯಕ್ಕಿದ್ದ ನಿರ್ಬಂಧವನ್ನು ೧೮೧೮ ರ ಆಜ್ಞೆಯೊಂದರಿಂದ ತಗ್ಗಿಸಿದನು ಇದರಿಂದ ಪತ್ರಿಕಾಸಂಪಾದಕರಿಗೆ ಹೆಚ್ಚು ಲೇಖನ ಸ್ವಾತಂತ್ರ್ಯ ದೊರೆಯಿತು ಈ ದೇಶದ ಪತ್ರಿಕಾ ಸ್ವಾತಂತ್ರ್ಯ ಪ್ರೇಮಿಗಳಿಗೆ ಇದು ಹೆಚ್ಚಿನ ಸಂತೋಷವನ್ನು ಕೊಟ್ಟಿತು ಹೇಸ್ಟಿಂಗ್ಸನ ಈ ಧೈರ್ಯಯುತ ನಡೆವಳಿಕೆಯು ದೇಶದ ಮುನ್ನಡೆಗೆ ಅವಕಾಶವಾದುದರಿಂದ ಅವನನ್ನು ದೇಶೀಯರು ಅಭಿನಂದಿಸಿದರು ಪತ್ರಿಕೆಗಳ ಲೇಖನ ಸ್ವಾತಂತ್ರ್ಯ ಸಾಧನೆಯ ಚರಿತ್ರೆಯಲ್ಲಿ ಇದು ಒಂದು ಮಹತ್ವದ ಸಂದರ್ಭವೆನ್ನಬಹುದು ಇದರ ಪರಿಣಾಮವಾಗಿ ಜ್ಞಾನ ಪ್ರದವಾದ ಮತ್ತು ಭಾವವೈಶಾಲ್ಯವುಳ್ಳ ಪತ್ರಿಕೆಗಳು ಹುಟ್ಟಿ ಏಳಿಗೆಗೆ ಬರುವಂತಾಯಿತು ದೇಶೀಯರೂ ಪರಕೀಯರೂ ಪತ್ರಿಕೆಗಳನ್ನು ಸ್ಥಾಪಿಸಿದರು ಹೀಗೆ ಪ್ರಾರಂಭವಾದ ಮೊದಲನೆಯ ವಂಗೀಯ ಪತ್ರಿಕೆಯು "ಬಂಗಾಳಗೆಜಟ್" ಎಂಬ ವಾರ ಪತ್ರಿಕೆ ಇದು ಸಾಮಾನ್ಯ ಜನರಿಗೆ ಅರ್ಥವಾಗುವ ಭಾಷೆಯಲ್ಲಿಯೂ ರೀತಿಯಲ್ಲಿಯೂ ಜ್ಞಾನವನ್ನೂ ವಾರ್ತೆಗಳನ್ನೂ ಹರಡುತ್ತ ಬಹಳ ಉಪಯೋಗವಾಗಿದ್ದುದರಿಂದ ಅದಕ್ಕೆ ಹೆಚ್ಚಿನ ಶ್ಲಾಘನೆ ದೊರಯಿತು ರಾಮಮೋಹನರಿಗೆ ಈ ಪತ್ರಿಕೆಯಲ್ಲಿ ಪ್ರತ್ಯಕ್ಷ ಸಂಬಂಧ ಇಲ್ಲದಿದ್ದರೂ ಅದಕ್ಕೆ ಅವರ ಪ್ರೇರಣೆ ಪ್ರೋತ್ಸಾಹಗಳಿದ್ದಿರಬೇಕೆಂದು ಹೇಳಲು ಯಾವ ಸಂಶಯವೂ ಇಲ್ಲ ಏಕೆಂದರೆ, ಅವರ ಸಂಚಾಲಕರು ರಾಮಮೋಹನರ ಸ್ನೇಹಿತರೂ ಅನುಯಾಯಿಗಳೂ ಆಗಿದ್ದು 'ಆತ್ಮೀಯ ಸಭೆ' ಯ ಉತ್ಸಾಹಶಾಲಿ ಸದಸ್ಯರಾಗಿದ್ದರು "ಸಮಾಚಾರ ದರ್ಪಣ"

ಮತ್ತು "ಭಾರತ ಮಿತ್ರ" ಎಂಬ ಪತ್ರಿಕೆಗಳನ್ನು ಸೆರಂಪುರದ ಕ್ರೈಸ್ತ ಪಾದ್ರಿಗಳು ಪ್ರಕಟಿಸಲು ಆರಂಭಿಸಿದರು. ಮೊದಲನೆಯದು ಬಂಗಾಳಿಯಲ್ಲಿಯೂ ಎರಡನೆಯದು ಇಂಗ್ಲಿಷಿನಲ್ಲಿಯೂ ಇದ್ದುವು. "ಕಲ್ಕತ ಜರ್ನಲ್" ಮತ್ತು "ಜಾನ್‌ಬುಲ್" ಎಂಬವು ಬ್ರಿಟಿಷರಿಂದ ಪ್ರಾರಂಭವಾದ ಪತ್ರಿಕೆಗಳು. ಈ ದೇಶದಲ್ಲಿ ಬ್ರಿಟಿಷರ ಚಾಲಕತ್ವದಲ್ಲಿ ನಡೆದ ಪತ್ರಿಕೆಗಳಲ್ಲಿ ಇವೇ ಮೊದಲು. ದೇಶೀಯರ ಮತ್ತು ಹೊರಗಿನವರ ಪತ್ರಿಕೆಗಳೂ ಜೊತೆಜೊತೆಯಲ್ಲಿ ಸೌಹಾರ್ದದಿಂದಿದ್ದು ಉಪಯುಕ್ತವಾಗಿದ್ದುವು.

ಹೊಸದಾಗಿ ಒದಗಿದ್ದ ಅನುಕೂಲ ಸಂದರ್ಭದಿಂದ ಉತ್ತೇಜನಗೊಂಡು ರಾಮಮೋಹನರು ೧೮೨೧ನೆಯ ಡಿಸೆಂಬರ್ ೪ರಲ್ಲಿ "ಸಂವಾದ ಕೌಮುದಿ" ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಅದು ವಂಗ ಭಾಷೆಯಲ್ಲಿ ಪ್ರಕಟವಾಗುತ್ತಿತ್ತು. ಅದರಲ್ಲಿ ಎಂಟು ಪುಟಗಳಿದ್ದುವು. ಅದು ಪ್ರತಿಮಂಗಳವಾರ ಬೆಳಗ್ಗೆ ಹೊರಬೀಳುತ್ತಿತ್ತು. ಸಾರ್ವಜನಿಕ ಹಿತವೇ ಅದರ ಉದ್ದೇಶ. ಮತಾಚಾರ, ನೀತಿ ಮತ್ತು ರಾಜಕೀಯ ವಿಚಾರಗಳೂ, ದೇಶವಿದೇಶಗಳಲ್ಲಿನ ಘಟನೆಗಳೂ, ಸ್ವಾರಸ್ಯವಾದ ಸ್ವತಂತ್ರ ಲೇಖನಗಳೂ ಅದರಲ್ಲಿ ಪ್ರಕಟವಾಗುತ್ತಿದ್ದುವು. ರಾಮಮೋಹನರು ಅದರ ಚಾಲಕರು ಮಾತ್ರ ಆಗಿರದೆ ಮುಖ್ಯ ಸಂಪಾದಕರೂ ಆಗಿ ತಾವೇ ಅನೇಕ ಲೇಖನಗಳನ್ನು ಬರೆಯುತ್ತಿದ್ದರು. ಅದರ ತಿಂಗಳ ಚಂದಾ ಹಣವು ಎರಡು ರೂಪಾಯಿಗಳು. ಪತ್ರಿಕೆಗೆ ಜನರ ಪ್ರೋತ್ಸಾಹವನ್ನು ಪಡೆಯುವುದಕ್ಕಾಗಿ ಪತ್ರಿಕೆಯ ಉದ್ದೇಶವನ್ನು ರಾಮಮೋಹನರು ಹೀಗೆ ವಿವರಿಸಿದರು :

"ಈ ಬಗೆಯ ಉದ್ಯಮಕ್ಕೆ ಆವಶ್ಯಕವಾದ ದ್ರವ್ಯ ಸಂಪತ್ತಿಗಾಗಿ ದೇಶದ ಜ್ಞಾನ ಮತ್ತು ನೀತಿಯ ಅಭಿವೃದ್ಧಿಯಲ್ಲಿ ಆಸಕ್ತರಾಗಿರುವ ದೇಶೀಯರ ಪೋಷಣೆ ಉತ್ತೇಜನಗಳನ್ನು ಬಹಳ ನಮ್ರತೆಯಿಂದ ಆಶಿಸುತ್ತೇವೆ. ಈ ಪತ್ರಿಕೆಯು ಉಪಯೋಗವೂ ನೀತಿಬೋಧಕವೂ ಸ್ವಾರಸ್ಯವೂ ಆಗಿರುವಂತೆ ಮಾಡುವುದರಲ್ಲಿ ನಾವು ಸರ್ವಪ್ರಯತ್ನವನ್ನೂ ಮಾಡುವೆವೆಂದು ಭರವಸೆ ಕೊಡುತ್ತೇವೆ."

ಈ ಪತ್ರಿಕೆಗೆ ಆಗಿನ ಇತರ ಪತ್ರಿಕೆಗಳ ಮೆಚ್ಚಿಕೆ ದೊರೆಯಿತು "ಕಲ್ಕತ್ತ ಜರ್ನಲ್" ಹೀಗೆ ಬರೆಯಿತು.

"ಜ್ಞಾನ ಸಂಪಾದನೆಯು ಒಂದು ಪುಣ್ಯವೆಂದೂ ಅಜ್ಞಾನವು ಪೀಡೆಯೆಂದೂ ಭಾವಿಸುವುದಾದರೆ ಒಂದು ಉತ್ತಮ ಪತ್ರಿಕೆಯು ಎರಡ ನೆಯದನ್ನು ದೂರಮಾಡಿ ಮೊದಲನೆಯದನ್ನು ಅಭಿವೃದ್ಧಿಗೊಳಿಸುತ್ತದೆ ಅಂತಹ ಪತ್ರಿಕೆಗಳು ವಿದ್ಯಾ ಸಂಸ್ಥೆಗಳಷ್ಟೇ ನಮ್ಮ ಪ್ರೋತ್ಸಾಹನೆಗೆ ಪಾತ್ರ ವಾದುವು, ಏಕೆಂದರೆ ಪತ್ರಿಕೆಗಳೂ ವಿದ್ಯಾ ಸಂಸ್ಥೆಗಳೂ ಒಂದೇ ಮರದ ಎರಡು ಶಾಖೆಗಳಂತೆ ದೇಶೀಯರ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸೌಖ್ಯಕ್ಕೆ ಅವರ ಅಜ್ಞಾನವು ಒಂದು ದೊಡ್ಡ ಅಡ್ಡಿಯಾಗಿದ ಆದುದರಿಂದ ಈ ಅಡ್ಡಿಯನ್ನು ಹೋಗಲಾಡಿಸುವ ಯಾವ ಉದ್ಯಮವೂ ಪ್ರಯೋಜನಕಾರಿಯಾದುದೇ ಜನಾಂಗದಲ್ಲಿ ವಾಚನಾಭಿರುಚಿಯನ್ನೂ ವಿಚಾರಪರತೆಯನ್ನೂ ಜಾಗೃತಗೊಳಿಸುವ ಮತ್ತು ಅವರ ಮನಸ್ಸಿಗೆ ತಣಿ ವನ್ನೀಯಲು ಯೋಗ್ಯವಾಗುವಂತೆ ಬರೆಯುವ ಲೇಖನಗಳು ಸ್ತೋತ್ರಾ ರ್ಹವೇ ಸರಿ ದೇಶೀಯ ಪತ್ರಿಕೆಯು, (ಸಂವಾದ ಕೌಮುದಿ) ಅದು ಅನುಸರಿಸಿರುವ ರೀತಿಯನ್ನು ನಾವು ನೋಡಿರುವಷ್ಟರಲ್ಲಿ, ಈ ಮಾರ್ಗ ವನ್ನು ಅವಲಂಬಿಸಿದೆ ಅದರ ಪ್ರಯತ್ನಗಳು ಸಾಕಾದಷ್ಟು ಹಿತಕರ ವೆಂದು ನಾವು ಎಣಿಸುತ್ತೇವೆ"

"ಸಂವಾದ ಕೌಮುದಿ"ಯ ಮೂರನೆಯ ಸಂಚಿಕೆಯೇ ಜನರಲ್ಲಿ ತಳಮಳವನ್ನು ಎಬ್ಬಿಸಿತಂತೆ

ಸಾಕಾದಷ್ಟು ದ್ರವ್ಯಸಹಾಯವು ಪತ್ರಿಕೆಗೆ ಒದಗದಿದ್ದುದರಿಂದ ರಾಮ ಮೋಹನರು ಪತ್ರಿಕೆಯನ್ನು ೧೮೨೨ ರಲ್ಲಿ ನಿಲ್ಲಿಸಬೇಕಾಯಿತು

ರಾಮಮೋಹನರು ೧೮೨೨ರ ಏಪ್ರಿಲ್ ತಿಂಗಳಲ್ಲಿ ವಿದ್ಯಾವಂತರ ಉಪಯೋಗಕ್ಕಾಗಿ "ಮಿರಾತ್-ಉಲ್-ಅಕ್ಬರ್" (ಸಮಾಚಾರ ದರ್ಪಣ) ಎಂಬ ಹೆಸರಿನ ಮತ್ತೊಂದು ವಾರಪತ್ರಿಕೆಯನ್ನು ಪಾರ್ಸಿ ಭಾಷೆಯಲ್ಲಿ ಪ್ರಾರಂಭಿಸಿದರು. ಈಗ ಇಂಗ್ಲಿಷ್ ಹೇಗೆ ರಾಜಭಾಷೆಯೂ ವಿದ್ಯಾ

ವಂತರ ಭಾಷೆಯೂ ಆಗಿದೆಯೋ ಹಾಗೆ ಆಗ ಪಾರ್ಸಿಯು ರಾಜ ಭಾಷೆಯೂ ಪಂಡಿತರ ಭಾಷೆಯೂ ಆಗಿತ್ತು. ಆದರೆ ಸಾಮಾನ್ಯ ಜನರು ಬಂಗಾಳಿಯನ್ನೇ ಮಾತನಾಡುತ್ತಿದ್ದರು. ಆ ಪತ್ರಿಕೆಯು ಪ್ರತಿ ಶುಕ್ರ ವಾರವೂ ಪ್ರಕಟವಾಗುತ್ತಿತ್ತು. ಕಲ್ಕತ್ತೆಯಲ್ಲಿ ಪ್ರಕಟವಾದ ಪಾರ್ಸಿ ಪತ್ರಿಕೆ ಗಳಲ್ಲಿ ಇದೇ ಮೊದಲನೆಯದೆಂದು ಹೇಳಬಹುದು.

ಈ ಪತ್ರಿಕೆಯನ್ನು ಸ್ಥಾಪಿಸುವುದರಲ್ಲಿ ತಮ್ಮ ಉದ್ದೇಶವೇನಿತ್ತೆಂಬು ದನ್ನು ರಾಮಮೋಹನರು ಪತ್ರಿಕೆಯ ಮೊದಲನೆಯ ಸಂಚಿಕೆಯಲ್ಲಿ ತಿಳಿಸಿದರು:

"ಸ್ವಪ್ರಯೋಜನ, ಏಳಿಗೆಗಳನ್ನು ಪಡೆಯುವುದಕ್ಕಾಗಿ ಅಧಿಕಾರ ವಲ್ಲಿರುವವರನ್ನೂ ನನ್ನ ಸ್ನೇಹಿತರನ್ನೂ ಹೊಗಳಲು ಈ ಪತ್ರಿಕೆಯನ್ನು ಒಂದು ಸಾಧನವಾಗಿ ಮಾಡಿಕೊಳ್ಳುವುದು ನನ್ನ ಉದ್ದೇಶವಲ್ಲವೆಂದು ಪ್ರಮಾಣ ಮಾಡುತ್ತೇನೆ. ನನ್ನ ಸಂಪಾದಕತ್ವದಲ್ಲಿ ಇತರರ ಮೇಲೆ ಅನುಚಿತವಾದ ಆಕ್ಷೇಪ ನಿಂದೆಗಳನ್ನು ಹೊರಿಸುವುದೂ ನನ್ನ ಉದ್ದೇಶ ವಲ್ಲ. ಇದಕ್ಕೆ ಪ್ರತಿಯಾಗಿ, ಸತ್ಯವನ್ನೂ ಅಧಿಕಾರಸ್ಥಾನದಲ್ಲಿರುವವ ರನ್ನೂ ನಾನು ಗೌರವಿಸುತ್ತೇನೆ. ಕತ್ತಿಯಿಂದಾದ ಗಾಯವು ಗುಣವಾಗ ಬಹುದು; ಆದರೆ ನುಡಿಯಿಂದಾದ ಗಾಯವು ಎಂದಿಗೂ ಮಾಯದು ಎಂಬ ಮಾತು ಪ್ರತಿವಾಕ್ಯ ಬರೆಯುವಾಗಲೂ ನನ್ನ ದೃಷ್ಟಿಯಲ್ಲಿರುತ್ತದೆ. ಯಾವ ವ್ಯಕ್ತಿಯ ಮನಸ್ಸನ್ನೂ ನೋಯಿಸದಿರುವಂತೆ ನಾನು ಪದ ಪ್ರಯೋಗ ಮಾಡುವುದರಲ್ಲಿ ಎಚ್ಚರಿಕೆಯಿಂದಿರುತ್ತೇನೆ. ಒಟ್ಟಿನಲ್ಲಿ, ಈ ಪತ್ರಿಕೆಯನ್ನು ನಡೆಸುವುದರಲ್ಲಿ ನನ್ನ ಉದ್ದೇಶವು ಜನರ ಅನುಭವ ವನ್ನು ಹೆಚ್ಚಿಸಿ ಅವರ ಸಾಮಾಜಿಕ ಏಳಿಗೆಗೆ ಸಾಧಕವಾಗುವಂತಹ ಲೇಖನಗಳನ್ನು ಅವರ ಮುಂದಿಡುವುದಾಗಿದೆ; ಮತ್ತು ಪ್ರಜೆಗಳ ಸ್ಥಿತಿ ಗತಿಗಳನ್ನು ಆಳರಸರಿಗೂ, ಆಳರಸರು ಸ್ಥಾಪಿಸಿರುವ ಕಾನೂನು ಕಟ್ಟಳೆ ಗಳನ್ನು ಪ್ರಜೆಗಳಿಗೂ ನನ್ನ ಸಾಮರ್ಥ್ಯವಿರುವಷ್ಟು ತಿಳಿಸುವುದು ನನ್ನ ಉದ್ದೇಶವಾಗಿದೆ."

ಈ ಪತ್ರಿಕೆಯ ವಿಷಯದಲ್ಲಿ "ಕಲ್ಕತ್ತ ಜರ್ನಲ್" ಹೀಗೆ ಬರೆಯಿತು :

"ದೇಶ ಭಾಷೆಗಳಲ್ಲಿ ಬಂದಿರುವ ಪತ್ರಿಕೆಗಳಲ್ಲಿ ನಮ್ಮಲ್ಲಿ ಸದಭಿಪ್ರಾಯವುಂಟು ಮಾಡಿರುವುದರಲ್ಲಿ "ಮಿರಾತ್-ಅಲ್ ಅಕ್ಬರ್" ಎಂಬುದಕ್ಕಿಂತ ಉತ್ತಮವಾದ ಯಾವ ಪತ್ರಿಕೆಯೂ ಇಲ್ಲ. ಇದರ ಸಂಪಾದಕನು ಉತ್ತಮ ವರ್ಗದ ಬ್ರಾಹ್ಮಣನೆಂದೂ, ಭಾಷಾ ಪ್ರಾವೀಣ್ಯವುಳ್ಳವನೆಂದೂ, ರಾಜಭಕ್ತಿಯಲ್ಲಿ ಮಿಗಿಲಾದವನೆಂದೂ, ಪಾರ್ಸಿ ಭಾಷೆಯಲ್ಲಿ ಉತ್ತಮ ಪಾಂಡಿತ್ಯವನ್ನೂ ಇಂಗ್ಲಿಷಿನಲ್ಲಿ ಯೋಗ್ಯವಾದ ಜ್ಞಾನವನ್ನೂ ಪಡೆದಿದ್ದಾನೆಂದೂ ತಿಳಿಯುತ್ತೇವೆ, ಅವನು ಬುದ್ಧಿವಂತನಾಗಿಯೂ ವಿವಿಧ ವಿಚಾರ ಜ್ಞಾನಪ್ರಪೂರ್ಣನಾಗಿಯೂ ಇದ್ದಾನೆ ಮತ್ತು ಅವನ ಜ್ಞಾನದಾಹವು ಉಪಶಮಿಸಲಾಗದುದು."

ಪತ್ರಿಕೆಯ ಅಗ್ರಲೇಖನಗಳನ್ನೆಲ್ಲ ಪಾರ್ಸಿಯಲ್ಲಿ ರಾಮಮೋಹನರೇ ಬರೆಯುತ್ತಿದ್ದರು. ಅವುಗಳಲ್ಲಿ ಅನೇಕವನ್ನು ಜೇಮ್ಸ್ ಶಿಲ್ಕ್ ಬಕಿಂಗ್ ಹ್ಯಾಮನು ತನ್ನ "ಕಲ್ಕತ್ತ ಜರ್ನಲ್" ಎಂಬ ಮಾಸ ಪತ್ರಿಕೆಯಲ್ಲಿ ಭಾಷಾಂತರಿಸಿ ಪ್ರಕಟಿಸುತ್ತಿದ್ದನು. ಆ ಲೇಖನಗಳು ರಾಮಮೋಹನರ ವೈದುಷ್ಯಕ್ಕೂ ಆಗಿನಕಾಲದ ಸ್ಥಿತಿಗತಿಗಳ ಮೇಲೆ ಅವರಿಗಿದ್ದ ಅಭಿಪ್ರಾಯಗಳಿಗೂ ನಿದರ್ಶನಗಳಾಗಿವೆ. ಆ ಪತ್ರಿಕೆಯಲ್ಲಿ ರಾಮಮೋಹನರು ಬ್ರಿಟಿಷ್ ರಾಜ್ಯಾಂಗ ವ್ಯವಸ್ಥೆಯನ್ನು ಕುರಿತ ವಿಮರ್ಶಾತ್ಮಕ ಲೇಖನಗಳನ್ನು ಪ್ರಕಟಿಸಿದರು; ಮತ್ತು ಐರ್ಲಂಡು ದೇಶದ ಸ್ಥಿತಿಯು ತಮ್ಮ ದೇಶೀಯರಿಗೆ ತಿಳಿಯಬೇಕೆಂಬ ಉದ್ದೇಶದಿಂದ ಆ ಸಂಬಂಧದ ಲೇಖನಗಳನ್ನೂ ಬರೆಯುತ್ತಿದ್ದರು.

ರಾಮಮೋಹನರು ಪ್ರಕಟಿಸುತ್ತಿದ್ದ ಸಮಾಚಾರಗಳೂ ಅಭಿಪ್ರಾಯಗಳೂ ಮಧ್ಯವರ್ತಿಯಾಗಿದ್ದರೂ ಸರ್ಕಾರದವರಿಗೆ ಅವರ ಬರೆವಣಿಗೆಯು ಸಮ್ಮತವಾಗಿರಲಿಲ್ಲ. ದೇಶೀಯರಲ್ಲಿ ವಿದ್ಯಾಭಿವೃದ್ಧಿಯಾಗುವುದು ಆಗಿನ ಬ್ರಿಟಿಷ್ ಜನರಿಗೆ ಅಷ್ಟು ಪ್ರಿಯವಾಗಿರಲಿಲ್ಲ. ದೇಶೀಯ ಪತ್ರಿಕೆಗಳ

ಸ್ವಾತಂತ್ರ್ಯವು ಮೀರಿ ಹೋಗಿದೆಯೆಂದೂ ಅವುಗಳನ್ನು ಹದ್ದಿನಲ್ಲಿಡಬೇಕೆಂದೂ ಸರ್ಕಾರದ ಆಲೋಚನೆಗೆ ಬಂತು. ಇದಕ್ಕಾಗಿ ತಾತ್ಕಾಲಿಕವಾಗಿ ೧೮೧೮ ರಲ್ಲಿ ತಡೆದಿಟ್ಟಿದ್ದ ವೃತ್ತ ಪತ್ರಿಕೆಗಳ ಕಾನೂನನ್ನು ಪುನಃ ಆಚರಣೆಗೆ ತರಬೇಕೆಂದು ೧೮೨೩ ರ ಮುಂಚೆಯೇ, ಲಾರ್ಡ್ ಹೇಸ್ಟಿಂಗ್ಸನು ಗವರ್ನರ್ ಜನರಲ್ ಪದವಿಯಿಂದ ನಿವೃತ್ತನಾಗುವುದಕ್ಕೆ ಮೊದಲೇ, ಪರ್ಯಾಲೋಚನೆಗೆ ಬಂದಿತ್ತು. ಗವರ್ನರ್ ಜನರಲ್‌ನ ಮಂತ್ರಿಮಂಡಲದಲ್ಲಿ ಒಬ್ಬನು ದೇಶೀಯ ಪತ್ರಿಕೆಗಳ ಉಚ್ಛೃಂಖಲ ವೃತ್ತಿಯನ್ನು ವಿವರಿಸಿ ಉದಾಹರಣೆಗೆ ರಾಮಮೋಹನರ "ಮಿರಾತ್-ಅಲ್-ಅಕ್ಬರ್" ಅಲ್ಲಿನ ಲೇಖನಗಳನ್ನು ಎತ್ತಿ ತೋರಿಸಿದನು. ಆದರೆ ಆ ಲೇಖನಗಳು ಬ್ರಿಟಿಷ್ ಅಧಿಕಾರಿಗಳಿಗೆ ಆಕ್ಷೇಪಣೀಯವಾಗಿ ತೋರಿತೇ ಹೊರತು ಮತ್ತಾವ ವಿವೇಚನಾಪರನಿಗೂ ಆಕ್ಷೇಪಣೀಯವಾಗಿರದು.

ಆಗಿನ ಗವರ್ನರ್ ಜನರಲ್ ಲಾರ್ಡ್ ಹೇಸ್ಟಿಂಗ್ಸನು ೧೮೨೨ ರಲ್ಲಿ ದೇಶೀಯ ಪತ್ರಿಕೆಗಳ ಮೇಲೆ ಹೆಚ್ಚು ಅಧಿಕಾರ ನಡೆಸುವುದಕ್ಕಾಗಿ ಹೊಸ ಕಾನೂನನ್ನು ಏರ್ಪಡಿಸುವುದರಲ್ಲಿ ಇಂಗ್ಲೆಂಡಿನ ಸರ್ಕಾರದ ಅಪ್ಪಣೆಯನ್ನು ಬೇಡಿದನು. ಆದರೆ ೧೮೨೩ನೆಯ ಜನವರಿಯಲ್ಲಿ ಹೇಸ್ಟಿಂಗ್ಸನು ಸೀಮೆಗೆ ಪ್ರಯಾಣ ಬೆಳಸಿದನು. ಅವನ ಸ್ಥಾನಕ್ಕೆ ಜಾನ ಆಡಮ್ ಎಂಬಾತನು ಬಂದನು. ಆತನು ಹೇಸ್ಟಿಂಗ್ಸನಷ್ಟು ಉದಾರಮನಸ್ಕನಾಗಿರಲಿಲ್ಲವಾದುದರಿಂದ ಲೇಖನ ಸ್ವಾತಂತ್ರ್ಯಕ್ಕೂ ಪ್ರಜಾಭಿವೃದ್ಧಿ ಕಾರ್ಯಗಳಿಗೂ ಸ್ವಲ್ಪ ತಡೆಯುಂಟಾಯಿತು. ಆತನು ಅಧಿಕಾರಕ್ಕೆ ಬಂದಮೇಲೆ ನಡೆದ ಒಂದು ಸಂಗತಿಯಿಂದ ಬಹಳ ಉದ್ರೇಕಗೊಂಡನು. "ಕಲ್ಕತ್ತ ಜರ್ನಲ್" ಪತ್ರಿಕೆಯ ಸಂಪಾದಕನಾದ ಜೇಮ್ಸ್ ಸಿಲ್ಕ್ ಬಕಿಂಗ್‌ಹ್ಯಾಮನು ಆಗಿನ ಸರ್ಕಾರಿ ಆಡಳಿತಕ್ಕೆ ಸಂಬಂಧಿಸಿದ ಒಂದು ವಿಚಾರವನ್ನು ಕುರಿತು ತನ್ನ ಪತ್ರಿಕೆಯಲ್ಲಿ ಟೀಕಿಸಿದನು. ಅದೇನೆಂದರೆ, ಡಾಕ್ಟರ್ ಬ್ರೈಸ್ ಎಂಬ ಸ್ಕಾಟ್ಲೆಂಡ್ ದೇಶದ ಪಾದ್ರಿಯು ಈಸ್ಟ್ ಇಂಡಿಯ ಕಂಪೆನಿಯ ಅಧೀನದಲ್ಲಿ ಕೆಲಸವನ್ನು ಕೈಕೊಂಡುದು ಆತನ ಗೌರವಕ್ಕೆ ಉಚಿತವಲ್ಲವೆಂದು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸೂಚಿಸಿದನು. ಈ ಬರೆವಣಿಗೆಯು "ಅವಮರ್ಯಾದೆಯ ಮಾತು" ಎಂದು ದೋಷಾರೋಪಣೆ ಮಾಡಿ ಆಡಮ್‌ನ ಸರ್ಕಾರವು ಬಕಿಂಗ್‌ಹ್ಯಾಮನ ಮೇಲೆ ಶಿಕ್ಷೆ

ವಿಧಿಸಿತು. ಬಕಿಂಗ್ ಹ್ಯಾಮನು ಎರಡು ತಿಂಗಳೊಳಗಾಗಿ ಇಂಡಿಯಾ ದೇಶವನ್ನು ಬಿಟ್ಟು ಹೋಗಬೇಕೆಂದೂ ಪುನಃ ಇಂಡಿಯಕ್ಕೆ ಬರಕೂಡದೆಂದೂ ೧೮೨೩ ನೆಯ ಫೆಬ್ರವರಿಯಲ್ಲಿ ಆಜ್ಞೆಯಾಯಿತು. "ಕಲ್ಕತ್ತ ಜರ್ನಲ್" ನಿಲ್ಲಿಸಲ್ಪಟ್ಟಿತು, ಸಹಾಯ ಸಂಪಾದಕನಾದ ಸಾಂಡ್ ಫರ್ಡ್ ಆರ್ನೆಟ್ ಎಂಬವನನ್ನೂ ದಸ್ತಗಿರಿ ಮಾಡಿ ಹಡಗಿನಲ್ಲಿ ಕೂಡಿಸಿ ಸೀಮೆಗೆ ಕಳುಹಿಸಲಾಯಿತು. ಗವರ್ನರ್ ಜನರಲನು ೧೮೨೩ನೆಯ ಮಾರ್ಚಿಯಲ್ಲಿ ವೃತ್ತಪತ್ರಿಕೆಗಳ ಕಾನೂನನ್ನು ಜಾರಿಗೆ ತಂದನು. ಈ ಕಾನೂನಿಗನುಸಾರವಾಗಿ ವೃತ್ತ ಪತ್ರಿಕೆಗಳ ವ್ಯವಸ್ಥಾಪಕರೂ ಸಂಪಾದಕರೂ ಮುಂದಾಗಿ ಸರ್ಕಾರದ ಕಾರ್ಯದರ್ಶಿಗಳಲ್ಲಿ ತಮ್ಮ ಅರ್ಜಿಯನ್ನು ಒಪ್ಪಿಸಿ ಪತ್ರಿಕಾ ಪ್ರಕಟನೆಗೆ ಅವರಿಂದ, ಸರ್ಕಾರದ ಪರವಾಗಿ, ಅಪ್ಪಣೆಯನ್ನು ಪಡೆಯಬೇಕಾಗಿತ್ತು. ಕಾನೂನಿಗೆ ವಿರೋಧವಾದ ವಿಚಾರವನ್ನು ಚರ್ಚೆ ಮಾಡುವ ತಪ್ಪಿಗೆ ಪತ್ರಿಕಾ ಸಂಪಾದಕನು ತನಗೆ ಒದಗಿದ ಸರ್ಕಾರಿ ಅಪ್ಪಣೆಯನ್ನು ಕಳೆದುಕೊಳ್ಳುವ ಸಂಭವವಿತ್ತು. ರಾಜಕೀಯ ವಿಚಾರಗಳಲ್ಲಿ ಸರ್ಕಾರವು ತೋರ್ಪಡಿಸಿದ ಈ ಪ್ರತಿಬಂಧಕಕ್ಕಾಗಿ ದೇಶದ ಪ್ರಮುಖರು ತಮ್ಮ ಅಸಮಾಧಾನ ಅತೃಪ್ತಿಗಳನ್ನು ವ್ಯಕ್ತಗೊಳಿಸಿದರು. ಆದರೆ ಸರ್ಕಾರವು ಅವಕ್ಕೆ ಲಕ್ಷ್ಯವೇ ಕೊಡಲಿಲ್ಲ

ಹೊಸ ಕಾನೂನು ಆಚರಣೆಗೆ ಬರುವುದಕ್ಕೆ ಮೊದಲು ಅನುಸರಿಸಬೇಕಾದ ಕ್ರಮವೊಂದಿತ್ತು. ಹೊಸದಾಗಿ ಬರತಕ್ಕ ಕಾನೂನು ಮೊದಲು ನ್ಯಾಯಸ್ಥಾನದಲ್ಲಿ ಗುರ್ತಾಗಬೇಕಾಗಿತ್ತು. ಅದೇ ರೀತಿಯಲ್ಲಿ ಹೊಸ ವೃತ್ತ ಪತ್ರಿಕಾ ಕಾನೂನು ೧೮೨೩ ನೆಯ ಮಾರ್ಚಿ ೧೪ ರಲ್ಲಿ ನ್ಯಾಯಸ್ಥಾನದಲ್ಲಿ ನಮೂದಾಯಿತು. ಆ ಕಾನೂನನ್ನು ವಿರೋಧಿಸುವವರು ಯಾರಾದರೂ ಇದ್ದರೆ ಕೆಲವು ದಿನಗಳ ಮೇಲೆ ಪ್ರತಿಪಕ್ಷವನ್ನು ಸೂಚಿಸಬಹುದಾಗಿತ್ತು. ಇದಕ್ಕೆ ೧೮೨೩ನೆಯ ಮಾರ್ಚಿ ೩೧ನೆಯ ತಾರೀಖು ಗೊತ್ತಾಯಿತು. ಆಗ ನ್ಯಾಯಾಧಿಕಾರಿಯಾಗಿದ್ದ ಸರ್ ಫ್ರಾನ್ಸಿಸ್ ಮ್ಯಾಕ್ ನಾಗ್‌ಟನ್ನನು ಪ್ರತಿಪಕ್ಷದವರು ತಮ್ಮ ಆಕ್ಷೇಪಣೆಗಳನ್ನು ಬರೆವಣಿಗೆಯಲ್ಲಿ, ಒಂದು ಬಿನ್ನಹದ ರೂಪದಲ್ಲಿ, ಸರ್ಕಾರಕ್ಕೆ ಒಪ್ಪಿಸಬೇಕೆಂದು ಸೂಚಿಸಿದನು. ವಿರೋಧ ಪಕ್ಷಕ್ಕೆ ರಾಮಮೋಹನರೇ ಮುಖಂಡರಾದರು. ಆ ಕಾನೂನಿನಿಂದ ಆಗಬಹುದಾದ ಅನರ್ಥಗಳೆಲ್ಲವೂ ಅವರಿಗೆ ಚೆನ್ನಾಗಿ

ಹೊಳೆದಿತ್ತು. ಅವರ ಮನಸ್ಸು ರಾಜಕೀಯವಾಗಲಿ, ಸಾಮಾಜಿಕವಾಗಲಿ, ಎಲ್ಲದರಲ್ಲಿಯೂ ಸ್ವಾತಂತ್ರ್ಯವನ್ನು ಬಯಸುತ್ತಿತ್ತು.

ರಾಮಮೋಹನರು ಬಿನ್ನಹಗಳನ್ನು ಇಂಗ್ಲಿಷ್ ಬಂಗಾಳಿಗಳಲ್ಲಿ ಸಿದ್ಧಪಡಿಸಲು ತಮ್ಮ ಸ್ನೇಹಿತರನ್ನು ಕೂಡಿಸಿದರು. ವಿಷಯವನ್ನು ಕುರಿತ ಚರ್ಚೆಗಳಲ್ಲಿ ಅನೇಕ ದಿನಗಳು ಕಳೆದುವು. ರಾಮಮೋಹನರು ಹದಿನೈದು ಜನ ಸ್ನೇಹಿತರೊಂದಿಗೆ ಬಿನ್ನಹವನ್ನು ತಯಾರಿಸಿ ೧೮೨೩ನೆಯ ಮಾರ್ಚಿ ೩೦ ರಲ್ಲಿ ಕೋರ್ಟಿನಲ್ಲಿ ಒಪ್ಪಿಸಿದರು. ಅದು ಅಲ್ಲಿಂದ ಸರ್ಕಾರಕ್ಕೆ ಬರುವ ವೇಳೆಗೆ ಗೊತ್ತಾಗಿದ್ದ ಕಾಲವು ಮೀರಿ ಹೋಗಿದ್ದುದರಿಂದ ಏನೂ ಮಾಡಲಾಗಲಿಲ್ಲ. ಇದರಿಂದ ನಿರಾಶರಾಗದೆ ರಾಮಮೋಹನರೂ ಅವರ ಸ್ನೇಹಿತರೂ ಮತ್ತೊಂದು ವಿಜ್ಞಾಪನೆಯನ್ನು ಸಿದ್ಧಪಡಿಸಿದರು. ಅದಕ್ಕೆ ಆರು ಮಂದಿ ಮಾತ್ರ ಸಹಿಹಾಕಿದ್ದರು: ಚಂದ್ರಕುಮಾರ ಠಾಕೂರ, ದ್ವಾರಕಾನಾಥ ಠಾಕೂರ, ಹರಚಂದ್ರ ಘೋಷ್, ಗೌರೀಚರಣಬಾನರ್ಜಿ, ಪ್ರಸನ್ನ ಕುಮಾರ ಠಾಕೂರ ಮತ್ತು ರಾಮಮೋಹನರು. ಈ ವಿಜ್ಞಾಪನೆಯನ್ನು ಫರ್ಗ್ಯುಸನ್ ಎಂಬ ಲಾಯರ ಮುಖಾಂತರ ನ್ಯಾಯಸ್ಥಾನಕ್ಕೆ ಕಳುಹಿಸಿದರು. ಅದನ್ನು ಸರ್ ಫ್ರಾನ್ಸಿಸ್ ಮ್ಯಾಕ್ನಾಟನ್ ಎಂಬುವನು ವಜಾಮಾಡಿದನು. ಕಾರಣವೇನೆಂದರೆ ಆ ವಿಚಾರವು ಕೋರ್ಟಿನಲ್ಲಿ ವಿಚಾರಣೆಯಾಗುವುದಕ್ಕೆ ಮೊದಲೇ ತನ್ನ ಒಪ್ಪಿಗೆಯನ್ನು ಅವನು ಕೊಡುವುದಾಗಿ ಸರ್ಕಾರಕ್ಕೆ ಮಾತು ಕೊಟ್ಟಿರುವುದಾಗಿ ಹೇಳಿದನು. ರಾಮಮೋಹನರಿಗೆ ಇದು ಸಮ್ಮತಿಸದೆ ಅಧಿಕಾರಿಗಳ ವರ್ತನೆಯನ್ನು ವಿರೋಧಿಸುವುದಕ್ಕಾಗಿ ತಮ್ಮ ಪಾರ್ಸಿ ಭಾಷೆಯ "ಮಿರಾತ್-ಅಲ್-ಅಕ್ಬರ್" ಪತ್ರಿಕೆಯ ಪ್ರಕಟನೆಯನ್ನು ನಿಲ್ಲಿಸಿದರು.

ರಾಮಮೋಹನಾದಿಗಳು ಒಪ್ಪಿಸಿದ ಆ ವಿಜ್ಞಾಪನೆಯಲ್ಲಿನ ಮುಖ್ಯ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು:—

ದೇಶೀಯ ಪ್ರಜೆಗಳಿಗೆ ಬ್ರಿಟಿಷ್ ಸರ್ಕಾರದಲ್ಲಿರುವ ದೃಢವಾದ ಭಕ್ತಿಯನ್ನೂ ಅಪರಿಮಿತವಾದ ನಂಬಿಕೆಯನ್ನೂ ವ್ಯಕ್ತಪಡಿಸುವ ನಿದರ್ಶನಗಳನ್ನು ತಮ್ಮ ಘನವಾದ ಅವಗಾಹನೆಗೆ ಮೊದಲಲ್ಲಿಯೇ ತರಲು ಈ ವಿಜ್ಞಾಪನ ಕರ್ತರು ಬಯಸುತ್ತೇವೆ. ಸರ್ಕಾರವನ್ನು ದ್ವೇಷಿಸುವ ಅಥವಾ ಅಲ್ಲಗಳೆಯುವ ಅಥವಾ

ಜನಾಂಗದ ಶಾಂತಿಸೌಹಾರ್ದಗಳನ್ನು ದೇಶೀಯರು ಭಂಗಪಡಿಸಬಹುದೆಂಬ ತಮ್ಮ ಮನಸ್ಸಿನ ಕಲ್ಪನೆಗಳನ್ನು ಈ ಮೂಲಕ ದೂರಮಾಡ ಬಯಸುತ್ತೇವೆ.

ಕಲ್ಕತ್ತೆಯಲ್ಲಿನ ಮತ್ತು ಸುತ್ತಮುತ್ತಲಿನ ದೇಶೀಯರು ಸರ್ಕಾರದ ವಿಷಯದಲ್ಲಿ ಯಾವ ಅಪನಂಬಿಕೆಯನ್ನೂ ಇಟ್ಟುಕೊಳ್ಳದೆ ತಮ್ಮ ಸಂಪತ್ತನ್ನು ಸರ್ಕಾರದ ಅಧೀನದಲ್ಲಿ ಇಟ್ಟಿರುವರು. ಇದರಿಂದ ಅವರ ಸಂಪತ್ತು ಭದ್ರವಾಗಿರುವುದೆಂದೂ, ಬ್ರಿಟಿಷ್ ಸರ್ಕಾರವು ಸ್ಥಿರವಾಗಿ ನೆಲಸುವುದೆಂದೂ, ಅದರಿಂದ ಸ್ಥಿರವಾದ ಫಲಬರುವುದೆಂದೂ ನಂಬಿರುವರು.

ಬಂಗಾಳದಲ್ಲಿನ ಹಿಂದೂ ಸಮಾಜವು ಈಗಿನ ಸರ್ಕಾರದ ಆಶ್ರಯದಲ್ಲಿ ಸಂತತವಾಗಿ ನಡೆಯುತ್ತಿರುವ ವಿದ್ಯಾಪ್ರಚಾರವನ್ನೂ, ರಾಜ್ಯಾಡಳಿತದಲ್ಲಿನ ವ್ಯವಸ್ಥೆಯನ್ನೂ ಕುರಿತು ಪದೇ ಪದೇ ಪ್ರಶಂಸಿಸುತ್ತಲೂ ಇರುವುದು. ದೇಶೀಯರಿಗೆ ಬ್ರಿಟಿಷ್ ಸರ್ಕಾರದ ವಿಷಯದಲ್ಲಿ ಪ್ರಭುಭಕ್ತಿಯಿಲ್ಲವೆಂದಾಗಲಿ ನಂಬಿಕೆ ಪ್ರೀತಿಗಳಿಲ್ಲವೆಂದಾಗಲಿ ಭಾವಿಸುವವರು ಈ ದೇಶದ ಸ್ಥಿತಿಗತಿಗಳ ವಿಷಯದಲ್ಲಿಯೂ ದೇಶೀಯರ ಮನೋಭಾವ ಆಶಯಗಳ ವಿಷಯದಲ್ಲಿಯೂ ಸಂಪೂರ್ಣ ಅಜ್ಞಾನಿಗಳೆಂದು ಸ್ಪಷ್ಟವಾಗದೆ ಇರದು.

ಕಾಲೇಜು ಸ್ಕೂಲುಗಳನ್ನೂ, ಇತರ ಸಹಾಯಕರವಾದ ಸಂಸ್ಥೆಗಳನ್ನೂ—ಮುಖ್ಯವಾಗಿ ನ್ಯಾಯಸ್ಥಾನವನ್ನು—ಸ್ಥಾಪಿಸುವುದರ ಮೂಲಕ ದೇಶೀಯರ ಸಾಮಾಜಿಕ ಮೊದಲಾದ ವಿಚಾರಗಳಲ್ಲಿ ದೇಶದ ಸ್ಥಿತಿಯನ್ನು ಉತ್ತಮಪಡಿಸುತ್ತಿರುವುದರಲ್ಲಿ ಬ್ರಿಟಿಷ್ ಸರ್ಕಾರವು ತೋರ್ಪಡಿಸಿರುವ ವಿವೇಕವೂ ಔದಾರ್ಯವೂ ದೇಶೀಯರ ರಾಜಭಕ್ತಿಗೂ ಪ್ರೀತಿಗೂ ಕಾರಣವೆಂದು ಒಪ್ಪಿಕೊಳ್ಳಲೇಬೇಕು; ಬ್ರಿಟಿಷರ ಈ ಕಾರ್ಯಗಳೆಲ್ಲವೂ ಬಹು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವಂತಹವುಗಳಾಗಿವೆ.

ಕಲ್ಕತ್ತೆಯ ಪ್ರಜೆಗಳಲ್ಲಿ ಮುದ್ರಣ ಕಲೆಯ ತಿಳಿವಳಿಕೆಯು ರೂಢಿಗೆ ಬಂದಾಗಿನಿಂದ ವಂಗ ಭಾಷೆಯಲ್ಲಿ ಅನೇಕ ಪತ್ರಿಕೆಗಳು ಪ್ರಕಟವಾಗುತ್ತಿರುವುದು ಕ್ರೈಸ್ತ ಪಾದ್ರಿಗಳ ಕಾರ್ಯಗಳಿಂದಲೂ ಇತರ ರೀತಿಗಳಿಂದಲೂ ತಮ್ಮ ಅವಗಾಹನೆಗೆ ಬಂದಿರಬೇಕು. ಈ ಪತ್ರಿಕೆಗಳು ತಡೆಯಿಲ್ಲದ ಜಿಜ್ಞಾಸನವನ್ನು ಹೂಡುವುದರ ಮೂಲಕವೂ, ವಿಚಾರಪರತೆಯನ್ನೂ ಜ್ಞಾನಸಂಪಾದನೆಯನ್ನೂ ಪ್ರೇರಿಸುವುದರ ಮೂಲಕವೂ, ದೇಶೀಯರ ಬುದ್ಧಿಯನ್ನೂ ಅವರ ಸ್ಥಿತಿಯನ್ನೂ ಉತ್ತಮಗೊಳಿಸುವುದರಲ್ಲಿಯೂ ಸಹಾಯಮಾಡಿವೆ. ಈ ಅವಶ್ಯವಾದ ಕಾರ್ಯವು ಮುಖ್ಯವಾಗಿ ನಾಲ್ಕು ದೇಶೀಯ ಪತ್ರಿಕೆಗಳಿಂದ—ಬಂಗಾಳಿಯಲ್ಲಿ ಎರಡು, ಪಾರ್ಸಿಯಲ್ಲಿ ಎರಡು—ನಡೆಯುತ್ತಿದೆ. ಇಂಗ್ಲಿಷ್ ಪತ್ರಿಕೆಗಳಲ್ಲಿಯೂ ಇತರ ಕಡೆಗಳಲ್ಲಿಯೂ

ಪ್ರಕಟವಾಗುವ ಸಮಾಚಾರಗಳನ್ನೂ ಪಟ್ಟಣಗಳಲ್ಲಿಯೂ ಸಂಸ್ಥಾನಗಳಲ್ಲಿಯೂ ನಡೆಯುವ ಗಮನಾರ್ಹವಾದ ಸಂಗತಿಗಳನ್ನೂ, ಇಂಗ್ಲೆಂಡ್ ಮುಂತಾದ ಪ್ರಪಂಚದ ಇತರ ಭಾಗಗಳಲ್ಲಿ ನಡೆಯುವ ಸ್ವಾರಸ್ಯವಾದ ಮತ್ತು ಅಮೂಲ್ಯವಾದ ಸಂಗತಿಗಳನ್ನೂ ದೇಶದ ಹಳ್ಳಿಗಾಡಿನ ಪ್ರಜೆಗಳಿಗೆ ತಿಳಿಸುವುದು ಇವುಗಳ ಉದ್ದೇಶ.

ದೇಶೀಯ ವೃತ್ತಪತ್ರಿಕೆಗಳಾಗಲಿ ಇತರ ಪ್ರಕಟನೆಗಳಾಗಲಿ ಸರ್ಕಾರವನ್ನು ದ್ವೇಷಿಸುವ ಮತ್ತು ಅಲ್ಲಗಳೆಯುವ ಕಾರ್ಯಗಳಲ್ಲಿ ಕೈಹಾಕಿರುವುದಿಲ್ಲವೆಂದು ಖಂಡಿತವಾಗಿ ಹೇಳಬಹುದಾಗಿದೆ; ಮತ್ತು ಅವು ಮತ್ತಾವ ರೀತಿಯಲ್ಲಿಯೂ ದೇಶದ ಹಿತಕ್ಕೆ ಹಾನಿಕರವಾಗಿ ವರ್ತಿಸಿಲ್ಲ. ಸರ್ಕಾರದಲ್ಲಿ ನಿರಾಧಾರವಾದ ಸಂಗತಿಗಳನ್ನು ಚಿನ್ನೈಸಿಕೊಳ್ಳದಿರುವುದು ಮಾತ್ರವಲ್ಲದೆ ಪತ್ರಿಕಾಕರ್ತರೂ ಲೇಖಕರೂ ದೇಶದ ಹಳ್ಳಿಗಾಡಿನ ಜನಕ್ಕೆ ಸರ್ಕಾರದ ವಿಷಯದಲ್ಲಿ ಅಹಿತಕರವಾಗಬಹುದಾದಂತಹ ಯಾವ ಸಮಾಚಾರವನ್ನೂ ಪ್ರಕಟಿಸಲು ಹಿಂದೆಗೆದಿರುತ್ತಾರೆ.

ದೇಶದ ಎಲ್ಲ ಭಾಗಗಳಲ್ಲಿಯೂ ನಡೆಯುವ ಸಮಾಚಾರಗಳನ್ನೂ ಸಂಪೂರ್ಣವಾಗಿಯೂ ನಿಷ್ಪಕ್ಷಪಾತವಾಗಿಯೂ ತಿಳಿಯುವುದರ ಅನೇಕ ಪ್ರಯೋಜನಗಳನ್ನು ಮನಗಂಡವರಾಗಿ, ಸರ್ಕಾರದವರು ಪಟ್ಟಣಗಳಲ್ಲಿಯೂ ಜಿಲ್ಲೆಗಳಲ್ಲಿಯೂ ಪತ್ರಿಕಾ ಪ್ರಕಟನೆಗೆ ಹೆಚ್ಚು ಸಹಾಯ ಪ್ರೋತ್ಸಾಹಗಳನ್ನು ಒದಗಿಸುವರೆಂಬುದಾಗಿ ಈ ಬಿನ್ನಹ ಕರ್ತರು ನಿರೀಕ್ಷಿಸುತ್ತಿದ್ದರು. ಆದರೆ ಅದಕ್ಕೆ ಪ್ರತಿಯಾಗಿ ತಮಗೊದಗಿದ ದುರದೃಷ್ಟವೇನೆಂದರೆ ಗವರ್ನರ್ ಜನ್‌ರಲ್ಲರು ಈಚೆಗೆ ಹೊಸ ನಿಬಂಧನೆಯನ್ನು ಜಾರಿಗೆ ತಂದು ಪತ್ರಿಕೆಗಳ ಮೇಲೆ ತೀವ್ರವಾದ ಪ್ರತಿಬಂಧಕಗಳನ್ನು ಹೊರಿಸಿರುತ್ತಾರೆ. ಇದರಿಂದ ಸರ್ಕಾರದ ಅಪ್ಪಣೆಯಿಲ್ಲದೆ ಯಾವ ದೇಶೀಯ ಪತ್ರಿಕೆಯೂ ಪ್ರಕಟವಾಗಕೂಡದು. ಪತ್ರಿಕೆಯು ಯುಕ್ತವಲ್ಲದ ಸಮಾಚಾರವನ್ನು ಪ್ರಕಟಿಸಿರುವುದಾಗಿ ಕಂಡುಬಂದಲ್ಲಿ ಪತ್ರಿಕಾ ಪ್ರಕಟನೆಗೆ ಬಂದಿರುವ ಸರ್ಕಾರದ ಅಪ್ಪಣೆಯನ್ನು ರದ್ದುಮಾಡತಕ್ಕದ್ದಾಗಿದೆ.

ಈ ನಿಬಂಧನೆಯಿಂದ, ಪಾಶ್ಚಾತ್ಯ ಪ್ರೌಢ ಭಾಷೆಗಳಿಂದ ದೇಶಭಾಷೆಗಳಿಗೆ ಆಗುತ್ತಿರುವ ಪರಿವರ್ತನೆಗಳ ಮೂಲಕವೂ, ಆ ಭಾಷಾಸಾಹಿತ್ಯಗಳ ಮೂಲಕವೂ, ದೇಶದಲ್ಲಿ ಆಗುತ್ತಿರುವ ಜ್ಞಾನ ಪ್ರಚಾರವೂ, ತನ್ಮೂಲಕ ಆಗುತ್ತಿರುವ ಬುದ್ಧಿಯ ಬೆಳವಣಿಗೆಯೂ, ಸಂಪೂರ್ಣವಾಗಿ ನಿಲ್ಲುವುದೆಂದು ಈ ಬಿನ್ನಹಕಾರರು ವಿಷಾದದಿಂದ ತಿಳಿಸಬೇಕಾಗಿದೆ. ಇದೇ ಕಾರಣದಿಂದ ಬ್ರಿಟಿಷರ ಕಾನೂನು ಮತ್ತು ವ್ಯವಹಾರ ಶಾಸ್ತ್ರಗಳನ್ನು ಬಲ್ಲ ದೇಶೀಯರು ಬ್ರಿಟಿಷರಲ್ಲಿ ರೂಢಿಗೆ ಬಂದಿರುವ ರಾಜ್ಯವ್ಯವಸ್ಥೆಯನ್ನೂ ನ್ಯಾಯತೀರ್ಮಾನದಲ್ಲಿ ಅನುಸರಿಸಬೇಕಾದ ಖಂಡಿತವಾದ ಮತ್ತು ನಿಷ್ಪಕ್ಷಪಾತ ಮಾರ್ಗಗಳನ್ನೂ ಕುರಿತು ತಮ್ಮವರಿಗೆ ತಿಳಿಸುವುದೂ ತಪ್ಪುವುದು. ಮತ್ತೊಂದು ಮುಖ್ಯ ಹಾನಿಯೇನೆಂದರೆ ಈ ವಿಶಾಲ ದೇಶದಲ್ಲಿ

ಸರ್ಕಾರಿ ಅಧಿಕಾರಿಗಳು ಮಾಡಬಹುದಾದ ಅಪರಾಧ ಅನ್ಯಾಯಗಳನ್ನು ದೇಶೀಯರು ಸರ್ಕಾರದ ಗಮನಕ್ಕೆ ತರಲು ಸಾಧ್ಯವಿಲ್ಲವಾಗುವುದು. ಅಲ್ಲದೆ ಇಂಗ್ಲೆಂಡಿನ ಚಕ್ರವರ್ತಿಗಳ ಪ್ರಜೆಗಳಾದ ಈ ದೇಶೀಯರು ತಮ್ಮ ಸ್ಥಿತಿಗತಿಗಳನ್ನೂ, ಇಲ್ಲಿನ ಅಧಿಕಾರಿಗಳು ಅನುಸರಿಸುತ್ತಿರುವ ರೀತಿನೀತಿಗಳನ್ನೂ, ದೂರದಲ್ಲಿರುವ ಚಕ್ರವರ್ತಿಗಳಲ್ಲಿ ವಾಸ್ತವವಾಗಿ ತಿಳಿಸುವುದಕ್ಕೂ ಅಡ್ಡಿಯುಂಟಾಗುವುದು. ದೇಶಭಾಷಾ ಪತ್ರಿಕೆಗಳಾಗಲಿ ಇಂಗ್ಲಿಷ್ ಭಾಷಾ ಪತ್ರಿಕೆಗಳಾಗಲಿ ಇಲ್ಲದಿರುವುದರಿಂದ ಇನ್ನು ಮುಂದೆ ಇಂಗ್ಲೆಂಡಿಗೆ ಇಲ್ಲಿಂದ ಸಮಾಚಾರ ಮುಟ್ಟುವುದೇ ದುಸ್ತರವಾಗುವುದು.

ಬ್ರಿಟಿಷರಿಂದ ದೇಶೀಯರಿಗೆ ಧಾರಾಳವಾಗಿ ಒದಗಿದ್ದ ಈ ಒಂದು ಅಮೂಲ್ಯ ಹಕ್ಕೂ ತಮ್ಮ ಅಪರಾಧವಿಲ್ಲದೆಯೇ ಉತ್ತಾಪದಶೀಲ ಅವರು ಭಗವದನುಗ್ರಹದಿಂದ ಬ್ರಿಟಿಷರ ಆಳಿಕೆಗ ಒಳಗಾಗಿರುವುದಾಗಿ ಇದುವರೆಗ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದಂತೆ ಇನ್ನುಮುಂದೆ ಹೇಳಿಕೊಳ್ಳಲಾರರು, ಮತ್ತು ಇಂಗ್ಲೆಂಡಿನಲ್ಲಿ ಬ್ರಿಟಿಷರು ಅನುಭವಿಸುವ ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವು ಈ ದೇಶೀಯರಿಗೂ ಒದಗಿರುವುದೆಂಬ ಸಂತೋಷವನ್ನೂ ಅನುಭವಿಸಲಾರರು.

ಪ್ರಜೆಗಳನ್ನು ಎಷ್ಟು ಅಜ್ಞಾನದಲ್ಲಿಟ್ಟಿದ್ದರೆ ಅವರನ್ನು ಆಳುವ ರಾಜರಿಗೆ ಅಷ್ಟು ಒಳ್ಳೆಯದೆಂಬ ರಾಜನೀತಿಯನ್ನು ಅನುಸರಿಸುವ ಪೌರ್ವಾತ್ಯ ದೇಶಗಳ ರಾಜರ ಮಾರ್ಗವನ್ನು ಅನುಸರಿಸುವ ಬುದ್ಧಿಯು ಬ್ರಿಟಿಷ್ ಸರ್ಕಾರಕ್ಕೆ ಇಲ್ಲವೆಂದು ಈ ಬಿನ್ನಹಕಾರರು ದೃಢಮಾಡಿಕೊಂಡಿದ್ದರು. ಈ ಬಗೆಯ ನಡತೆಗೆ ದೂರದೃಷ್ಟಿಯಿಲ್ಲದಿರುವುದೇ ಕಾರಣವೆಂದು ಚರಿತ್ರೆಯಿಂದ ಸ್ಥಿರಪಟ್ಟಿದೆ. ಕೊನೆಯಲ್ಲಿ ಈ ವರ್ತನೆಯು ರಾಜರಿಗೆ ಹಾನಿಕರವಾಗಿಯೇ ಪರಿಣಮಿಸುವುದು. ಏಕೆಂದರೆ, ಬುದ್ಧಿಹೀನರಾದ ಜನರು ಅವಕಾಶ ದೊರೆತಾಗ ತಮ್ಮ ರಾಜರ ಮೇಲೆ ದಂಗೆ ಎದ್ದಿದ್ದಾರೆ. ಇದರ ಫಲವಾಗಿ ಅತಿ ಕ್ರೂರತರ ಕಾರ್ಯಗಳು ನಡೆದಿವೆ. ಇದಕ್ಕೆ ಪ್ರತಿಯಾಗಿ ಸುಖಶಾಂತಿಗಳನ್ನು ಇಚ್ಛಿಸುವ ಜನರು ನ್ಯಾಯಪರವೂ ಉದಾರವೂ ಆದ ಉತ್ತಮ ಸರ್ಕಾರಕ್ಕೆ ಒಳಪಟ್ಟಿದ್ದರೆ ಅವರು ಸಾಮಾನ್ಯವಾಗಿ ಆ ಸರ್ಕಾರದಲ್ಲಿ ಹೆಚ್ಚು ಮಮತೆಯುಳ್ಳವರಾಗುವರು. ಪ್ರಜೆಗಳು ಜ್ಞಾನವಂತರೂ ಸರ್ಕಾರದ ಉಪಕಾರಗಳನ್ನು ಶ್ಲಾಘಿಸುವವರೂ ಆದಂತೆಲ್ಲ ಈ ಮಮತೆಯು ಹೆಚ್ಚುವುದು.

ವಿಶಾಲರಾಜ್ಯದ ಆಡಳಿತದಲ್ಲಿ ಲೋಪದೋಷಗಳುಂಟಾಗುವುವೆಂಬುದು ಪ್ರತಿಯೊಬ್ಬ ಸತ್ಪ್ರಭುವಿಗೂ ವ್ಯಕ್ತವಾಗಿರಬೇಕು. ಆದುದರಿಂದ ಪ್ರಭುವು ತಾನು ವಿಚಾರಣೆ ನಡೆಸಬೇಕಾದ ಸಂದರ್ಭಗಳನ್ನು ತಿಳಿಸುವ ಅವಕಾಶವನ್ನು ಪ್ರತಿಯೊಬ್ಬ ಪ್ರಜೆಗೂ ಕಲ್ಪಿಸುವುದರಲ್ಲಿ ಆತುರನಾಗಿರುತ್ತಾನೆ. ಈ ಮುಖ್ಯವಾದ

ಉದ್ದೇಶವನ್ನು ಒದಗಿಸುವುದಕ್ಕೆ ಲೇಖನ ಸ್ವಾತಂತ್ರ್ಯವೇ ಸಾಧನ. ಈ ಸ್ವಾತಂತ್ರ್ಯವು ಯಾವಾಗಲಾದರೂ ದುರುಪಯೋಗವಾದರೆ ಹಾಗೆ ಸರ್ಕಾರದ ನಡತೆಯಲ್ಲಿ ತಪ್ಪುತೋರ್ಪಡಿಸಿದವರನ್ನು ಶಿಕ್ಷಿಸಲು ಕಾನೂನು ಸಿದ್ಧವಾಗಿರಬೇಕು.

ಈ ಬಿನ್ನಹಕಾರರು ಲೇಖನ ಸ್ವಾತಂತ್ರ್ಯವನ್ನು ರದ್ದು ಮಾಡುವ ಕಾನೂನನ್ನು ವಿಧಿಸಕೂಡದೆಂದು ಬೇಡುತ್ತಾರೆ. ಈ ಪ್ರಾರ್ಥನೆಗೆ ಪ್ರಭುಗಳ ಕೃಪೆ ಒದಗಿ ದೇಶೀಯರು ಬ್ರಿಟಿಷರ ಅಧೀನದಲ್ಲಿ ಇದುವರೆಗೆ ಅನುಭವಿಸಿದ ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವನ್ನು ಮುಂದೆಯೂ ಅನುಭವಿಸುವ ಹಕ್ಕನ್ನು ಒದಗಿಸಿಕೊಡಬೇಕೆಂದು ಪ್ರಾರ್ಥಿಸುತ್ತಾರೆ."

ಈ ಬಿನ್ನಹವನ್ನು ಕುರಿತು, ೧೮೩೪ರಲ್ಲಿ ನಡೆದ ರಾಮಮೋಹನರ ಮೊದಲನೆಯ ವರ್ಷದ ಜಯಂತ್ಯುತ್ಸವದಲ್ಲಿ ಭಾಗವಹಿಸಿದ ಟರ್ಟನ್ ಎಂಬಾತನು, ಹೀಗೆ ವಿವರಿಸಿದ್ದಾನೆ: "ಅತಿನಿಂದ್ಯವಾದ ಆಜ್ಞೆಯನ್ನು ಪ್ರತಿಭಟಿಸುವುದರಲ್ಲಿ ರಾಮಮೋಹನರು ಪೌರುಷದಿಂದಲೂ ಧೈರ್ಯದಿಂದಲೂ ಮುಂದೆ ಬಂದಂತೆ ಮತ್ತೆ ಯಾರೂ ಬರಲಿಲ್ಲ. ಬ್ರಿಟಿಷ ದೇಶದಲ್ಲಿಯೇ ಹುಟ್ಟಿ ಬೆಳೆದವರೂ ಕೂಡ, ಅವರು ೧೮೨೩ರಲ್ಲಿ ನಡೆಸಿದ್ದಕ್ಕಿಂತ ಹೆಚ್ಚಾಗಿ, ತಮ್ಮ ದೇಶಹಿತಕ್ಕಾಗಿ ಇಷ್ಟು ಮನಃಪೂರ್ವಕವಾಗಿ ಬೆಂಬಲ ಕೊಡುತ್ತಿರಲಿಲ್ಲ. ಪರಾಧೀನದ ವಾತಾವರಣದಲ್ಲಿ ಬೆಳೆದ ವ್ಯಕ್ತಿಯಲ್ಲಿ ಇಷ್ಟು ಅತಿಶಯವಾದ ಸ್ವಾತಂತ್ರ್ಯಭಾವವಿದ್ದುದು ನನಗೆ ಅತ್ಯಾನಂದದ ವಿಷಯವಾಯಿತು."

ಈ ಬಿನ್ನಹದಿಂದ ಪ್ರಯೋಜನವಾಗಲಿಲ್ಲ. ಪತ್ರಿಕಾ ಸ್ವಾತಂತ್ರ್ಯವನ್ನು ರದ್ದುಮಾಡತಕ್ಕ ಕಾನೂನು ೧೮೨೩ನೆಯ ಮಾರ್ಚಿ ತಿಂಗಳಲ್ಲಿ ಸರ್ಕಾರದಿಂದ ವಿಧಿತವಾಗಿ ಆಜ್ಞೆಯಾಯಿತು. ರಾಮಮೋಹನರ ಪ್ರಯತ್ನಗಳೆಲ್ಲವೂ ಹೀಗೆ ವಿಫಲವಾಗಲು ಇಂಗ್ಲೆಂಡಿನ ಚಕ್ರವರ್ತಿಗಳಾದ ನಾಲ್ಕನೆಯ ಜಾರ್ಜ್ ಅವರಲ್ಲಿಗೆ ಕಳುಹಿಸಲು ಒಂದು ಬಿನ್ನಹವನ್ನು ಸಿದ್ಧಮಾಡಿದರು. ಆ ಬಿನ್ನಹವು ಮೊದಲಿನದಕ್ಕಿಂತಲೂ ದೀರ್ಘವಾದುದು. ಅದಕ್ಕೆ ಆಗಿನ ಅನೇಕ ಮಾನ್ಯಮಹನೀಯರು ಸಹಿಹಾಕಿದರು. ಅದರಲ್ಲಿನ ಕೆಲವು ಮುಖ್ಯ ಭಾಗಗಳು ಹೀಗಿರುವುವು:

ಬ್ರಿಟಿಷ್ ಪ್ರಜೆಗಳ ಅಭಿಪ್ರಾಯ ಸ್ವಾತಂತ್ರ್ಯವನ್ನು ಪ್ರಭುಗಳು ಮನ್ನಿಸುವುದಾಗಿಯೂ, ಹಾಗೆ ಮಾಡುವುದರಲ್ಲಿ ತಮ್ಮ ಅಮೋಘಸ್ಥಾನ ಯೋಗ್ಯತೆಗಳಿಗೆ

ಅವರಿಂದ ಸಲ್ಲಬೇಕಾಗಿರುವ ಭಕ್ತಿಗೌರವಗಳಿಗೆ ಹಾನಿಯೊದಗಿಲ್ಲವೆಂದೂ ಪ್ರಭುಗಳ ಈ ದೇಶದ ವಿನೀತ ಪ್ರಜೆಗಳು ಕೇಳಿದ್ದೇವೆ. ತಮ್ಮ ಸಚಿವರ ವರ್ತನೆಯು ಆಗಾಗ್ಗೆ ಚರ್ಚೆಗೆ ಬಂದೂ ಸರ್ಕಾರದಲ್ಲಿರುವ ದರ್ಪಗೌರವಗಳು ಸ್ಥಿರವಾಗಿರುವುದಾಗಿ ತಿಳಿದಿದ್ದೇವೆ. ದೇಶದ ಪ್ರಜೆಗಳಲ್ಲಿ ಹತ್ತರಲ್ಲಿ ಒಂಬತ್ತಕ್ಕೆ ಹೆಚ್ಚು ಭಾಗವು ವೃತ್ತಪತ್ರಿಕೆಗಳನ್ನು ಓದುವವರಾಗಿದ್ದು, ಪತ್ರಿಕೆಗಳಲ್ಲಿ ಪ್ರಕಟವಾಗುವ ಅಭಿಪ್ರಾಯಗಳಿಂದ ಪ್ರೇರಿತರಾಗುವ, ದೇಶದಲ್ಲಿಯೇ ಸರ್ಕಾರದಲ್ಲಿ ದ್ವೇಷವನ್ನೂ ಅವಮಾನವನ್ನೂ ವ್ಯಕ್ತಪಡಿಸದೆ ಇರುವಾಗ ದೇಶದ ಬಹುಭಾಗದ ಪ್ರಜೆಗಳು ಪತ್ರಿಕೆಗಳನ್ನೇ ಓದದ ಇರುವಾಗ ಸರ್ಕಾರದ ವಿಷಯದಲ್ಲಿ ದ್ವೇಷ ಅಗೌರವಗಳು ಹುಟ್ಟುವುದು ಬಹುಮಟ್ಟಿಗೆ ಕಡಿಮೆಯೇ ಇರಬೇಕು. ಇಲ್ಲಿನ ಪ್ರಜೆಗಳಿಗೆ ಸರ್ಕಾರದ ವಿಷಯದಲ್ಲಿ ವಿಶೇಷ ಮರ್ಯಾದೆಯುಂಟು. ಅವರ ನಿರ್ಣಯವು ಅನುಭವದ ಆಧಾರದಿಂದ ಹುಟ್ಟಿದುದು, ಅವರ ಮನಸ್ಸು ಸರ್ಕಾರವು ಕೈಗೊಳ್ಳುವ ಕಾರ್ಯಗಳಿಂದ ಚಲಿತವಾಗುವುದೇ ಹೊರತು ಇತರರ ಬರವಣಿಗೆಗಳಿಂದ ಚಲಿಸುವುದಿಲ್ಲ. ಆದುದರಿಂದ ಸರ್ಕಾರವು ತನ್ನ ನಡತೆಗಳಿಂದಲೇ ಜನರ ದ್ವೇಷಕ್ಕೂ ತಿರಸ್ಕಾರಕ್ಕೂ ಒಳಗಾಗುವುದು.

ಸರ್ಕಾರವು ತನ್ನ ಕಾರ್ಯಗಳನ್ನು ವಿಮರ್ಶೆಗೆ ಒಳಪಡಿಸುವುದರಿಂದ ಅದರ ವಿಷಯದಲ್ಲಿ ದೇಶೀಯರಿಗೆ ಪ್ರೀತಿಯೂ, ಗೌರವವೂ, ಉಂಟಾಗುವುದಲ್ಲದೆ ಮಾನವ ವರ್ಗಕ್ಕೇ ಮರ್ಯಾದೆಯುಂಟಾಗುವುದು. ಯೂರೋಪು ಮತ್ತು ಏಷ್ಯಾಗಳಲ್ಲಿನ ಸ್ವೇಚ್ಛಾವರ್ತಿಗಳಾದ ರಾಜರು ತಮ್ಮ ಕಾರ್ಯಗಳನ್ನು ವಿಮರ್ಶಿಸುವ, ಮತ್ತು ಅಭಿಪ್ರಾಯಗಳನ್ನು ಸೂಚಿಸುವ, ಸ್ವಾತಂತ್ರ್ಯವನ್ನು ಪ್ರಜೆಗಳಿಗೆ ಕೊಟ್ಟಿಲ್ಲ. ಆದುದರಿಂದ ಆ [illegible]ಗಳಿಗೂ ಲಭಿಸದ ಗೌರವವು ತಮಗೆ ಲಭಿಸುವುದು.

ಏಷ್ಯಾ ಖಂಡದಲ್ಲಿ ತಮ್ಮ ಕಾರ್ಯಗಳನ್ನು ಪ್ರಜೆಗಳ ವಿಮರ್ಶೆ ನಿರ್ಣಯಗಳಿಗೆ ಒಳಪಡಿಸಿದ ರಾಜರು ಹೆಚ್ಚಾಗಿಲ್ಲ. ಆದರೆ ಹಾಗೆ ಮಾಡಿದ ರಾಜರು ಜನರ ದ್ವೇಷ ತಿರಸ್ಕಾರಗಳಿಗೆ ಈಡಾಗುವುದಕ್ಕೆ ಬದಲು ರಾಜರ ಜೀವಂತಕಾಲದಲ್ಲಿ ಅವರ ಹೆಚ್ಚು ಪ್ರೀತಿಗೂ ಗೌರವಕ್ಕೂ ಪಾತ್ರರಾದರು, ಅವರು ಸತ್ತಮೇಲೆ ಮುಂದಿನ ಕಾಲದ ಜನರಸ್ಮರಣೆಗೆ ಈಡಾಗುತ್ತಿದ್ದರು. ಸ್ವೇಚ್ಛಾವರ್ತಿಗಳಾಗಿದ್ದ ರಾಜರು ತಮ್ಮ ಕಾಲದಲ್ಲಿಯೇ ಜನರ ದ್ವೇಷಕ್ಕೆ ಈಡಾಗಿ ಬಹು ಪ್ರಯಾಸದಿಂದ ದಂಗೆಯನ್ನೋ ಮರಣವನ್ನೋ ತಪ್ಪಿಸಿಕೊಳ್ಳಬೇಕಾಗಿತ್ತು, ಅವರು ಸತ್ತಮೇಲಂತೂ ಜನರು ಅವರನ್ನು ನಿಂದಿಸುತ್ತಿದ್ದರು ಅಥವಾ ಮರೆಯುತ್ತಿದ್ದರು.

ದೂರದ ಅಧೀನ ರಾಜ್ಯಗಳಿಗೆ ಲೇಖನ ಸ್ವಾತಂತ್ರ್ಯವನ್ನು ಕೊಡುವುದು ಕ್ಷೇಮವಲ್ಲವೆಂಬುದು ಈ ದೇಶದಲ್ಲಿ ನಡೆದಿರುವ ಸಂದರ್ಭಗಳಿಗೆ ಕಾರಣವಾಗಿ

ಇದರಿಂದ ವಂಗ ದೇಶೀಯರಿಗೆ ಇದುವರೆಗೆ ಕೊಡಲಾಗಿದ್ದ ಹಕ್ಕು ಇನ್ನು ಮುಂದೆ ಕೊಡಲಾಗದೆಂದು ಹೇಳುವಲ್ಲಿ ಅವರು ಇನ್ನುಮುಂದೆ ಶಾಶ್ವತವಾಗಿ ಹೀನತೆ, ಅಧೀನತೆಗಳಲ್ಲಿರಬೇಕೆಂದು ಅರ್ಥವಾಗುವುದು. ಬ್ರಿಟಿಷ್ ಆಳಿಕೆಯು ಮುಗಿಯುವವರೆಗೂ ಈ ಸ್ಥಿತಿಯಿಂದ ಬಿಡುಗಡೆಯಿಲ್ಲವೆಂದೂ ಭಾಸವಾಗುವುದು.

ತನ್ನ ಸ್ವಭಾವಕ್ಕೆ ವಿರುದ್ಧವಾದ ತತ್ತ್ವವನ್ನು ಅಂಗೀಕರಿಸಲು ಬ್ರಿಟಿಷ್ ಜನಾಂಗವು ಇದುವರೆಗೂ ಸಮ್ಮತಿಸಿಲ್ಲ. ತನ್ನ ಅಧೀನ ರಾಜ್ಯಗಳನ್ನು ಅಜ್ಞಾನದಲ್ಲಿಟ್ಟಿರುವುದರಿಂದಲೇ ತಮ್ಮ ಆಳಿಕೆಯನ್ನು ಸ್ಥಿರಗೊಳಿಸುವ ಯೋಚನೆಯನ್ನು ಬ್ರಿಟಿಷ್ ಸರ್ಕಾರವು ಮಾಡುತ್ತಿರುವುದಾದರೆ ಪತ್ರಿಕೆಗಳ ಪ್ರಕಟನೆಯನ್ನು ತಡೆಯುವುದೊಂದೇ ಸಾಲದು ; ಹಾಗೆಯೇ ಎಲ್ಲ ಬಗೆಯ ಇತರ ಪ್ರಕಟನೆಗಳನ್ನೂ, ವಿದ್ಯಾಭ್ಯಾಸವನ್ನೂ, ಜ್ಞಾನಾಭಿವೃದ್ಧಿಯ ಇತರ ಮಾರ್ಗಗಳನ್ನೂ ತಡೆಯಬೇಕು. ಸರ್ಕಾರದ ಸ್ಥಿರತೆಯ ವಿಷಯದಲ್ಲಿ ಸಂದೇಹವುಳ್ಳವರಿಗೆಲ್ಲ ಜ್ಞಾನಾಭಿವೃದ್ಧಿಯಿಂದ ಒದಗುವ ಪ್ರಯೋಜನಗಳು ಭಯೋತ್ಪಾದನೆಯನ್ನುಂಟು ಮಾಡಿರಬೇಕು ; ಈ ದೇಶದ ಸ್ಥಿತಿಯನ್ನು ಸ್ವಲ್ಪವಾದರೂ ತಿಳಿದವರಿಗೆಲ್ಲ ಪತ್ರಿಕೆಗಳ ಮೂಲಕವೂ ಇತರ ರೀತಿಗಳಲ್ಲಿಯೂ ಎಷ್ಟು ಸಾಹಸಮಾಡಿದರೂ ಜನಗಳ ಈಗಿನ ಅಭಿಪ್ರಾಯ ನಡೆವಳಿಕೆಗಳಲ್ಲಿ ಹೆಚ್ಚಿನ ವ್ಯತ್ಯಾಸವುಂಟಾಗಬೇಕಾದರೆ ಅನೇಕ ವರ್ಷಗಳು ಕಳೆಯಬೇಕೆಂಬುದು ವ್ಯಕ್ತವಾಗದೆ ಇರದು. ಜನರಿಗೆ ಆರ್ಷೇಯ ಪದ್ಧತಿಗಳಲ್ಲಿ ಹೆಚ್ಚು ನಂಬಿಕೆಯುಂಟು.

ಸ್ವೇಚ್ಛಾಪ್ರವೃತ್ತಿಯ ಸರ್ಕಾರವು ತನ್ನ ಕಾರ್ಯಗಳು ಜನರ ಆಕ್ಷೇಪಣೆಗೆ ಒಳಗಾಗಬಹುದೆಂಬ ಭೀತಿಯಿಂದ ಎಲ್ಲ ಬಗೆಯ ಅಭಿಪ್ರಾಯ ಪ್ರಕಟನೆಯನ್ನೂ ತಡೆಯುವುದು. ಎಲ್ಲ ನ್ಯಾಯವಾದ ಅಧಿಕಾರಕ್ಕೂ ಜ್ಞಾನಾಭಿವೃದ್ಧಿಯಿಂದ ಹಾನಿಬರುವುದೆಂಬುದು ಸರ್ಕಾರದ ಅಭಿಪ್ರಾಯವಾಗಿರುವುದು. ಜನರು ಜ್ಞಾನವನ್ನು ಪಡೆದಂತೆಲ್ಲ, ಬಹು ಮಂದಿಯ ಒಟ್ಟು ಪ್ರಯತ್ನದಿಂದ, ಹಲಜನರ ಅಧಿಕಾರವನ್ನು ಉರುಳಿಸಬಹುದೆಂಬುದನ್ನು ತಿಳಿದು ಸ್ವಾತಂತ್ರ್ಯವನ್ನು ಪಡೆಯುವರು. ನಾಗರಿಕತೆಯಲ್ಲಿ ಹೆಚ್ಚು ಮುಂದುವರಿಯದಿರುವ ದೇಶಗಳಲ್ಲಿ ಅನಾಯಕತೆಯೂ ದಂಗೆಯೂ ಬಹುಮಟ್ಟಿಗೆ ನೆಲಸಿರುವುದೆಂಬುದು ಚರಿತ್ರೆಯಿಂದ ಸಿದ್ಧವಾಗುವುದು. ಜ್ಞಾನಾಭಿವೃದ್ಧಿ ಹೆಚ್ಚಿರುವ ದೇಶಗಳಲ್ಲಿ ಸರ್ಕಾರವನ್ನು ವಿರೋಧಿಸುವ ದಂಗೆಗಳು ವಿರಳ. ಪ್ರಜೆಗಳು ವಿದ್ಯಾವಂತರೂ ನಾಗರಿಕರೂ ಆದಷ್ಟೂ, ಸರ್ಕಾರವು ನ್ಯಾಯವೂ ದಯಾಮಯವೂ ಆಗಿದ್ದಲ್ಲಿ, ದಂಗೆ ಏಳುವುದು ಕಡಿಮೆಯಾಗುವುದು.

ಈ ರೀತಿಗಳಲ್ಲಿ ಪ್ರಕಟನ ಸ್ವಾತಂತ್ರ್ಯವು ಆಳುವವರಿಗೂ ಪ್ರಜೆಗಳಿಗೂ ಬಹು ಆವಶ್ಯಕವಾಗಿರುವುದು. ಈಗ ಆಚರಣೆಗೆ ತರುವ ನಿಬಂಧನೆಯಿಂದ ಬ್ರಿಟಿಷ್

ಆಳಿಕೆಯು ಇಲ್ಲಿ ಸ್ಥಾಪಿತವಾದಂದಿನಿಂದ ಪ್ರಾಪ್ತವಾಗಿದ್ದ ಹಕ್ಕನ್ನು ತೆಗೆಯಲಾಗುವುದು.

ಪ್ರಭುಗಳಿಗೆ ತಿಳಿದಿರುವಂತೆ ಹಿಂದೆ ಮುಹಮ್ಮದೀಯರ ಆಳಿಕೆಯಲ್ಲಿ ಪ್ರಜೆಗಳಿಗೆ ರಾಜಕೀಯ ಸ್ವಾತಂತ್ರ್ಯವಿತ್ತು. ಮುಹಮ್ಮದೀಯರಿಗೆ ಸಿಕ್ಕುತ್ತಿದ್ದಂತಹ ಅಧಿಕಾರಗಳೂ ಹುದ್ದೆಗಳೂ ದೇಶೀಯರಿಗೂ ಯಾವ ಭೇದವೂ ಇಲ್ಲದೆ ದೊರೆಯುತ್ತಿದ್ದುವು. ಬ್ರಿಟಿಷ್ ಆಳಿಕೆಯಲ್ಲಿ ರಾಜಕೀಯ ಸ್ವಾತಂತ್ರ್ಯವು ತಪ್ಪಿದರೂ ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವಿತ್ತು. ಆದರೂ ದೇಶೀಯರು ಈ ಸ್ವಾತಂತ್ರ್ಯವನ್ನು ಹೆಚ್ಚಿಗೊಳಿಸಿ ಅವರ ಪೂರ್ವಿಕರಿಗಿಂತಲೂ ಸುಖಿಗಳಾಗಿದ್ದರು. ಆದರೆ ಈ ಸಾಮಾಜಿಕ ಸ್ವಾತಂತ್ರ್ಯವನ್ನು ಬ್ರಿಟಿಷ್ ಸರ್ಕಾರವು ಅಪಹರಿಸಿದರೆ ಆ ಸರ್ಕಾರದಿಂದ ಸುಖಶಾಂತಿಗಳಾಗುವುವೆಂಬ ನಿರೀಕ್ಷೆಯು ಭಗ್ನವಾದಂತೆಯೇ ಸರಿ.

ಪ್ರಭುಗಳು ಈ ದೇಶದ ರಾಜ್ಯಾಡಳಿತವನ್ನು ಅಧಿಕಾರ ಮಂಡಲಿಗೆ ಒಪ್ಪಿಸಿರುವಿರಿ. ಈ ಮಂಡಲಿಯು ಈ ದೇಶದ ಪ್ರಜೆಗಳಲ್ಲಿ ಅತ್ಯಸಮಾನವಾದ ಪ್ರೀತಿ ಮಮತೆಗಳನ್ನಿಟ್ಟಿರುವುದು. ಆದರೂ ಅವರು ನಿರ್ಮಿಸುವ ಪದ್ಧತಿಗಳೂ ಕಾನೂನುಗಳೂ ದೇಶೀಯರಿಗೆ ವಾಸ್ತವವಾಗಿಯೂ ಉಪಯೋಗಕರವಾಗಿವೆಯೇ ಎಂಬುದನ್ನು ತಿಳಿಯಲು ಬೇರೆ ಸಾಧನವನ್ನು ಮಾಡಬೇಕೆಂದು ಈ ಲೇಖಕರು ಅಭಿಪ್ರಾಯಪಡುತ್ತಾರೆ. ಈ ಸಾಧನವು ಈ ಕೆಳಗಿನ ಎರಡು ರೀತಿಗಳಲ್ಲಿ ಅಲ್ಲದೆ ಬೇರೆ ಆಗಲಾರದು. ಮೊದಲನೆಯದು, ಸ್ವಾತಂತ್ರ್ಯವುಳ್ಳ ಪತ್ರಿಕೋದ್ಯೋಗ ಮತ್ತು ಅಧಿಕಾರಮಂಡಲಿಯು ಆಶ್ರಯಕ್ಕೊಳಪಟ್ಟಂತೆ ಜಿಲ್ಲೆಗಳಲ್ಲಿ ಪತ್ರಿಕೆಗಳ ಸ್ಥಾಪನೆ. ಎರಡನೆಯದು, ಸರ್ಕಾರಿ ನೌಕರಿಗೆ ಸೇರದೆ ಇರುವ ಬುದ್ಧಿವಂತರೂ ಗೌರವಸ್ಥರೂ ಆದ ಜನರ ಸಮಿತಿ. ಈ ಸಮಿತಿಯು ದೇಶದಲ್ಲಿ ಅಲ್ಲಲ್ಲಿ ಸಂಚಾರ ಮಾಡಿ ತಾವೇ ಪ್ರತ್ಯಕ್ಷವಾಗಿ ದೇಶೀಯರ ಸ್ಥಿತಿಗತಿಗಳೇನೆಂಬುದನ್ನೂ ಅಧಿಕಾರಿ ಮಂಡಲಿಯ ಕಾನೂನು ಇತ್ಯಾದಿಗಳು ಹೇಗೆ ಪರಿಣಮಿಸುತ್ತವೆಯೆಂಬುದನ್ನೂ ವಿಚಾರಮಾಡಿ ಇಂಗ್ಲಂಡಿನಲ್ಲಿರುವ ಅಧಿಕಾರಿಗಳಿಗೂ ಪ್ರಭುಗಳಿಗೂ ತಿಳಿಸತಕ್ಕದ್ದು. ಆದರೆ ಈ ಕಾರ್ಯವನ್ನು ಸಮಿತಿಯ ಮಹನೀಯರು ಸಮರ್ಪಕವಾಗಿ ನಡೆಸಬೇಕಾಗಿದ್ದಲ್ಲಿ ಅವರು ಈ ವಿಸ್ತಾರವಾದ ದೇಶದಲ್ಲಿ ಪದೇಪದೇ ಸಂಚಾರ ಮಾಡಬೇಕಾಗುವುದು. ಆದುದರಿಂದ ಈ ಏರ್ಪಾಟಿಗೆ ದೇಶದ ವಿಸ್ತಾರವು ಒಂದು ದೊಡ್ಡ ಅಡಚಣೆಯಾಗಿದೆ. ಅಲ್ಲದೆ ಇದರಿಂದ ಹೆಚ್ಚು ಹಣವೆಚ್ಚವಾಗುವುದು; ಈ ಕಾರಣಗಳಿಂದ ಈ ಮಾರ್ಗವು ಸಾಧ್ಯವಾದೀತೆಂದು ಈ ಲೇಖಕರು ನಂಬಲಾರರು.

ಸತ್ಯಪ್ರಕಟನೆಯೂ, ಪ್ರಜೆಗಳ ಅಭಿಪ್ರಾಯಗಳನ್ನು ಪತ್ರಿಕೆಗಳಮೂಲಕ ವ್ಯಕ್ತಪಡಿಸುವ ಸ್ವಾತಂತ್ರ್ಯವೂ ರಾಜ್ಯಕ್ಕೆ ಯಾವ ತೊಂದರೆಯನ್ನೂ ಉಂಟುಮಾಡ

ಕಾರಿವು. ಇಂಡಿಯಾ ದೇಶದ ಪ್ರಜೆಗಳು ಪ್ರಭುಗಳಲ್ಲಿ ಭಕ್ತಿಯನ್ನೂ ಪ್ರೀತಿಯನ್ನೂ ಇಟ್ಟಿರುವವರಾದರೂ ಈ ಅಮೂಲ್ಯವಾದ ಹಕ್ಕು ಅವರಿಗೆ ಸಲ್ಲತಕ್ಕದ್ದಲ್ಲವೆಂದು ಪ್ರಭುಗಳು ಭಾವಿಸುವ ಪಕ್ಷಕ್ಕೆ ಯುಕ್ತವಾದ ನಿಬಂಧನೆಗಳನ್ನು ಕಲ್ಪಿಸತಕ್ಕದ್ದು.

ಕೊನೆಯಲ್ಲಿ, ಪ್ರಭುಭಕ್ತರಾದ ಈ ದೇಶದ ಜನರು ತಮ್ಮ ಅಭಿಪ್ರಾಯ ಗಳನ್ನು ಪತ್ರಿಕೆಗಳಮೂಲಕ ವ್ಯಕ್ತಪಡಿಸುವ ಹಕ್ಕನ್ನು ಇಷ್ಟುಕಾಲವೂ ಅನುಭವಿ ಸಿದಂತೆಯೇ ಮುಂದೆಯೂ ಅನುಭವಿಸುವಂತೆ ಅನುಗ್ರಹಿಸಬೇಕೆಂದು ನಮ್ರತೆ ಯಿಂದ ಬೇಡಿಕೊಳ್ಳುತ್ತಾರೆ. ಪತ್ರಿಕೆಗಳು ಈ ಸ್ವಾತಂತ್ರ್ಯವನ್ನು ದುರುಪಯೋಗ ಪಡಿಸದಿರುವುದಕ್ಕೆ ಅವಶ್ಯಕವಾದ ನಿಬಂಧನೆಗಳನ್ನು ಕಲ್ಪಿಸತಕ್ಕದ್ದು, ಅಥವಾ ಈ ದೇಶೀಯರ ಸ್ಥಿತಿಗತಿಗಳನ್ನು ವಿಚಾರಮಾಡಲು ಬುದ್ಧಿವಂತರೂ ಸ್ವತಂತ್ರರೂ ಆಗಿರುವ ದೊಡ್ಡ ಮನುಷ್ಯರ ಸಮಿತಿಯೊಂದನ್ನು ಸ್ಥಾಪಿಸುವುದು.

ಈ ಬಿನ್ನಹವನ್ನು ಸಿದ್ಧಮಾಡಿದವರೂ ರಾಮಮೋಹನರೇ. ಈ ಬಿನ್ನಹದ ಶೈಲಿಯು ಗಂಭೀರವಾಗಿಯೂ ಬಿಗಿಯಾಗಿಯೂ ಇದ್ದು, ವಿಷ ಯನಿರೂಪಣವು ಪ್ರಮಾಣಬದ್ಧವಾಗಿದೆ. ಇದು ಅನೇಕ ಇಂಗ್ಲಿಷ್ ಮಹನೀಯರ ಪ್ರಶಂಸೆಗೆ ಪಾತ್ರವಾಗಿದೆ. ಇಲ್ಲಿನ ವಾದಸರಣಿಯು ಖಂಡಿತವಾಗಿಯೂ ಸ್ಪಷ್ಟವಾಗಿಯೂ ಇರುವಂತೆಯೇ ನ್ಯಾಯಬದ್ಧವಾ ಗಿಯೂ ಇದೆ. ರಾಮಮೋಹನರಲ್ಲಿ ಸ್ವಾತಂತ್ರ್ಯ ಪ್ರಿಯತೆಯು ಎಷ್ಟು ತೀವ್ರವಾಗಿತ್ತೆಂಬುದೂ, ಅವರು ಎಷ್ಟು ನಿರ್ಭಯವಾಗಿ ತಮ್ಮ ಅಭಿಪ್ರಾಯ ಗಳನ್ನು ವ್ಯಕ್ತಪಡಿಸುತ್ತಿದ್ದರೆಂಬುದೂ, ಸ್ಪಷ್ಟವಾಗುವುದು. ಆದರೂ ಅವರು ಮನಸ್ಸನ್ನು ಆವೇಶಕ್ಕಾಗಲಿ ದ್ವೇಷಕ್ಕಾಗಲಿ ಎಡೆಗೊಟ್ಟಿರಲಿಲ್ಲ. ಮೇಲಿನ ಎರಡು ಬಿನ್ನಹಗಳೂ ಒಂದೇ ವಿಷಯವನ್ನು ಕೂಲಂಕಷವಾಗಿ ವಿಚಾರಮಾಡುವವುಗಳಾಗಿ ಲೇಖಕರ ದೂರದರ್ಶಿತೆಯನ್ನೂ ರಾಜನೀತಿ ಜ್ಞತೆಯನ್ನೂ ಪ್ರಕಾಶಪಡಿಸತಕ್ಕವುಗಳಾಗಿವೆ. ರಾಮಮೋಹನರಿಗೆ ಬ್ರಿಟಿಷರ ಆಳಿಕೆಯಲ್ಲಿಯೂ ಅವರ ಸಂಸ್ಥೆಗಳಲ್ಲಿಯೂ, ಅವರ ವ್ಯವಸ್ಥೆ ಯಲ್ಲಿಯೂ ಹೆಚ್ಚು ನಂಬಿಕೆಯೂ ಗೌರವವೂ ಇತ್ತೆಂಬುದು ಮೇಲಿನ ಬಿನ್ನಹಗಳ ಭಾಗಗಳಿಂದ ವ್ಯಕ್ತವಾಗುವುದು. ಇಂಡಿಯದ ರಾಜಕೀಯ ವಿಷಯದಲ್ಲಿ ಇತರ ಯಾರಿಗೂ ಹೊಳೆಯದಿದ್ದ ಭವಿಷ್ಯವು ರಾಮಮೋಹ ನರ ಮನಸ್ಸಿಗೆ ಆಗಲೇ ಹೊಳೆದಿತ್ತು. ಭಾರತೀಯ ಸ್ವಾತಂತ್ರ್ಯ ಸಂಗ್ರಾ ಮಕ್ಕೆ ಮೊದಲಿಟ್ಟವರು ರಾಮಮೋಹನರೆಂದು ಧಾರಾಳವಾಗಿ ಹೇಳ ಬಹುದು. ಮೇಲಿನ ಎರಡು ಬಿನ್ನಹಗಳೂ ಭಾರತದ ರಾಜಕೀಯ

ಜಾಗೃತಿಗೆ ತಳಹದಿಯಾಗಿ, ದೇಶೀಯರ ರಾಜಕೀಯ ಹಕ್ಕು ಆಶಯಗಳನ್ನು ವ್ಯಕ್ತಪಡಿಸುವವುಗಳಾಗಿವೆ ರಾಮಮೋಹನರಲ್ಲಿ ಗೋಪಾಲಕೃಷ್ಣ ಗೋಖಲೆಯವರಲ್ಲಿನ ನ್ಯಾಯಪಕ್ಷವೂ, ದಾದಾಭಾಯಿ ನವರೋಜಿಯವರಲ್ಲಿನ ಧೈರ್ಯವೂ, ಸುರೇಂದ್ರನಾಥ ಬಾನರ್ಜಿಯವರಲ್ಲಿನ ವಾಕ್ಪಟುತ್ವವೂ ಒಂದುಗೂಡಿತ್ತೆಂದರೆ ಅತಿಶಯೋಕ್ತಿಯಾಗದು

ಇಷ್ಟು ವಿರೋಧದ ಮಧ್ಯದಲಿಯೇ ಪತ್ರಿಕಾ ಸ್ವಾತಂತ್ರ್ಯ ನಿರೋಧದ ಕಾನೂನು ೧೮೨೩ ನೆಯ ಮಾರ್ಚಿ ತಿಂಗಳಲ್ಲಿ ಸರ್ಕಾರದಿಂದ ವಿಧಿತವಾಗಿ ಆಜ್ಞೆಯಾಯಿತು ರಾಮಮೋಹನರು ಚಕ್ರವರ್ತಿಗಳಿಗೆ ಕಳುಹಿಸಿದ್ದ ಬಿನ್ನಹದ ಮೇಲೆ ಆರು ತಿಂಗಳಕಾಲ ಚಕ್ರವರ್ತಿಗಳ ಮಂತ್ರಿಮಂಡಲದಲ್ಲಿ ಚರ್ಚೆ ನಡೆಗು ಕೊನೆಗೆ ೧೮೨೫ ರಲ್ಲಿ ನಿರಾಕೃತವಾಯಿತು ಆದರೆ ರಾಮಮೋಹನರ ಪ್ರಯತ್ನವು ವ್ಯರ್ಥವಾಗಲಿಲ್ಲ ಮುಂದೆ ೧೮೩೫ ರಲ್ಲಿ ದೇಶೀಯರಿಗೆ ಪತ್ರಿಕಾಪ್ರಕಟನೆಯ ಸ್ವಾತಂತ್ರ್ಯವು ಲಭಿಸಿತು ಆದರೆ ಅದನ್ನು ನೋಡುವ ಸುಯೋಗವು ರಾಮಮೋಹನರಿಗೆ ಮಾತ್ರ ಇರಲಿಲ್ಲ

ಪತ್ರಿಕಾ ಸ್ವಾತಂತ್ರ್ಯ ಸಂಪಾದನೆಯಲ್ಲಿ ತಮ್ಮ ಪ್ರಯತ್ನವು ವಿಫಲವಾದುದರಿಂದ ರಾಮಮೋಹನರು ಎದೆಗುಂದಲಿಲ್ಲ ವೃತ್ತಪತ್ರಿಕೆಗಳು ದೇಶದ ವಿದ್ಯಾಪ್ರಚಾರಕ್ಕೆ ಮುಖ್ಯ ಸಾಧನವೆಂಬುದನ್ನು ಅವರು ಚಕ್ರವರ್ತಿಗಳಿಗೆ ಕಳುಹಿಸಿದ ಬಿನ್ನಹದಿಂದ ಸ್ಪಷ್ಟವಾಗಿದೆ ರಾಮಮೋಹನರು ವಿದ್ಯಾಪ್ರಚಾರಕ್ಕಾಗಿ ಮಾಡಿದ ಕೆಲವು ಪ್ರಯತ್ನಗಳನ್ನು ಹಿಂದೆಯೇ ನೋಡಿದ್ದೇವೆ ದೇಶೀಯರ ವಿದ್ಯಾಭಿವೃದ್ಧಿಗಾಗಿ ಬ್ರಿಟಿಷ್ ಸರ್ಕಾರದವರು ಒಂದು ಲಕ್ಷ ರೂಪಾಯಿಗಳನ್ನು ಒದಗಿಸಿದರು ವಿದ್ಯಾಭಿವೃದ್ಧಿಯ ಮಾರ್ಗಗಳನ್ನು ಗೊತ್ತುಪಡಿಸಲು ೧೮೨೩ ರಲ್ಲಿ ಒಂದು ಸಮಿತಿಯು ಏರ್ಪಾಡಾಯಿತು ಆ ಸಮಿತಿಯಲಿದ್ದ ಇಂಗ್ಲಿಷ್ ದೊಡ್ಡಮನುಷ್ಯರು ಪ್ರಾಚೀನ ಭಾಷಾ ಪಂಡಿತರಾಗಿದ್ದುದರಿಂದ, ಅವರು ಪ್ರಾಚೀನ ಭಾಷಾ ಸಂಸ್ಕೃತಿಗಳ ಅಭಿವೃದ್ಧಿಯು ಅವಶ್ಯಕವೆಂದು ಅಭಿಪ್ರಾಯ ಪಟ್ಟರು. ಆದರೆ ವಿದ್ಯಾಭ್ಯಾಸವು ಸಾಮಾನ್ಯ ಜನರಿಗೂ ಉಪಯೋಗವಾಗಬೇಕಾಗಿದ್ದಲ್ಲಿ ವಿದ್ಯಾಭ್ಯಾಸ ಕ್ರಮದಲ್ಲಿ ವ್ಯತ್ಯಾಸಬೇಕೆಂದು ಮತ್ತೆ ಕೆಲವರು ಅಭಿಪ್ರಾಯ ಪಟ್ಟರು. ಈ ಪಂಗಡದವರು ಪ್ರಾಚೀನ ರೀತಿಯ ವಿದ್ಯಾಭ್ಯಾ

ಸಕ್ಕೆ ಬದಲು ಪಾಶ್ಚಾತ್ಯರ ವಿಜ್ಞಾನ, ಸಾಹಿತ್ಯ ಮತ್ತು ಸಂಸ್ಕೃತಿಗಳ ಅಭ್ಯಾಸಕ್ಕೆ ಹೆಚ್ಚು ಅವಕಾಶವಿರಬೇಕೆಂದು ಹೇಳಿದರು. ಆಗ ಸರ್ಕಾರದವರಿಗೆ ಏನು ಮಾಡಬೇಕೆಂಬುದು ತೋರದಾಯಿತು. ಸರ್ಕಾರದವರೂ ಸಂಸ್ಕೃತ ಮಹಾ ಪಾಠಶಾಲೆಯನ್ನು ಸ್ಥಾಪಿಸುವ ಅಭಿಪ್ರಾಯವನ್ನೇ ಅನುಮೋದಿಸುವುದರಲ್ಲಿದ್ದರು. ಆ ಸಂದರ್ಭದಲ್ಲಿ ರಾಮಮೋಹನರು, ತಮ್ಮ ಹಿಂದಿನ ಪ್ರಯತ್ನಗಳು ವಿಫಲವಾಗಿದ್ದುವನ್ನು ಮನಸ್ಸಿಗೆ ತಂದುಕೊಳ್ಳದೆ, ೧೮೨೩ ರಲ್ಲಿ, ಆಗಿನ ವೈಸರಾಯರಾಗಿದ್ದ ಲಾರ್ಡ್ ಆಮ್ ಹರ್ಸ್ಟ್ ಅವರಿಗೆ ಒಂದು ವಿನಯ ಪೂರ್ವಕ ಪತ್ರವನ್ನು ಬರೆದರು. ಅದರಲ್ಲಿ ದೇಶೀಯರಿಗೆ ಉತ್ತಮವಾದ ವಿದ್ಯಾಭ್ಯಾಸ ಕ್ರಮ ಯಾವುದೆಂಬುದನ್ನು ರಾಮಮೋಹನರು ವಿವರಿಸಿದ್ದಾರೆ. ಅವರಿಗೆ ಪಾಶ್ಚಾತ್ಯರ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳಲ್ಲಿ ಹೆಚ್ಚು ಅಭಿಮಾನವಿತ್ತು. ಪತ್ರಿಕಾ ಕಾನೂನನ್ನು ವಿರೋಧಿಸಿ ಬರೆದ ಅವರ ಬಿನ್ನಹಗಳಿಂದ ಇದು ವ್ಯಕ್ತವಾಗಿದೆ. ಪಾಶ್ಚಾತ್ಯರ ವ್ಯವಹಾರಜ್ಞಾನ, ವಿದ್ಯಾರೀತಿಗಳಲ್ಲಿಯೂ ಅದೇ ಬಗೆಯ ಮೆಚ್ಚಿಕೆ ಇತ್ತು. ರಾಮಮೋಹನರು ವೈಸ್‌ರಾಯರಿಗೆ ಬರೆದ ಪತ್ರದ ಮುಖ್ಯ ಅಂಶಗಳು ಈ ರೀತಿ ಇವೆ :—

ಇಂಡಿಯಾ ದೇಶದ ಪ್ರಜೆಗಳ ಅಭಿವೃದ್ಧಿಗೆ ಸದ್ಯದಲ್ಲಿ ಪ್ರಾಚೀನ ಕಾಲದಿಂದಲೂ ಬಂದಿರುವ ಸಂಸ್ಕೃತ ವಿದ್ಯೆಗಿಂತಲೂ ಹೆಚ್ಚಾಗಿ ಪಾಶ್ಚಾತ್ಯ ವಿಜ್ಞಾನ ಶಾಸ್ತ್ರಗಳ ಅಭ್ಯಾಸಬೇಕಾಗಿದೆ. ಸಂಸ್ಕೃತ ಪಾಠಶಾಲೆಯ ಸ್ಥಾಪನೆಯಿಂದ ಯುವಕರ ಬುದ್ಧಿಯನ್ನು ವ್ಯಾಕರಣದ ತೊಡಕಾದ ಸೂತ್ರಗಳಿಂದಲೂ ಆಧ್ಯಾತ್ಮಿಕ ಗಹನ ವಿಚಾರಗಳಿಂದಲೂ ತುಂಬ ಬಹುದು. ಇಂತಹ ವಿದ್ಯೆಯಿಂದ ಯುವಕರ ವ್ಯವಹಾರಕ್ಕಾಗಲಿ ಸಮಾಜಕ್ಕಾಗಲಿ ಯಾವ ಉಪಯೋಗವೂ ಇಲ್ಲ. ಸಂಸ್ಕೃತ ವಿದ್ಯೆಯು ದೇಶದಲ್ಲಿ ಸಾವಿರಾರು ವರ್ಷಗಳಿಂದ ಪ್ರಚಾರದಲ್ಲಿರುವುದರಿಂದ ಅದರಲ್ಲಿ ಹೊಸದಾಗಿ ಕಲಿಯತಕ್ಕದ್ದೇನೂ ಇಲ್ಲ. ಸಂಸ್ಕೃತ ಭಾಷೆಯು ಕಷ್ಟವಾಗಿರುವುದರಿಂದ ಅದರ ಅಭ್ಯಾಸದಲ್ಲಿಯೂ, ಆ ಭಾಷೆಯಲ್ಲಿ ಅಡಗಿರುವ ಜ್ಞಾನವನ್ನು ಪಡೆಯುವುದರಲ್ಲಿಯೂ, ಜೀವಮಾನಗಳೇ ಕಳೆದುಹೋಗುವುವು. ಆ ಜ್ಞಾನವನ್ನು ಪ್ರಚಾರ ಮಾಡುವುದಕ್ಕಾಗಿ ಸಂಸ್ಕೃತ ಭಾಷೆಗೆ ಉತ್ತೇಜನ ಕೊಡುವುದು ಅವಶ್ಯವಾದರೆ ಅದನ್ನು ಇತರ ಮಾರ್ಗಗಳಲ್ಲಿ ಸಾಧಿಸಬಹುದು. ಸಂಸ್ಕೃತ ಭಾಷಾ ಪಂಡಿತರು ತಾವಾಗಿಯೇ ಅದರ ಪ್ರಚಾರದಲ್ಲಿ ತೊಡಗಿ ವಿದ್ಯಾದಾನ ಮಾಡುತ್ತಿರುವರು. ಅಂತಹವರಿಗೆ ಸರ್ಕಾರವು ಸಂಭಾವನೆಯನ್ನು ಕೊಡು

ವುದರಿಂದ ಅವರ ಕೆಲಸಕ್ಕೆ ಪ್ರೋತ್ಸಾಹ ಕೊಟ್ಟಂತಾಗಿ ಸಂಸ್ಕೃತ ವಿದ್ಯೆಗೂ ಉತ್ತೇಜನ ಕೊಟ್ಟಂತಾಗುವುದು ಸರ್ಕಾರದವರ ಉದ್ದೇಶವು ದೇಶೀಯರ ಅಭಿವೃದ್ಧಿಯಾಗುವುದರಿಂದ ಸಂಸ್ಕೃತ ಮಹಾ ಪಾಠಶಾಲೆಯ ಸ್ಥಾಪನೆಯಿಂದ ಆ ಉದ್ದೇಶವು ನೆರವೇರಿದಂತಾಗುವುದಿಲ್ಲ ಯುವಕರು ತಮ್ಮ ಆಯುಷ್ಯದ ಮುಖ್ಯಭಾಗದಲ್ಲಿ ಹತ್ತು ಹನ್ನೆರಡು ವರ್ಷಗಳು ವ್ಯಾಕರಣದ ಸೂಕ್ಷ್ಮ ವಿಚಾರ ಗಳನ್ನು ಕಲಿಯುವುದರಿಂದ ಯಾವ ಅಭಿವೃದ್ಧಿಯೂ ಆಗುವುದಿಲ್ಲ ಖದ್, ಖದತಿ ಇವುಗಳ ಅರ್ಥವ್ಯಾಪ್ತಿ ಎಷ್ಟೆಂಬುವದರ ಚರ್ಚೆಯಿಂದ ಏನು ಪ್ರಯೋಜನ ವಾದೀತು? ಅಥವಾ ಜೀವಾತ್ಮ ಪರಮಾತ್ಮರ ಸಂಬಂಧದ ಅಥವಾ ಜಗತ್ತು ಸತ್ಯವೇ ಮಿಥ್ಯೆಯೇ ಎಂಬ ಆಧ್ಯಾತ್ಮಿಕ ಚರ್ಚೆಗಳಿಂದ ಯುವಕರು ಉತ್ತಮ ಸಾಮಾಜಿಕರಾಗಲಾರರು ಕೇವಲ ಸಂಸ್ಕೃತ ವಿದ್ಯೆಯು ದೇಶೀಯರನ್ನು ಅಜ್ಞಾನದಲ್ಲಿಯೇ ಇಟ್ಟಿರಲು ಒಳ್ಳೆಯ ಸಾಧನ ಬ್ರಿಟಿಷ್ ಸರ್ಕಾರದ ಆಶಯವು ಇದಲ್ಲವಾದುದರಿಂದ ದೇಶೀಯರ ಮನಸ್ಸು ಬುದ್ಧಿಗಳನ್ನು ವಿಕಾಸಗೊಳಿಸುವ ವ್ಯವಹಾರೋಪಯುಕ್ತವಾದ ಗಣಿತ, ರಸಾಯನಶಾಸ್ತ್ರ, ಭೂತಶಾಸ್ತ್ರ ಪ್ರಕೃತಿಶಾಸ್ತ್ರ ಮೊದಲಾದ ವಿಜ್ಞಾನ ಶಾಸ್ತ್ರಗಳ ಬೋಧನೆಯು ಅತ್ಯಾವಶ್ಯಕ. ಸರ್ಕಾರದವರು ನಿಗದಿಮಾಡಿರುವ ಹಣಕ್ಕೆ ವಿಜ್ಞಾನಶಾಸ್ತ್ರಗಳಲ್ಲಿ ಪ್ರಸಿದ್ಧರಾಗಿರುವ ಯೂರೋಪಿನ ಉದ್ದಾಮ ಪಂಡಿತರನ್ನು ಕರಸಿ ಒಂದು ಪ್ರೌಢ ವಿದ್ಯಾಶಾಲೆಯನ್ನು ಸ್ಥಾಪಿಸುವುದು, ಮತ್ತು ಅಲ್ಲಿನ ವ್ಯಾಸಂಗಕ್ಕೆ ಅನುಕೂಲಿಸುವಂತೆ ಪುಸ್ತಕಭಂಡಾರ ವನ್ನೂ, ವಿಜ್ಞಾನ ಶಾಸ್ತ್ರಗಳ ಪ್ರಯೋಗ ಪರಿಶೋಧನೆಗಳಿಗ ಬೇಕಾದ ಉಪ ಕರಣಗಳನ್ನೂ ಒದಗಿಸತಕ್ಕದ್ದು.

ಹೀಗೆ ಸಂಸ್ಕೃತ ವಿದ್ಯೆಯನ್ನು ವಿರೋಧಿಸಿ ಪಾಶ್ಚಾತ್ಯ ವಿಜ್ಞಾನ ಶಾಸ್ತ್ರಗಳ ಅಭ್ಯಾಸವನ್ನು ಸಮರ್ಥಿಸುವುದರಲ್ಲಿ ತಮ್ಮ ದೇಶೀಯರಿಗೂ ಪ್ರಭುಗಳಿಗೂ ಸಲ್ಲಿಸಬೇಕಾಗಿರುವ ಕರ್ತವ್ಯವನ್ನು ಸಲ್ಲಿಸುತ್ತಿರುವುದಾಗಿ ರಾಮಮೋಹನರು ನಂಬಿದ್ದರು

ಈ ಪತ್ರವನ್ನು ವೈಸರಾಯರಲ್ಲಿಗೆ ತೆಗೆದುಕೊಂಡುಹೋದ ಬಿಷಪ್ ಹೀಬರ್ ಎಂಬವನು ಅದರ ಶುದ್ಧ ಭಾಷೆಯನ್ನೂ, ಅಭಿಪ್ರಾಯಗಳ ಸಮಂಜಸತೆಯನ್ನೂ, ಗ್ರಾಹ್ಯರೀತಿಯ ವಾದಸರಣಿಯನ್ನೂ, ಮನಃ ಪೂರ್ವಕವಾಗಿ ಮೆಚ್ಚಿ, ಈ ಬಗೆಯ ಬರೆವಣಿಗೆಯು ಪೌರ್ವಾತ್ಯರಲ್ಲಿ ಆಶ್ಚರ್ಯಕರವೆಂದು ಸೂಚಿಸಿರುವನು.

ಸರ್ಕಾರದವರು ರಾಮಮೋಹನರ ಪತ್ರವನ್ನು ಹೊಸದಾಗಿ ನಿಯಮಿತವಾಗಿದ್ದ ಸಮಿತಿಯವರ ಪರ್ಯಾಲೋಚನೆಗಾಗಿ ಕಳುಹಿಸಿದರು. ಸ್ಥಾಪಿತವಾಗಬೇಕಾದ ನೂತನ ಸಂಸ್ಕೃತ ಕಾಲೇಜಿನ ವಿಷಯದಲ್ಲಿ ರಾಮಮೋಹನರ ಪತ್ರವು ತಪ್ಪು ಅಭಿಪ್ರಾಯಗಳಿಂದ ಕೂಡಿರುವುದಾಗಿಯೂ, ಸರ್ಕಾರದವರ ಯೋಜನೆಯು ಯುಕ್ತವಾಗಿರುವುದಾಗಿಯೂ, ಸಮಿತಿಯವರು ತಿಳಿಸಿದರು. ಸಂಸ್ಕೃತ ಸಾಹಿತ್ಯ ಮತ್ತು ತತ್ತ್ವ ಶಾಸ್ತ್ರಗಳ ಪ್ರಾಶಸ್ತ್ಯ ಮತ್ತು ಉಪಯೋಗಗಳ ನಿರಾಕರಣೆಯು ಉತ್ಪ್ರೇಕ್ಷಿತವಾಗಿದೆ ಎಂದೂ ಹೇಳಿದರು. ಸಂಸ್ಕೃತ ಸಾಹಿತ್ಯಾಭ್ಯಾಸಕ್ಕೆ ಬದಲು ಇಂಗ್ಲಿಷ್ ವಿದ್ಯಾಭ್ಯಾಸವು ಆಚರಣೆಗೆ ಬರಬೇಕೆಂಬುದು ದೇಶೀಯರಪರವಾಗಿ ಮಾಡಿರುವ ಬಿನ್ನಹವೆಂದು ಹೇಳಲಾಗಿದೆ. ಆದರೆ ಆ ಬಿನ್ನಹಕ್ಕೆ ಒಬ್ಬ ವ್ಯಕ್ತಿಯ ಸಹಿಮಾತ್ರ ಇರುವುದು; ಮತ್ತು ಆ ವ್ಯಕ್ತಿಯ ಅಭಿಪ್ರಾಯವು ಸಾಮಾನ್ಯವಾಗಿ ಎಲ್ಲರ ಅಭಿಪ್ರಾಯಗಳಿಗೂ ವಿರೋಧವಾಗಿದೆಯೆಂಬುದು ವಿದಿತವಾಗಿಯೇ ಇದೆ. ಆದುದರಿಂದ ರಾಮಮೋಹನರ ಪತ್ರವು ದೇಶೀಯರಲ್ಲಿ ಯಾವ ಒಂದು ಪಕ್ಷದ ಅಭಿಪ್ರಾಯವನ್ನೂ ವ್ಯಕ್ತಪಡಿಸುವುದಿಲ್ಲ; ಹಾಗೆ ಮಾಡಿರುವುದಾಗಿ ಹೇಳಿರುವುದು ಸತ್ಯಕ್ಕೆ ವಿರೋಧವಾದುದು. ಆದುದರಿಂದ ರಾಮಮೋಹನರ ಸಲಹೆಯು ಪರ್ಯಾಲೋಚನೆಗೆ ಅರ್ಹವಾದುದಲ್ಲ ಎಂದು ತೀರ್ಮಾನವಾಯಿತು. ಸಂಸ್ಕೃತ ಕಾಲೇಜು ೧೮೨೪ ರಲ್ಲಿ ಸ್ಥಾಪಿತವಾಯಿತು.

ಪ್ರಾಚೀನ ಸಾಹಿತ್ಯ ಮತ್ತು ತತ್ತ್ವಶಾಸ್ತ್ರಗಳ ಅಭ್ಯಾಸದ ಮುಂದಣೆಯು ಸರ್ಕಾರದವರಿಗೆ ಉತ್ಪ್ರೇಕ್ಷೆಯೆಂದು ತೋರಿದರೂ ಇಂಗ್ಲೆಂಡಿನಲ್ಲಿದ್ದ ಕೋರ್ಟ್ ಆಫ್ ಡೈರೆಕ್ಟರುಗಳು ರಾಮಮೋಹನರ ವಾದವೇ ಸರಿಯಾದುದೆಂದು ತಿಳಿಸಿದರು. ಆದರೂ ಅವರು ಸರ್ಕಾರದವರ ಆಜ್ಞೆಯನ್ನು ತಾತ್ಕಾಲಿಕವಾಗಿ ಒಪ್ಪಿದರೂ ವಿದ್ಯಾಭ್ಯಾಸ ವ್ಯವಸ್ಥೆಯಲ್ಲಿ ಅನುಪಯುಕ್ತ ಅಂಶಗಳನ್ನು ತೆಗೆದು ಹಾಕಲು ಸಂತತ ಯತ್ನ ನಡೆಸಬೇಕೆಂದು ತಿಳಿಸಿದರು. ದೇಶೀಯರಿಗೆ ಇಂಗ್ಲಿಷರ ವಿಜ್ಞಾನ ಮೊದಲಾದ ವಿದ್ಯೆಗಳಲ್ಲಿ ಅಭಿರುಚಿಯಿರಲಿಲ್ಲವೆಂದೂ, ದೇಶೀಯ ಮೌಲ್ವಿ ಮತ್ತು ಪಂಡಿತರು ತಾವು ತಿಳಿದಿದ್ದಷ್ಟು ವಿದ್ಯೆಯಿಂದಲೇ ತೃಪ್ತರಾಗಿದ್ದಾರೆಂದೂ, ಅವರಿಗೆ ಪಾಶ್ಚಾತ್ಯರ ಸಾಹಿತ್ಯ

ಮತ್ತು ವಿಜ್ಞಾನಶಾಸ್ತ್ರಗಳನ್ನು ತಿಳಿದುಕೊಳ್ಳಲು ಕುತೂಹಲವಿಲ್ಲವೆಂದೂ, ಅಲ್ಲದೆ ಪಾಶ್ಚಾತ್ಯ ದೇಶಗಳ ವಿದ್ಯೆಗಳು ಉತ್ತಮವಾದುವೆಂದು ಅವರು ಅಂಗೀಕರಿಸುವಂತ ಬಲಾತ್ಕಾರಮಾಡಲು ಯತ್ನಿಸುವುದು ಅಸಮಾಧಾನಕ್ಕೆ ಕಾರಣವಾಗುವುದೆಂದೂ, ವಿದ್ಯಾಸಮಿತಿಯವರು ವರದಿ ಮಾಡಿದರು. ಇವಕ್ಕೆ ಪ್ರತಿಯಾಗಿ, ಬಂಗಾಳದಲ್ಲಿನ ದೇಶೀಯರಲ್ಲಿ ನೂರರಲ್ಲಿ ಎರಡರಷ್ಟು ಮಂದಿ ತಮ್ಮ ಮಕ್ಕಳಿಗೆ ಇಂಗ್ಲಿಷ್ ವಿದ್ಯೆ ಕಲಿಸಲು ಹೆಚ್ಚು ಸಂತೋಷಿಸುವರು ಎಂದು ರಾಮಮೋಹನರು ತಿಳಿಸಿದರು. ಅವರ ಅಭಿಪ್ರಾಯವನ್ನು ಇತರ ಪ್ರಮುಖ ಪ್ರಜೆಗಳೂ ಅನುಮೋದಿಸಿದರು, ಮತ್ತು ಇಂಗ್ಲಿಷ್ ವ್ಯಾಸಂಗ ನಡೆಯುತ್ತಿದ್ದ ಹಿಂದೂ ಕಾಲೇಜು ಮೊದಲಾದಂತಹ ಸಂಸ್ಥೆಗಳು ವಿದ್ಯಾರ್ಥಿಗಳಿಂದ ತುಂಬಿ ಏಳಿಗೆ ಹೊಂದುತ್ತಿರಲು ಸಂಸ್ಕೃತ ವಿದ್ಯಾಸಂಸ್ಥೆಗಳು ವಿದ್ಯಾರ್ಥಿಗಳ ದಾರಿದ್ರ್ಯದಿಂದಲೂ ಇತರ ರೀತಿಗಳಲ್ಲಿಯೂ ಕ್ಷೀಣಿಸುತ್ತಿತ್ತು. ಈ ಅಂಶಗಳು ರಾಮಮೋಹನರ ಅಭಿಪ್ರಾಯವನ್ನು ಪುಷ್ಟೀಕರಿಸುವ ನಿದರ್ಶನಗಳಾಗಿದ್ದುವು.

ರಾಮಮೋಹನರ ವಿರೋಧವು ಸರ್ಕಾರದವರಲ್ಲಿ ಫಲಕಾರಿಯಾಗದಿದ್ದರೂ ಬೇರೆ ರೀತಿಯಲ್ಲಿ ಫಲಕಾರಿಯಾಯಿತು. ಇದರಿಂದ ಇಂಗ್ಲಿಷ್ ವಿದ್ಯಾಪಕ್ಷಪಾತಿಗಳಿಗೂ ಸಂಸ್ಕೃತ ವಿದ್ಯಾಪಕ್ಷಪಾತಿಗಳಿಗೂ ವಿವಾದಗಳು ಮೊದಲಾದುವು. ಈ ವಿವಾದಗಳು ತೀವ್ರವಾಗಿ ಬೆಳೆದು ವಿದ್ಯಾಸಮಿತಿಯ ಕಾರ್ಯಕಲಾಪಗಳು ತಟಸ್ಥವಾಗುವ ಮಟ್ಟಿಗೆ ಬಂತು. ಇದರಿಂದ ಸರ್ಕಾರದವರು ಆ ಎರಡು ಪಂಗಡಗಳಲ್ಲಿ ಯಾವ ಪಕ್ಷದ ಅಭಿಪ್ರಾಯವನ್ನು ಅಂಗೀಕರಿಸಬೇಕೆಂದು ನಿರ್ಣಯಿಸುವುದು ಕಷ್ಟವಾಯಿತು. ಆ ವಿಷಯದ ತೀರ್ಮಾನವು ಆಗ ಸರ್ಕಾರದ ನ್ಯಾಯ ಶಾಖೆಯ ಸಚಿವರಾದ ಮೆಕಾಲೆಯವರಿಗೆ ಒಪ್ಪಿಸಲಾಯಿತು. ಅವರು ಮಾಡಿದ ವರದಿಯು ಇಂಡಿಯದ ವಿದ್ಯಾಭ್ಯಾಸದ ಚರಿತ್ರೆಯಲ್ಲಿ ಅತಿ ಮುಖ್ಯವಾದುದು. ಮೆಕಾಲೆಯವರ ವರದಿಯು ಭಾರತೀಯ ವಿದ್ಯಾಭ್ಯಾಸ ವ್ಯವಸ್ಥೆಗೆ ತಳಹದಿಯಾಗಿದೆ. ಅದರ ಪರಿಣಾಮವಾಗಿಯೇ ಈ ದೇಶದಲ್ಲೆಲ್ಲ ಇಂಗ್ಲಿಷ್ ವ್ಯಾಸಂಗಕ್ಕೆ ಪ್ರಥಮ ಸ್ಥಾನ ದೊರೆತಿರುವುದು. ಆ ವರದಿಯಲ್ಲಿ ಪಾಶ್ಚಾತ್ಯ ವಿಜ್ಞಾನ ಮತ್ತು ಸಾಹಿತ್ಯಗಳ ಅಭ್ಯಾಸಕ್ಕೆ ಕೊಟ್ಟಿರುವ ಕಾರಣಗಳು ನಿರ್ವಿವಾದವೂ ಒಪ್ಪ

ತಕ್ಕವೂ ಆಗಿದ್ದುವು; ಅಲ್ಲದೆ ಆ ವಿಚಾರದಲ್ಲಿ ರಾಮಮೋಹನರ ಅಭಿಪ್ರಾಯಗಳನ್ನು ಸಮರ್ಥಿಸುವುದಾಗಿಯೂ ವಿಶದಗೊಳಿಸುವುದಾಗಿಯೂ ಇವೆ. ವೈಸ್‌ರಾಯ್ ಬೆಂಟಿಂಕನು ಆ ವರದಿಯನ್ನು ಅಂಗೀಕರಿಸಿ ಅದರಂತೆ ೧೮೩೫ ರ ಮೇ ತಿಂಗಳಲ್ಲಿ ಇಂಗ್ಲಿಷ್ ವಿದ್ಯಾ ವ್ಯವಸ್ಥೆಯನ್ನು ಆಚರಣೆಗೆ ತರುವ ಆಜ್ಞೆಯನ್ನು ಪ್ರಕಟಿಸಿದನು. ಆದರೆ, ಇಲ್ಲಿಯೂ, ತಮ್ಮ ಪ್ರಯತ್ನಗಳು ಫಲಿಸಿದುವನ್ನು ನೋಡುವ ಪುಣ್ಯವು ರಾಮಮೋಹನರಿಗೆ ದೊರೆಯಲಿಲ್ಲ.

ಈ ದೇಶದಲ್ಲಿ ಇಂಗ್ಲಿಷ್ ವಿದ್ಯೆಗೆ ತಳಹದಿಯನ್ನಿಟ್ಟ ಪ್ರಶಸ್ತಿಯು ಮೆಕಾಲೆಯವರಿಗೇ ಸಂಪೂರ್ಣವಾಗಿ ಸೇರತಕ್ಕುದಲ್ಲ. ರಾಮಮೋಹನರೂ, ಅಲೆಕ್ಸಾಂಡರ್ ಡಫ್, ಡೇವಿಡ್ ಹೇರ್ ಮೊದಲಾದವರು ಆ ಮೊದಲೇ ವಿದ್ಯಾಭ್ಯಾಸಕ್ರಮದ ಸುಧಾರಣೆಗಾಗಿ ನಡೆಸಿದ್ದ ಚಳುವಳಿಯೇ ಮೆಕಾಲೆಯವರು ಸಿದ್ಧಗೊಳಿಸಿದ ವರದಿಗೆ ಆಧಾರ. ಆದುದರಿಂದ ಪಾಶ್ಚಾತ್ಯ ವಿಜ್ಞಾನ ಸಾಹಿತ್ಯಗಳ ಅಭ್ಯಾಸವು ಈ ದೇಶದಲ್ಲಿ ಆಚರಣೆಗೆ ಬರಲು ಮೆಕಾಲೆಯವರು ಎಷ್ಟು ಕಾರಣರೋ ರಾಮಮೋಹನರೂ ಅಷ್ಟೇ ಕಾರಣರು. ಅಂತೂ ರಾಮಮೋಹನರು ನಿರೂಪಿಸಿದ ಅಭಿಪ್ರಾಯಗಳು ಅಧಿಕಾರವರ್ಗದ ಸಮ್ಮತಿಯನ್ನು ಪಡೆದು ಆಚರಣೆಗೆ ಬರುವ ಮೊದಲು ಹನ್ನೆರಡು ವರ್ಷಗಳ ಚರ್ಚೆಯೂ, ಮೆಕಾಲೆಯವರ ವರದಿಯ ಬೆಂಬಲವೂ, ಪ್ರಜಾಹಿತೈಷಿಯಾದ ವೈಸರಾಯ್ ವಿಲಿಯಂ ಬೆಂಟಿಂಕನ ದೃಢನಿರ್ಣಯವೂ ಆವಶ್ಯಕವಾಗಿದ್ದುವು.

ರಾಮಮೋಹನರು ಇಂಗ್ಲಿಷ್ ವಿದ್ಯಾಪ್ರಚಾರದಲ್ಲಿ ತೋರಿಸಿದ ಆಸಕ್ತಿಯು ಅನುಚಿತವಾದುದೆಂದು ತೋರಬಹುದು. ಅವರು ದೇಶೀಯರ ಶಾಸ್ತ್ರಸಾಹಿತ್ಯಗಳನ್ನು ಅಲ್ಲಗಳೆದು ಇಂಗ್ಲಿಷ್ ವಿದ್ಯೆಯನ್ನು ಪುರಸ್ಕರಿಸುವಷ್ಟು ಮೋಹಾಂಧರಾಗಿರಲಿಲ್ಲ. ಇಂಗ್ಲಿಷ್ ವಿದ್ಯಾಪ್ರಚಾರದಲ್ಲಿ ವ್ಯಕ್ತಗೊಳಿಸಿದ ಉತ್ಸಾಹ ಶ್ರದ್ಧೆಗಳಷ್ಟೇ ತೀವ್ರವಾದ ಉತ್ಸಾಹ ಶ್ರದ್ಧೆಗಳನ್ನು ಸಂಸ್ಕೃತ ವಿದ್ಯಾಪ್ರಚಾರದಲ್ಲಿಯೂ ತೋರಿಸಿದರು. ಹಿಂದೂಗಳ ಶಾಸ್ತ್ರ ಮತ್ತು ಸಾಹಿತ್ಯಗಳ ಅಭ್ಯಾಸಕ್ಕಾಗಿ ವೇದ ವಿದ್ಯಾಲಯ ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಲು ಹವಣಿಸಿದರೆಂದು ತಿಳಿದುಬರುತ್ತದೆ.

ಸಂಸ್ಕೃತ ವಿದ್ಯೆಯನ್ನು ವಿರೋಧಿಸಿದವರಲ್ಲಿ ರಾಮಮೋಹನರೇ ಮೊದಲು ಅವರು ಸ್ವತಃ ಸಂಸ್ಕೃತದಲ್ಲಿ ಶ್ರೇಷ್ಠಪಂಡಿತರಾಗಿದ್ದರೂ ಲೋಕಜ್ಞಾನದೃಷ್ಟಿಯಿಂದ ವ್ಯಾಕರಣ, ಮೀಮಾಂಸ, ತತ್ತ್ವಶಾಸ್ತ್ರಗಳ ಅಸಾರತೆಯನ್ನು ಚೆನ್ನಾಗಿ ಮನಗಂಡಿದ್ದರು ಸಂಸ್ಕೃತ ವಿದ್ಯೆಯೊಂದರಿಂದಲೇ ಜ್ಞಾನವು ಪೂರ್ಣವಾಗುವುದೆಂದಾಗಲಿ ದೇಶವು ಏಳಿಗೆ ಹೊಂದುವುದೆಂದಾಗಲಿ ಅವರು ತಿಳಿದಿರಲಿಲ್ಲ ರಾಮಮೋಹನರ ಸಂಸ್ಕೃತ ವಿದ್ಯಾಖಂಡನೆಗಿಂತಲೂ ತೀವ್ರಖಂಡನೆಯು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಹುಟ್ಟಲಿಲ್ಲ ಬಹು ಪ್ರಾಚೀನವಾದ, ಬಹುಜನಪ್ರಿಯವಾದ, ಸಂಸ್ಕೃತವಿದ್ಯೆಯನ್ನು ರಾಮಮೋಹನರು ವಿರೋಧಿಸಬೇಕಾದಲ್ಲಿ ಸ್ವತಂತ್ರ ಅಭಿಪ್ರಾಯ ಸೂಚನೆಯಲ್ಲಿ ಅವರ ಧೈರ್ಯವು ವ್ಯಕ್ತವಾಗುವುದು. ಅವರ ಅಭಿಪ್ರಾಯವು ಬರಿಯ ಊಹೆಯಿಂದಮಾತ್ರ ಹುಟ್ಟಿದ ಸ್ವಾನುಭವದಿಂದ ಹುಟ್ಟಿತ್ತು ಅವರು ಸಂಸ್ಕೃತ ವಿದ್ಯೆಯಲ್ಲಿ ಪಾಂಡಿತ್ಯ ಸಂಪಾದಿಸಿದ್ದಂತೆಯೇ ಇಂಗ್ಲಿಷ್ ಭಾಷೆಯಲ್ಲಿಯೂ ಸಂಪಾದಿಸಿದ್ದರು ಅವರ ವಿದ್ಯಾಭ್ಯಾಸದ ಧ್ಯೇಯವು ಹಿಂದೂ ಸಂಪ್ರದಾಯದೊಂದಿಗೆ ಪಾಶ್ಚಾತ್ಯ ಜ್ಞಾನ ಭಂಡಾರದ ಸಂಯೋಜನೆಗೊಳಿಸುವುದಾಗಿತ್ತು ಹಿಂದೂ ಸಂಸ್ಕೃತಿಯ ಜೊತೆಗೆ ಪಾಶ್ಚಾತ್ಯ ವಿಜ್ಞಾನ, ಪೂರ್ವಾಚಾರ ಸಂಪ್ರದಾಯದೊಂದಿಗೆ ಆಧುನಿಕ ಕಾಲದ ವಿಚಾರಪರತೆ, ಶಾಸ್ತ್ರದೊಂದಿಗೆ ಪ್ರಯೋಗ—ಇವುಗಳಿಂದಲೇ ಸಂಪೂರ್ಣ ಜ್ಞಾನವುಂಟಾಗುವುದೆಂಬುದು ಅವರ ದೃಢವಾದ ಅಭಿಪ್ರಾಯವಾಗಿತ್ತು ಸುಸಂಸ್ಕೃತಿಯನ್ನು ಬಯಸುವ ಭಾರತೀಯರಿಗೆಲ್ಲ ಈ ಅಭಿಪ್ರಾಯವು ಮಾನ್ಯವೇ ಆಗಿದೆ

ರಾಮಮೋಹನರು ಬಾಲಕರ ವಿದ್ಯೆಯಲ್ಲಿಯೂ ಇಂಗ್ಲಿಷ್ ವಿದ್ಯೆಯಲ್ಲಿಯೂ ಶ್ರಮ ಆಸಕ್ತಿಗಳನ್ನು ತೋರ್ಪಡಿಸಿದ ಹಾಗೆಯೇ ಬಾಲಕಿಯರ ವಿದ್ಯೆಯಲ್ಲಿಯೂ ಆಸಕ್ತಿ ವಹಿಸಿ ಶ್ರಮಿಸಿದರು ಬಾಲಕಿಯರ ವಿದ್ಯಾಭ್ಯಾಸವು ಇಂಡಿಯಾ ದೇಶದಲ್ಲಿ ಹಿಂದಿನ ಕಾಲದಿಂದಲೂ ಬಂದಿರುವುದೇ ಆಗಿದೆ ರಾಮಾಯಣ ಭಾರತಗಳ ಕಾಲಗಳಲ್ಲಿ ಸ್ತ್ರೀಯರು ವಿದ್ಯೆ ಕಲಿತವರಾಗಿದ್ದರು, ಅವರು ಮನೆಯಲ್ಲಿಯೇ ಉಳಿವವರಾಗಿರಲಿಲ್ಲ. ಪರದಾ ಪದ್ಧತಿಯು ಆಗ ರೂಢಿಯಲ್ಲಿರಲಿಲ್ಲ. ಸ್ತ್ರೀಯರು

ಮುಖ್ಯ ಸಂದರ್ಭಗಳಲ್ಲಿ ಸಭೆಗಳಲ್ಲಿ ಸೇರುತ್ತಿದ್ದರು. ಅಲ್ಲದೆ ಆ ಕಾಲದಲ್ಲಿ ಅವರು ವಿದ್ಯಾವಂತರಾಗಬಾರದೆಂಬ ನಿರ್ಬಂಧವಿರಲಿಲ್ಲ. ಆ ಕಾಲದ ಕಾವ್ಯಗಳಲ್ಲಿ ಆಗಿನ ಸ್ತ್ರೀಯರು ಪಂಡಿತರ ಜೊತೆಯಲ್ಲಿ ಚರ್ಚೆಗಳನ್ನು ನಡೆಸಿರುವುದಕ್ಕೆ ನಿದರ್ಶನಗಳು ದೊರೆಯುವುವು. ಗಾರ್ಗಿ, ಮೈತ್ರೇಯಿ, ಲೀಲಾವತಿ ಇವರು ಆ ಕಾಲದ ಪ್ರಸಿದ್ಧ ಸ್ತ್ರೀಯರು. ರಾಮಮೋಹನರ ಚರ್ಚೆಯು ಜನರ ಗಮನವನ್ನು ಆಕರ್ಷಿಸಿತು. ಆದರೆ ಕೂಡಲೆ ಯಾವ ಪ್ರಯೋಜನವೂ ಆಗದಿದ್ದರೂ ಕಾಲಕ್ರಮದಲ್ಲಿ ಬಂದ ಅಧಿಕಾರಿಗಳಿಂದ ೧೮೪೯ ರಲ್ಲಿ ಸ್ತ್ರೀ ವಿದ್ಯಾಶಾಲೆಯೊಂದು ಕಲ್ಕತ್ತೆಯಲ್ಲಿ ಏರ್ಪಟ್ಟಿತು. ಸ್ತ್ರೀ ವಿದ್ಯಾಭ್ಯಾಸದ ವಿಷಯದಲ್ಲಿಯೂ ರಾಮ ಮೋಹನರ ಪ್ರಯತ್ನಗಳು ಚಿರಸ್ಮರಣೀಯವಾಗಿವೆ.

---

# ಪ್ರಕರಣ ೭

## ಸಹಗಮನ ನಿರೋಧ—ಸ್ತ್ರೀಯರ ಹಕ್ಕುಬಾಧ್ಯತೆಗಳು

ರಾಮಮೋಹನರು ಮಾಡಿದ ಬಹುಮುಖವಾದ ಕಾರ್ಯಗಳಲ್ಲಿ ಮುಖ್ಯವಾದುದೂ ಪ್ರಜಾಹಿತವಾದುದೂ ಸಹಗಮನ ನಿರೋಧ ಈ ವಿಚಾರದಲ್ಲಿ ಅವರು ಮಾಡಿದ ಕೆಲವು ಪ್ರಯತ್ನಗಳನ್ನು ಹಿಂದೆಯೇ ನೋಡಿದ ಅವರಿಗೆ ಹಿಂದೂ ಶಾಸ್ತ್ರಗಳಲ್ಲಿ ಅದ್ವಿತೀಯವಾದ ಪಾಂಡಿತ್ಯ ಇದ್ದುದರಿಂದ ೧೮೧೮ ಮತ್ತು ೧೮೨೦ ರಲ್ಲಿ ಅವರು ಬರೆದ ಲೇಖನಗಳಲ್ಲಿ ಸಹಗಮನ ಪದ್ಧತಿಯು ಹಿಂದೂ ಶಾಸ್ತ್ರ ದೃಷ್ಟಿಯಿಂದ ಅನ್ಯಾಯವೂ, ಕ್ರೂರವೂ ಅಪಮಂಬವನ್ನು ವ್ಯಕ್ತಪಡಿಸಿದರು ಹಿಂದೂ ಸಮಾಜವು ಇಂತಹ ಕ್ರೂರಕೃತ್ಯವನ್ನು ಸಹಿಸುವುದರಿಂದ ಸಮಾಜದ ನ್ಯಾಯಬುದ್ಧಿಯು ಎಷ್ಟರಮಟ್ಟಿಗೆ ನಾಶವಾಗಿತ್ತೆಂಬುದು ವಿದಿತವಾಗುವುದು ಸ್ಮೃತಿವಾಕ್ಯಕ್ಕೆ ಕಳಂಕವುಂಟಾಗುತಿತ್ತು ಅದರ ಪವಿತ್ರತೆಯು ನಾಶವಾಗಿತ್ತು ಹಿಂದೂ ಸಮಾಜವು ಸಾಂಪ್ರದಾಯಿಕವಾಗಿ ಬಂದಿದ್ದ ದುಷ್ಟವಾದ ಆಚಾರಗಳನ್ನು ದೂರಮಾಡಿ ಕಾಲಕ್ಕೆ ತಕ್ಕಂತೆ ನ್ಯಾಯಬದ್ಧವಾದ ಬದಲಾವಣೆಗಳನ್ನು ಮಾಡಿಕೊಳ್ಳುವುದರಲ್ಲಿ ಆಸಕ್ತವಾಗಿರಲಿಲ್ಲ ಶಾಸ್ತ್ರ ನಿರ್ಣಯವು ಯೋಗ್ಯವಾಗಿಯೇ ಇತ್ತು ಶಾಸ್ತ್ರಗಳು ವಿಧಿಸಿದ ಹಿಂದೂ ಪದ್ಧತಿಗಳನ್ನು ರಾಮಮೋಹನರು ಕೂಲಂಕಷವಾಗಿ ವಿಮರ್ಶೆಮಾಡಿ ಅವುಗಳಿಗೆ ಸಮಂಜಸವಾದ ಹೊಸ ಅರ್ಥಗಳನ್ನು ಕಲ್ಪಿಸಿದರು

ಸಹಗಮನ ಪದ್ಧತಿಯು ಬಹುಕಾಲದಿಂದ ರೂಢಿಯಲ್ಲಿತ್ತೆಂದು ಹೇಳಬೇಕಾಗಿಲ್ಲ ಅದನ್ನು ತಡೆಯಲು ಹಿಂದೆ ಅನೇಕ ವೇಳೆಗಳಲ್ಲಿ ದೇಶೀಯ ರಾಜರುಗಳಿಂದ ಪ್ರಯತ್ನಗಳು ನಡೆದಿದ್ದುವು ಆದರೂ ಆ ದುಷ್ಟ ಪದ್ಧತಿಯು ನಿವಾರಣೆಯಾಗದೆ ಹಾಗೆಯೇ ಉಳಿದಿತ್ತು ಇದಕ್ಕೆ ಮುಖ್ಯಕಾರಣವೇನೆಂದರೆ ಹಿಂದೂ ಶಾಸ್ತ್ರ ದೃಷ್ಟಿಯಿಂದ ವಿಮರ್ಶೆಮಾಡಿ

ಅದನ್ನು ಖಂಡಿಸುವವರು ಯಾರೂ ಇರಲಿಲ್ಲ. ಶಾಸ್ತ್ರಗಳ ವಾಸ್ತವವಾದ ಅರ್ಥವನ್ನು ಗ್ರಹಿಸಬಲ್ಲ ಪಂಡಿತರು ಎಲ್ಲ ಕಾಲಗಳಲ್ಲಿಯೂ ಇದ್ದಿರಬಹುದಾದರೂ, ಅವರ ಅಭಿಪ್ರಾಯಗಳು ನಿಯಮದ ಎಣಿಕೆಯಿಲ್ಲದೆ ಮೂಢ ಸಂಪ್ರದಾಯವನ್ನು ಅನುಸರಿಸುವ ಬಹುಸಂಖ್ಯೆಯ ಸಾಮಾನ್ಯ ಜನರ ಅಭಿಪ್ರಾಯಗಳಲ್ಲಿ ಮುಳುಗಿಹೋಗಿತ್ತು. ಶಾಸ್ತ್ರವನ್ನು ಬಲ್ಲ ಪಂಡಿತರ ಅಭಿಪ್ರಾಯಗಳು ಯಾರ ಗಮನವನ್ನೂ ಆಕರ್ಷಿಸಲಿಲ್ಲ. ಬ್ರಿಟಿಷ್ ಅಧಿಕಾರಿಗಳೂ ದೇಶದ ನಾನಾಭಾಗಗಳಿಂದ, ಕೇಂದ್ರ ಸರ್ಕಾರಕ್ಕೆ ಈ ವಿಚಾರದಲ್ಲಿ ಖಂಡಿತವಾದ ಆಜ್ಞೆಯನ್ನು ಹೊರಡಿಸಬೇಕೆಂದು ಪದೇ ಪದೇ ಬರೆಯುತ್ತಿದ್ದರು. ಆದರೆ ಬ್ರಿಟಿಷ್ ಸರ್ಕಾರವು ಹಿಂದೂಗಳ ಸಂಸ್ಕೃತಿಗೆ, ಅವರ ಮತಾಚಾರಕ್ಕೆ, ಸಂಬಂಧಿಸಿದ ಈ ವಿಚಾರದಲ್ಲಿ ಸ್ವತಂತ್ರ ವಿಧಿ ಮಾಡುವುದು ಯುಕ್ತವೆಂದು ಭಾವಿಸಲಿಲ್ಲ. ದೇಶೀಯರ ಸಂಪ್ರದಾಯ ಆಚಾರಗಳನ್ನು ತಿಳಿಯದೆ ಇದ್ದ ಬ್ರಿಟಿಷ್ ಸರ್ಕಾರಕ್ಕೆ ಸಹಗಮನ ಪದ್ಧತಿಯನ್ನು ಅನುಮೋದಿಸುವುದಾಗಲಿ ವಿರೋಧಿಸುವುದಾಗಲಿ ತನ್ನ ಅಧಿಕಾರದ ಎಲ್ಲೆಗೆ ಮೀರಿದ ವಿಚಾರವಾಗಿತ್ತು. ಬ್ರಿಟಿಷ್ ಸರ್ಕಾರವು, ಈಗಿಂತಲೂ ಹೆಚ್ಚಾಗಿ ಆಗ, ದೇಶೀಯರ ಮತಾಚಾರಗಳಲ್ಲಿ ಪ್ರವೇಶಿಸಿ ಅವರಿಗೆ ಅಸಮಾಧಾನಕರವಾದ ಯಾವ ನಿಬಂಧನೆಗಳನ್ನು ಮಾಡುವುದೂ ಸರಿಯಲ್ಲವೆಂದು ಎಣಿಸಿತ್ತು. ಆದುದರಿಂದ ಬ್ರಿಟಿಷ್ ಸರ್ಕಾರವು ಈ ವಿಚಾರದಲ್ಲಿ ದೀರ್ಘವಾಗಿ ಆಲೋಚಿಸಬೇಕಾಗಿತ್ತು. ವೈಸರಾಯ್ ಲಾರ್ಡ್ ಹೇಸ್ಟಿಂಗ್ಸನು ಕೆಲವು ಸಂದರ್ಭಗಳಲ್ಲಿ ಸಹಗಮನವನ್ನು ವಿರೋಧಿಸದೆಯೂ ಕೆಲವು ಸಂದರ್ಭಗಳಲ್ಲಿ ವಿರೋಧಿಸುತ್ತಲೂ ಇದ್ದನು. ಅವನು ಲಂಡನ್ನಿನಲ್ಲಿರುವ ಮಂತ್ರಿವರ್ಗಕ್ಕೆ, ೧೮೨೦ ನೆಯ ಆಗಸ್ಟು ೧೫ ರಲ್ಲಿ ಕಳುಹಿಸಿದ ಪತ್ರದಲ್ಲಿ, ಈ ವಿಚಾರದಲ್ಲಿ ಇಂಡಿಯಾ ಸರ್ಕಾರವು ಯಾವ ನಿರ್ಧಾರಕ್ಕೂ ಬರದಿರುವುದಕ್ಕೆ ಕಾರಣಗಳನ್ನು ವಿಶದಪಡಿಸಿದನು. ಅನೇಕ ಶತಮಾನಗಳಿಂದ ಆಚರಣೆಯಲ್ಲಿರುವುದರಿಂದಲೇ ಒಂದು ವಿಧಿಯಾಗಿ ಪರಿಣಮಿಸಿದ್ದ ಈ ಪದ್ಧತಿಯನ್ನು ವಿರೋಧಿಸತಕ್ಕವರು ದೇಶೀಯರಲ್ಲಿ ಯಾರೂ ಇರಲಿಲ್ಲ. ಕಾಲಾನುಗುಣವಾಗಿ ವ್ಯತ್ಯಾಸವಾಗಬೇಕಾದ ಸಮಾಜ ನೀತಿಯ ದೃಷ್ಟಿಯಿಂದ ಹಿಂದೂ ಶಾಸ್ತ್ರಗಳನ್ನು

ಯಾರೂ ವಿಮರ್ಶೆಮಾಡಿರಲಿಲ್ಲ ಹೀಗೆ ಇಂಡಿಯಾ ಸರ್ಕಾರವು ಆ ಪದ್ಧತಿಯು ಕ್ರೂರವೂ ನಿಲ್ಲಿಸತಕ್ಕದ್ದೂ ಎಂದು ಮನಗಂಡಿದ್ದರೂ ತಕ್ಕ ಸಮಯವನ್ನು ನಿರೀಕ್ಷಿಸುತ್ತಿತ್ತು ಬಹುಜನ ಸಮ್ಮತವಾಗಿದ್ದ ಪದ್ಧತಿಯನ್ನು ಯಾವ ಹಿಂದೂ ಕಾಯಿದೆಯನ್ನು ಅನುಸರಿಸಿ ನಿಲ್ಲಿಸಬೇಕೆಂಬುದು ಅದರ ಸಮಸ್ಯೆಯಾಗಿತ್ತು ಇಂತಹ ಸಮಯದಲ್ಲಿ ಹಿಂದೂ ಶಾಸ್ತ್ರಗಳ ಅಭಿಪ್ರಾಯವನ್ನು ಇಂಗ್ಲಿಷರಿಗೆ ತಿಳಿಸಿಕೊಡುವುದರಲ್ಲಿ ರಾಮಮೋಹನರು ನೆರವಾದರು.

ರಾಮಮೋಹನರ ಕೆಲಸವು ಕಷ್ಟತರವಾಗಿತ್ತು ಒಂದುಕಡೆ, ಸಹಗಮನ ಪದ್ಧತಿಯು ಹಿಂದೂಶಾಸ್ತ್ರ ವಿಧಿಗೆ ವಿರೋಧವಾದುದೆಂದೂ, ಅದರ ನಿರೋಧವು ಪ್ರಜಾಹಿತವಾದುದೆಂದೂ, ಸರ್ಕಾರದವರಿಗೆ ತಿಳಿಸಬೇಕಾಗಿತ್ತು ಮತ್ತೊಂದುಕಡೆ, ಆರ್ಷೇಯವಾದ ಶಾಸ್ತ್ರವಾಕ್ಯಗಳಿಗೆ ಅದು ವಿರೋಧವಾದುದೆಂದು ಜನಸಾಮಾನ್ಯಕ್ಕೆ ತಿಳಿಸಿ, ಅವರ ಅಭಿಪ್ರಾಯವನ್ನು ತಿದ್ದಿ ಸಂಪಡಿಸಬೇಕಾಗಿತ್ತು ಈ ರೀತಿ ಅವರ ಕೆಲಸವು ದ್ವಿಮುಖವಾಗಿತ್ತು ಅವರಿಗೆ ಮುಂಚೆ ಅನೇಕರು ಈ ಸಮಸ್ಯೆಗೆ ಗಮನಕೊಟ್ಟಿದ್ದರೂ ಅದು ಒಟ್ಟು ರಾಷ್ಟ್ರಕ್ಕೇ ಸೇರಿದ್ದೆಂದು ಭಾವಿಸಿ ಈ ವಿಚಾರದಲ್ಲಿ ಆಸಕ್ತಿಯನ್ನು ಕೇಂದ್ರೀಕರಿಸಿ, ಅದಕ್ಕೆ ಪ್ರಾಮುಖ್ಯತೆಯನ್ನು ತಂದವರು ರಾಮಮೋಹನರು ಅವರ ಪ್ರಯತ್ನದಿಂದಲೇ ಅದು ಸಮಸ್ತ ಭಾರತದ ಪ್ರಶ್ನೆಯಾಗಿ ಪರಿಣಮಿಸಿದ್ದು ಇಂತಹ ಮಹತ್ತರವಾದ ಕೆಲಸವನ್ನು ರಾಮಮೋಹನರು ಧೈರ್ಯದಿಂದ ಕೈಗೊಂಡರು

ಈ ವಾದವನ್ನು ಹಿಂದೂ ಶಾಸ್ತ್ರಗಳ ದೃಷ್ಟಿಯಿಂದ ವಿಮರ್ಶೆ ಮಾಡಬೇಕಾಗಿತ್ತು ರಾಮಮೋಹನರು ಈ ವಾದವನ್ನು ಆಧಾರ ರಹಿತವಾಗಿ ಖಂಡಿಸಲಿಲ್ಲ ಖಂಡಿಸುವ ಮೊದಲು ಹಿಂದೂ ಶಾಸ್ತ್ರಗಳನ್ನು ಆಮೂಲಾಗ್ರವಾಗಿ ವ್ಯಾಸಂಗಮಾಡಿ ಅವುಗಳ ಅರ್ಥವನ್ನು ಗ್ರಹಿಸಿ ಅವುಗಳ ಆಧಾರದ ಮೇಲೆ ರೂಢಿಯಲ್ಲಿನ ಆಚರಣೆಯು ತಪ್ಪಾದುದೆಂದು ತೋರಿಸಿ ಖಂಡಿಸಿದರು ಸಹಗಮನ ಪದ್ಧತಿಗೆ ಆಧಾರವೆಂದು ಹೇಳಲ್ಪಟ್ಟ ಶಾಸ್ತ್ರವಾಕ್ಯಗಳನ್ನು ಖಂಡಿಸಲು ಸಾಮಾನ್ಯವಾಗಿ ಯಾರಾದರೂ ಭಯಪಡುತ್ತಿದ್ದರು.

ಆದರೆ ರಾಮಮೋಹನರು ಈ ಕಾರ್ಯಕ್ಕೆ ನಿರ್ಭಯವಾಗಿ ತೊಡಗಿದರು. ಅವರಿಗೆ ತಮ್ಮ ವಿರೋಧಿಗಳ ಅಭಿಪ್ರಾಯದಲ್ಲಿದ್ದ ತಪ್ಪುಗಳೂ, ನ್ಯೂನತೆಗಳೂ, ಅನನ್ವಯಗಳೂ ಸ್ಪಷ್ಟವಾಗಿ ತಿಳಿದಿದ್ದುವು. ಆದುದರಿಂದ ಅವರ ಮೊದಲ ಕೆಲಸವು ಪ್ರತಿಪಕ್ಷದವರು ಉದಾಹರಿಸಿದ ಶಾಸ್ತ್ರವಾಕ್ಯಗಳಿಗೆ ಪ್ರತಿಯಾಗಿ, ಅದರಷ್ಟೇ ಮಾನ್ಯವಾದ ಅಥವಾ ಅದಕ್ಕಿಂತಲೂ ಹೆಚ್ಚು ಮಾನ್ಯವಾದ, ಹಿಂದೂ ಶಾಸ್ತ್ರಗಳ ಆಧಾರದಿಂದ ಸಹಗಮನವು ಕೂಡದೆಂಬುದನ್ನು ಸ್ಥಾಪಿಸುವುದಾಗಿತ್ತು. ಶಾಸ್ತ್ರವಾಕ್ಯಗಳು ಭಿನ್ನವಾಗಿರುವುವೆಂದೂ ಮತಾಚಾರಗಳ ಈ ಪದ್ಧತಿಯು ಕೇವಲ ಕೀಳುದರ್ಜೆಗೆಸೇರಿದ್ದೆಂದೂ ತಿಳಿಸಿದರು. ಸಹಗಮನ ಪದ್ಧತಿಯು ಶಾಸ್ತ್ರಗಳಲ್ಲಿ ನಿರ್ಬಂಧವಾಗಿ ವಿಧಾಯಕವಾಗಿಲ್ಲವೆಂದೂ, ಅದನ್ನು ಆಚರಿಸದೆ ಇರುವುದರಿಂದ ಮುಂದಿನ ಜನ್ಮದಲ್ಲಿ ಘೋರ ಶಿಕ್ಷೆಯಾಗದೆಂದೂ ಶಾಸ್ತ್ರಾಧಾರದಿಂದಲೇ ತೋರಿಸಿದರು. ಸಹಗಮನಕ್ಕೆ ಪ್ರತಿಯಾಗಿ ಅದಕ್ಕಿಂತಲೂ ಉತ್ತಮವಾದ ಮತ್ತು ಪುಣ್ಯಕರವಾದ ಸ್ವಾರ್ಥತ್ಯಾಗವೂ ಆತ್ಮಸಂಯಮವೂ ಶಾಸ್ತ್ರಗಳಲ್ಲಿಯೇ ವಿಧಿಸಿರುವುದೆಂದೂ ಹೇಳಿದರು. ಸಹಗಮನವನ್ನು ಬಿಟ್ಟು ಅದಕ್ಕೆ ಪ್ರತಿಯಾದ ಉತ್ತಮವಮಾರ್ಗವನ್ನು ಅನುಸರಿಸುವುದು ಶಾಸ್ತ್ರವಿರುದ್ಧವಾಗಿರಲಿಲ್ಲ. ಅಲ್ಲದೆ ಆ ಮಾರ್ಗವು ಶಾಸ್ತ್ರಸಮ್ಮತವಾಗಿಯೂ ಇದ್ದು ನ್ಯಾಯಬದ್ಧವಾಗಿಯೂ ಇತ್ತು. ಜೀವನದ ಪರಮಾರ್ಥವು ಸತ್ಯವೂ ಶುದ್ಧವೂ ಆದ ನಡತೆಯನ್ನು ನಿರಂತರವೂ ಅನುಸರಿಸುವುದರಿಂದ ಲಭ್ಯವಾಗುವುದೇ ವಿನಾ ಆತ್ಮಹತ್ಯೆಯಿಂದಾಗಲಿ ಮರಣದಿಂದಾಗಲಿ ಲಭಿಸದು. ಸಹಗಮನವು ಆತ್ಮಹತ್ಯಕ್ಕೂ ದುರ್ಮರಣಕ್ಕೂ ಸಮಾನವಾದುದು. ಸಹಗಮನ ಆಚರಣೆಯಿಂದ ಜೀವನವನ್ನು ಅನವಶ್ಯವಾಗಿ ನಾಶಪಡಿಸಿದಂತಾಯಿತೇ ಹೊರತು ಅದನ್ನು ಭಗವಂತನ ಸಾನ್ನಿಧ್ಯದಲ್ಲಿ ಅರ್ಪಿಸಿದಂತಾಗಲಿಲ್ಲ. "ಸತಿ"ಯ ಹೆಸರಿನ ಆತ್ಮಹತ್ಯಕ್ಕೆ ಯಾವ ಶಾಸ್ತ್ರವೂ ಸಮ್ಮತಿಸಲಾರದು.

ವೇದ ಧರ್ಮಶಾಸ್ತ್ರಗಳ ವಿಧಿಗಳು ಭಿನ್ನಭಿನ್ನವಾಗಿರುವುವು. ಇವೆಲ್ಲವುಗಳ ವಿಮರ್ಶೆಯಿಂದ ಸಹಗಮನವು ಐಚ್ಛಿಕವಾಗಿತ್ತೆಂದು ತಿಳಿಯಲು ರಾಮಮೋಹನರಿಗೆ ಹೆಚ್ಚುಕಾಲ ಬೇಕಾಗಲಿಲ್ಲ. ಒಟ್ಟಿನಲ್ಲಿ, ಸಹಗಮನ

ವನ್ನು ವಿಧಿಸುತ್ತಿದ್ದವರೂ ಅದನ್ನು ಅನುಮೋದಿಸುತ್ತಿದ್ದವರೂ ಮುಂದಿನ ಜನ್ಮದಲ್ಲಿ ಸುಖವನ್ನು ದೃಷ್ಟಿಯಲ್ಲಿಟ್ಟುಕೊಂಡು ಹಾಗೆ ಮಾಡುತ್ತಿದ್ದರು ಸಹಗಮನ ನಡೆಸಬೇಕಾದ ಸ್ತ್ರೀಯರೂ ಸಹ ಚಿತೆಯನ್ನು ಏರುವ ಮೊದಲು ಮುಂದಿನ ಜನ್ಮದಲ್ಲಿ ತಮಗೆ ಸುಖವು ದೊರೆಯಲೆಂದೇ ತಾವು ಹಾಗೆ ಮಾಡುತ್ತಿರುವುದಾಗಿ ಸಾರುತ್ತಿದ್ದರು ವೇದಗಳ ಕಾಲದಿಂದಲೂ ಸದಾಚಾರಸಂಪನ್ನ ಜೀವನವು ಗೌರವಾರ್ಹವೆಂದು ಎಣಿಸಲ್ಪಟ್ಟಿತ್ತೇ ವಿನಾ ಜೀವನ ತ್ಯಾಗವು ಗೌರವಾರ್ಹವೆಂದು ಎಣಿಸಲ್ಪಡಲಿಲ್ಲ, ಉತ್ತಮ ಜೀವನ ವನ್ನು ನಡೆಸಲು ಅವಶ್ಯವಾದ ಸ್ಥೈರ್ಯವು ಆತ್ಮಹತೆಯನ್ನು ಪ್ರೇರಿಸುವ ಹೇಡಿತನಕ್ಕಿಂತಲೂ ಶ್ರೇಷ್ಠವಾದುದು ಭಗವದ್ಭಕ್ತಿಯಿಂದಲೂ ಶುದ್ಧಾಚರಣೆಯಿಂದಲೂ ಕೂಡಿದ ಧರ್ಮಜೀವನವೇ ಎಲ್ಲ ಮಾನವರಿಗೂ,' ವಿಧವೆಯರಿಗೂ ಸೇರಿ, ಬದುಕಿನ ಪರಮೋದ್ದೇಶವಾಗಿರಬೇಕು ಯಾವ ವಿಧವೆಯು ನಿರಂತರವಾದ ಮುಕ್ತಿಯನ್ನು ಬಯಸದೆ ಅಲ್ಪವಾದ ಮುಂದಿನ ಜನ್ಮದ ಸುಖವನ್ನು ಬಯಸುವಳೋ ಅಂಥವಳು ಸಹಗಮನವನ್ನಾಚರಿಸ ಬಹುದು ಈ ದೃಷ್ಟಿಯಿಂದ ಸಹಗಮನವೂ 'ದೇಹತ್ಯಾಗವೂ ನಿಂದ್ಯ ವಾದುವು

ವೇದದ ಅಭಿಪ್ರಾಯದಂತೆ ಕರ್ಮಗಳು ಮತ್ತು ಆಚಾರಗಳ ಎಷ್ಟು ಉತ್ತಮವಾಗಿದ್ದರೂ, ಅವುಗಳಿಂದ ಸಮಾಜಕ್ಕೆ ಎಷ್ಟು ಪ್ರಯೋಜನ ವಾಗಿದ್ದರೂ, ಶುದ್ಧಜೀವನಕ್ಕಿಂತಲೂ ಮೇಲಾಗಲಾರವೆಂದು ರಾಮಮೋಹನರು ವಾದಿಸಿದರು ಕರ್ಮವು ಸಂಸ್ಕೃತಿಯ ಕೆಳಮಟ್ಟವನ್ನು ಸೂಚಿಸತಕ್ಕದ್ದು ಏಕೆಂದರೆ ಅವುಗಳ ಉದ್ದೇಶವು ಮುಂದಿನ ಜನ್ಮದಲ್ಲಿ ಸುಖಸಂತೋಷಗಳನ್ನು ಬಯಸತಕ್ಕದ್ದಾಗಿದೆ ಯಾವ ಅಪೇಕ್ಷೆಯೂ ಇಲ್ಲದಿರುವುದೇ ಸ್ವಾರ್ಥತ್ಯಾಗದ ದೊಡ್ಡ ಲಕ್ಷಣ ಇದೇ ಶುದ್ಧ ಜೀವದೂ ಜೀವಾಳ, ಇದೇ ಪರಿಣಾಮದಲಿ ವ್ಯಕ್ತಿಯನ್ನು ಭಗವಂತನಲ್ಲಿ ಒಂದಾಗಿಸ ತಕ್ಕದ್ದು ಎಲ್ಲ ಹಿಂದೂಗಳಿಗೂ ಬಹು ಪೂಜ್ಯವಾಗಿರುವ ಭಗವದ್ಗೀತೆಯು ಕಾಮ್ಯಕರ್ಮವನ್ನು ಪದೇಪದೇ ದೂಷಿಸುತ್ತದೆ

ಸಹಗಮನದ ಆಚರಣೆಯನ್ನು ಅನುಮೋದಿಸುವವರು ಪತಿ ವಿಯೋಗವಾದಮೇಲೆ ವಿಧವೆಯು ಸಹಗಮನಮಾಡಲು ನಿಶ್ಚಯಮಾಡಿ

ಯಾರ ಪ್ರೇರಣೆ ನಿರ್ಬಂಧಗಳೂ ಇಲ್ಲದೆ ತಾನೇ ಚಿತೆಯನ್ನು ಏರಿ ಪ್ರಾಣ ತ್ಯಾಗಮಾಡಬೇಕೆಂದು ವಿಧಿಸುವರು. ಆದರೆ ಸಹಗಮನ ಮಾಡಲು ನಿಶ್ಚಯಮಾಡಿದಾಕೆಗೆ ಆ ಸಮಯದಲ್ಲಿ ಸಾಕಾದಷ್ಟು ಮನಸ್ಥೈರ್ಯವಿಲ್ಲ ದಿದ್ದಲ್ಲಿ ಆಕೆಯು ತನ್ನ ಬಂಧುಗಳಲ್ಲಿಗೆ ಹಿಂತಿರುಗಿ ಬರಬಹುದೆಂದೂ ತನ್ನ ಪ್ರತಿಜ್ಞೆಯಂತೆ ನಡೆಯದಿದ್ದುದಕ್ಕೆ ಪ್ರಾಯಶ್ಚಿತ್ತವನ್ನು ನಡೆಸಬಹುದೆಂದೂ ವಿಧಿಸಿರುವರು. ಆದುದರಿಂದ ಸಹಗಮನ ನಡೆಸಲು ಆವಶ್ಯವಾದ ಮೊದ ಲನೆಯ ನಿಯಮವು ಸತಿಯ ಸ್ವಂತವಾದ ಮತ್ತು ಪರರ ಪ್ರೇರಣೆ ಮತ್ತು ನಿರ್ಬಂಧಗಳಿಗೆ ಒಳಗಾಗದ ಇಚ್ಛೆ. ಹೀಗೆ ಸತಿಯ ಸ್ವಾಭಿಮತದಿಂದ ನಡೆಯದಿರುವ ಸಹಗಮನವು ಪ್ರಾಣಹತ್ಯೆಗೆ ಸಮವಾಗುವುದು; ಮತ್ತು ಆ ಕಾರ್ಯದಲ್ಲಿ ಸಹಾಯಮಾಡಿದವರಿಗೆ ಸ್ತ್ರೀಹತ್ಯಾದೋಷವೂ ಬರುವು ದಾಗಿದೆ.

ಹೀಗೆ ರಾಮಮೋಹನರು ವೇದಗಳ, ಸ್ಮೃತಿಗಳ, ಧರ್ಮಜ್ಞರ ಪೂಜ್ಯ ಗ್ರಂಥಗಳ ಆಧಾರದಮೇಲೆ ಸಹಗಮನವು ಸರ್ವಥಾ ಉಪಾದೇಯ ವಾದುದಲ್ಲವೆಂದು ಖಂಡಿಸಲು ಪ್ರತಿಪಕ್ಷದವರು ನಿರುತ್ತರರಾಗಿ ಅವರ ವಾದವನ್ನು ಒಪ್ಪಬೇಕಾಯಿತು. ಕೊನೆಗೆ ಅವರು ಇದು ಪದ್ಧತಿಯೆಂದೂ, ಆದುದರಿಂದ ಆಚರಿಸಬೇಕಾದುದೆಂದೂ, ವಾದಿಸಿದರು. ಹಾಗಾದಲ್ಲಿ ದೂರದೇಶಗಳಲ್ಲಿ ವಾಸಮಾಡುತ್ತಿರುವ ಪತಿಗಳ ವಿಷಯದಲ್ಲಿ ಇದನ್ನು ತಪ್ಪಿಸುವುದಾಗಲಿ ಸತಿಯ ದುರ್ಯೋಚನೆಗಳನ್ನೂ ದುರಾಚರಣೆಗಳನ್ನೂ ತಪ್ಪಿಸುವುದಾಗಲಿ ಹೇಗೆ ಸಾಧ್ಯವೆಂದು ರಾಮಮೋಹನರು ವಾದಿಸಿದರು. ಇದಕ್ಕೆಲ್ಲ ತಕ್ಕ ಮಾರ್ಗವು ಸ್ತ್ರೀಯರಿಗೆ ಉಚಿತವಾದ ವಿದ್ಯೆಯನ್ನು ಕಲಿಸುವುದೊಂದೇ ವಿನಾ ಪಾಪಕರವಾದ ಪ್ರಾಣಹತ್ಯೆಯಲ್ಲವೆಂದು ತಿಳಿಸಿದರು.

ರಾಮಮೋಹನರು ಸಹಗಮನದ ವಿಷಯದಲ್ಲಿ ದೊಡ್ಡ ಚಳುವಳಿ ಯನ್ನೆಬ್ಬಿಸಿ ಅನೇಕ ಲೇಖನಗಳ ಮೂಲಕವೂ ಪುಸ್ತಕಗಳ ಮೂಲಕವೂ ವಾದಗಳ ಮೂಲಕವೂ ಜನರ ಗಮನವನ್ನು ಯುಕ್ತ ಮಾರ್ಗದಕಡೆಗೆ ಹರಿಸಿದರು. ಅವರ ಲೇಖನಗಳು ಬಂಗಾಳಿ ಮತ್ತು ಇಂಗ್ಲಿಷ್ ಭಾಷೆ ಗಳಲ್ಲಿ ಇದ್ದುವು. ಆದರೂ ಅವರು ಇಷ್ಟರಿಂದಲೇ ತೃಪ್ತರಾಗಲಿಲ್ಲ. ತಮ್ಮ

ಸ್ನೇಹಿತರೊಂದಿಗೆ ಒಂದು ಸಂಘವನ್ನೇರ್ಪಡಿಸಿ ಆ ಸಂಘದವರು ಕಲ್ಕತ್ತೆಯಲ್ಲಿಯೂ ಸುತ್ತಮುತ್ತಲೂ ಸಹಗಮನ ನಡೆಯುವ ಸ್ಥಳಗಳಿಗೆಲ್ಲ ಹೋಗಿ ಸಹಗಮನ ನಡೆಸಲಿರುವ ಸ್ತ್ರೀಯನ್ನು ಯಾರೂ ನಿರ್ಬಂಧಿಸದಂತೆಯೂ ಕಾನೂನಿನ ಇತರ ನಿಬಂಧನೆಗಳು ಕ್ರಮವಾಗಿ ಆಚರಣೆಗೆ ಬರುವ ರೀತಿಯಲ್ಲಿಯೂ ನೋಡಿಕೊಳ್ಳುತ್ತಿದ್ದರು. ಇವೆಲ್ಲವುಗಳ ಪರಿಣಾಮವಾಗಿ ಅನೇಕ ವಿದ್ಯಾವಂತರು ರಾಮಮೋಹನರ ವಾದವು ಯುಕ್ತವಾದುದೆಂದೂ ಸಹಗಮನವು ದುಷ್ಪದ್ಧತಿಯೆಂದೂ ಮನಗಂಡರು ಜನರಲ್ಲಿ ಹೀಗೆ ಜಾಗೃತಿಯುಂಟಾದಂತೆಯೇ ಬ್ರಿಟಿಷ್ ಸರ್ಕಾರದ ಅಧಿಕಾರಿವರ್ಗಕ್ಕೂ ಸಹಗಮನ ವಿಷಯದಲ್ಲಿ ಸರಿಯಾದ ತಿಳಿವಳಿಕೆಯುಂಟಾಯಿತು ಆದರೂ ಸರ್ಕಾರದವರು ಸಹಗಮನವನ್ನು ಕಾನೂನುಮೂಲಕ ನಿಲ್ಲಿಸಲು ಆತುರಪಡಲಿಲ್ಲ ಈ ಮಧ್ಯದಲ್ಲಿ ಗವರ್ನರ್ ಆಗಿದ್ದ ಲಾರ್ಡ್ ಆಮ್‌ಹರ್ಸ್ಟನು ೧೮೨೮ನೆಯ ಮಾರ್ಚಿಯಲ್ಲಿ, ತನ್ನ ಸ್ಥಾನದಿಂದ ನಿವೃತ್ತಿಹೊಂದಿದನು ಆತನ ಸ್ಥಾನಕ್ಕೆ ಲಾರ್ಡ್ ವಿಲಿಯಂ ಬೆಂಟಿಂಕನು ಬಂದನು ಕಲ್ಕತ್ತೆಯ ನ್ಯಾಯಾಧಿಕಾರಿಗಳಾದ ಸ್ಮಿತ್ ಮತ್ತು ರೋಜ್ ಎಂಬವರು ೧೮೨೬ರಲ್ಲಿಯೇ ಸಹಗಮನವನ್ನು ತಡೆಗಟ್ಟುವ ಕಾನೂನನ್ನು ಆಚರಣೆಗೆ ತರಬೇಕೆಂದು ಒಪ್ಪಿದರೂ ಲಾರ್ಡ್ ಆಮ್‌ಹರ್ಸ್ಟನು ಹಿಂದೂ ಮತಾಚಾರಗಳಲ್ಲಿ ಕಾನೂನು ಮಾಡುವ ಸ್ವಭಾವದವನಾಗಿರಲಿಲ್ಲ ಲಾರ್ಡ್ ವಿಲಿಯಂ ಬೆಂಟಿಂಕನ ಅಧಿಕಾರವನ್ನು ವಹಿಸುವ ವೇಳೆಗೆ ಸಹಗಮನವನ್ನು ನಿಲ್ಲಿಸುವ ವಿಷಯದಲ್ಲಿ ಎಲ್ಲ ನ್ಯಾಯಾಧಿಕಾರಿಗಳೂ ಇತರ ಅಧಿಕಾರಿಗಳೂ ಒಮ್ಮನಸ್ಸಿನಿಂದ ಒಪ್ಪಿದ್ದರು ಸಹಗಮನವನ್ನು ನಿಲ್ಲಿಸತಕ್ಕ ಕೆಲಸವು ಯುಕ್ತಿವಂತನಾದ ಬೆಂಟಿಂಕನ ಭಾಗಕ್ಕೆ ಸೇರಿತು

ಬೆಂಟಿಂಕನು ಅಧಿಕಾರಕ್ಕೆ ಬಂದಕೂಡಲೇ ಆ ವಿಷಯದಲ್ಲಿ ಸೈನಿಕರ ಅಭಿಪ್ರಾಯವೇನೆಂದು ತಿಳಿದುಕೊಂಡನು ಏಕೆಂದರೆ, ಅವರೇ ವಿರೋಧವಾಗಿದ್ದಪಕ್ಷದಲ್ಲಿ ದೇಶದಲ್ಲಿ ದೊಡ್ಡ ಗಲಭೆ ಏಳುವುದರಲ್ಲಿ ಸಂಶಯವಿರಲಿಲ್ಲ ಹಿಂದೂ ಶಿಪಾಯಿಗಳ ಸಂಪೂರ್ಣ ಸಮ್ಮತಿಯನ್ನು ಈ ವಿಚಾರದಲ್ಲಿ ನಿರೀಕ್ಷಿಸಿದನು ಹಿಂದೂ ಶಿಪಾಯಿಗಳು ಒಟ್ಟಿನಲ್ಲಿ ಸಹಗಮನದ ನಿರೋಧವನ್ನೇ ಬಯಸಿದರು. ದೇಶೀಯರ ಅಭಿಪ್ರಾಯವೇನೆಂಬುದನ್ನು ಖಂಡಿತವಾಗಿ ತಿಳಿಯುವುದು ಸುಲಭವಾಗಿರಲಿಲ್ಲ ಆದರೂ ರಾಮಮೋಹನರ ಪ್ರಯತ್ನ

ಗಳಿಂದ ವಿದ್ಯಾವಂತರ ಮನೋಭಾವಗಳು ಬಹುಮಟ್ಟಿಗೆ ವ್ಯತ್ಯಾಸವಾಗಿದ್ದಿತೆಂದು ಹೇಳಬಹುದು. ಸುಧಾರಕರ ಪ್ರಭಾವದಿಂದ ತಿಳಿವಳಿಕಸ್ತರೆಲ್ಲ ಅವರ ಪಕ್ಷವನ್ನೇ ಅನುಸರಿಸಿ ಪ್ರತಿಭಟನೆಗೆ ಸಿದ್ಧರಾದರು.

ಬೆಂಟಿಂಕನು ಸಹಗಮನ ನಿರೋಧಕಾರ್ಯದಲ್ಲಿ ಭಾರತೀಯ ಸ್ತ್ರೀತ್ವ ಪಕ್ಷವನ್ನು ವಹಿಸಿದ್ದ ರಾಮಮೋಹನರಿಂದ ಸಹಾಯವನ್ನು ಅಪೇಕ್ಷಿಸಿದನು. ಬೆಂಟಿಂಕನು ಈ ವಿಚಾರದ ಪರ್ಯಾಲೋಚನೆಗಾಗಿ ರಾಮಮೋಹನರಿಗೆ ಆಹ್ವಾನ ಕಳುಹಿಸಿದನು. ಆದರೆ ಅವರ ಸ್ವಭಾವವು ಆತನಿಗೆ ತಿಳಿದಿರಲಿಲ್ಲ. ಆಗ ನಡೆದ ಒಂದು ಸಂಗತಿಯು ಸ್ವಾರಸ್ಯವಾಗಿದೆ. ಬೆಂಟಿಂಕನು ರಾಮಮೋಹನರ ಸಂದರ್ಶನವನ್ನು ಬಯಸುವುದಾಗಿ ತನ್ನ ಅಂಗರಕ್ಷಕನ ಮೂಲಕ ತಿಳಿಸಿದನು. ಅಂಗರಕ್ಷಕನು ಅವರಲ್ಲಿಗೆ ಬಂದು ಗವರ್ನರ್ ಜನರಲ್ಲಿನ ಅಪ್ಪಣೆಯನ್ನು ತಿಳಿಸಿದಾಗ ಅವರು "ನಾನು ಈಗ ಪ್ರಾಪಂಚಿಕ ವ್ಯವಹಾರಗಳನ್ನು ಬಿಟ್ಟು ಸದಾಚಾರ ವೃತ್ತಿಯಲ್ಲಿಯೂ ಸತ್ಯಾನ್ವೇಷಣೆಯಲ್ಲಿಯೂ ನಿರತನಾಗಿರುವೆನು. ಆದುದರಿಂದ ಗವರ್ನರ್ ಜನರಲ್ಲರಿಗೆ ನನ್ನ ಭಕ್ತಿಪೂರ್ವಕ ವಂದನೆಗಳನ್ನು ತಿಳಿಸಿ ಆ ಮಹನೀಯರ ಸಮ್ಮುಖಕ್ಕೆ ನಾನು ಬರಲಾರೆನೆಂದೂ ನನ್ನನ್ನು ಕ್ಷಮಿಸಬೇಕೆಂದೂ ತಿಳಿಸು" ಎಂದರು. ಅಂಗರಕ್ಷಕನು ರಾಮಮೋಹನರ ಉತ್ತರವನ್ನು ಆಶ್ಚರ್ಯದಿಂದ ಸ್ವೀಕರಿಸಿ ಬೆಂಟಿಂಕನಿಗೆ ತಿಳಿಸಿದನು. ಆತನು ಅಂಗರಕ್ಷಕನನ್ನು ಕುರಿತು "ನೀನು ರಾಮಮೋಹನರಿಗೆ, ಏನು ಹೇಳಿದೆ?" ಎಂದು ಕೇಳಿದನು. ಅವನು "ಗವರ್ನರ್ ಜನರಲ್ ಆದ ವಿಲಿಯಂ ಬೆಂಟಿಂಕರು ತಮ್ಮನ್ನು ನೋಡಲು ಹರ್ಷಿಸುತ್ತಾರೆ, ಎಂದೆನು"—ಎಂದು ಹೇಳಿದನು. ಬೆಂಟಿಂಕನು ಅವನನ್ನು ಪುನಃ ರಾಮಮೋಹನರ ಮನೆಗೆ ಅಟ್ಟಿ ಹೀಗೆ ಹೇಳೆಂದು ಅಪ್ಪಣೆ ಮಾಡಿದನು: "ತಾವು ಶ್ರೀಮಾನ್ ವಿಲಿಯಂ ಬೆಂಟಿಂಕರನ್ನು ಒಂದಾವರ್ತಿ ಭೇಟಿ ಮಾಡಿದರೆ ಅವರು ಕೃತಜ್ಞರಾಗಿರುತ್ತಾರೆ" ಅಂಗರಕ್ಷಕನು ರಾಮಮೋಹನರಲ್ಲಿಗೆ ಪುನಃ ಬಂದು ಹಾಗೆಯೇ ಹೇಳಿದನು. ಅವರು ಶ್ರೀಮಂತರ ಮರ್ಯಾದಾಪೂರ್ವಕವಾದ ಪ್ರಾರ್ಥನೆಯನ್ನು ನಿರಾಕರಿಸಲಾಗಲಿಲ್ಲ. ಇಬ್ಬರು ಉದಾರಮತಿಗಳಿಗೂ ಭೇಟಿ

ಆಯಿತು ರಾಮಮೋಹನರಲ್ಲಿ ನೆಲಸಿದ್ದ ಆತ್ಮಗೌರವದ ಉನ್ನತಿಯು ಈ ಸಂದರ್ಭದಿಂದ ತಿಳಿದುಬರುತ್ತದೆ

ರಾಮಮೋಹನರು ಬೆಂಟಿಂಕನ ಸಂದರ್ಶನವನ್ನು ನಿರಾಕರಿಸಿದುದಕ್ಕೂ ಕಾರಣವಿತ್ತೆಂದು ಊಹಿಸಬಹುದು ಪತ್ರಿಕಾ ಸ್ವಾತಂತ್ರ್ಯ ವಿಚಾರದಲ್ಲಿಯೂ, ಇತರ ಸಂದರ್ಭಗಳಲ್ಲಿಯೂ, ಬ್ರಿಟಿಷರು ತೋರಿಸಿದ ಅಧಿಕಾರ ದರ್ಪವು ಅವರಿಗೆ ಸಹಿಸಲಿಲ್ಲ ತಮಗೊದಗಿದ ವಿಫಲಗಳಿಂದ ಎದೆಗುಂದದವರಾದರೂ ಬ್ರಿಟಿಷರ ನಿರ್ದಾಕ್ಷಿಣ್ಯ ಪ್ರಕೃತಿಯಿಂದ ಅವರಿಗೆ ಸ್ವಲ್ಪ ನಿರಾಶಾಭಾವವುಂಟಾಗಿತ್ತು ಅಲ್ಲದೆ ಅವರಿಗೆ ಆಡಂಬರದಿಂದ ಕೂಡಿದ ಸಭೆಗಳಲ್ಲಿ ಮೆರೆಯುವುದು ಪ್ರಿಯವಾಗಿರಲಿಲ್ಲ ಆದರೆ ವಿಲಿಯಂ ಬೆಂಟಿಂಕನು ತನ್ನಲ್ಲಿ ಮಾನವ ಸಹಜವಾದ ಮರ್ಯಾದೆಯನ್ನು ತೋರಿಸಿದುದರಿಂದ ರಾಮಮೋಹನರು ಆತನ ಆಹ್ವಾನವನ್ನು ಮನ್ನಿಸಬೇಕಾಯಿತು ೧೮೨೯ ನೆಯ ಜುಲೈ ೨೭ ರಲ್ಲಿ ಅವರ ಭೇಟಿ ಆಯಿತು. ಆ ಭೇಟಿಯ ವಿಚಾರವನ್ನು ಸರ್ಕಾರದ "ಇಂಡಿಯಾ ಗೆಜೆಟ್" ಹೀಗೆ ಬರೆದಿದೆ —

"ಈ ವಿಚಾರದಲ್ಲಿ ಬಹುಕಾಲದಿಂದ ಆಸಕ್ತಿವಹಿಸಿ ತನ್ನ ದೇಶದ ಜನಕ್ಕೆ ಮುಂದಾಳಾಗಿ ನಿಂತಿರುವ ಗಣ್ಯನಾದ ದೇಶೀಯನೊಬ್ಬನಿಗೆ ಈ ವಿಚಾರದಲ್ಲಿ ಸಲಹೆಗಳನ್ನು ಕೊಡಲು ಉತ್ತೇಜನ ಕೊಟ್ಟಿದ, ಅಲ್ಲದೆ ಗವರ್ನರ್ ಜನರಲ್ಲರು ಆತನನ್ನು ಸಂದರ್ಶಿಸಿ ಗೌರವಿಸಿದ್ದಾರೆ, ಮತ್ತು ಗವರ್ನರ್ ಜನರಲ್ಲರು ಈ ಕಳಂಕಯುತವಾದ ಪದ್ಧತಿಯನ್ನು ನಿಲ್ಲಿಸಬೇಕೆಂದು ಬಹಳ ಕುತೂಹಲಿಗಳಾಗಿರುತ್ತಾರೆ."

ಬೆಂಟಿಂಕ್ ಮತ್ತು ರಾಮಮೋಹನರ ಭೇಟಿಯಲ್ಲಿ ನಡೆದ ಮಾತುಕಥೆಗಳು ಗವರ್ನರ್ ಜನರಲ್ಲರ ೧೮೨೯ ನೆಯ ನವೆಂಬರ್ ೮ರ ವರದಿಯಲ್ಲಿ ಕಾಣಿಸಿದೆ. ರಾಮಮೋಹನರು ಬುದ್ಧಿವಂತನಾದ ರಾಜತಂತ್ರಜ್ಞನಂತೆ ಬಹಳ ಎಚ್ಚರಿಕೆಯಿಂದಲೂ ಮಿತವಾಗಿಯೂ ಮಾತನಾಡಿದರು ಸರ್ಕಾರದವರು ಕೂಡಲೇ ನಿರ್ಬಂಧವಾದ ಆಜ್ಞೆಗಳನ್ನು ಜಾರಿಗೆ ತಂದಲ್ಲಿ ಪ್ರಜೆಗಳಲ್ಲಿ ಗಲಭೆ ಹುಟ್ಟಬಹುದೆಂಬುದನ್ನು ಗವರ್ನರ್ ಜನರಲ್ಲರ ಗಮನಕ್ಕೆ ತಂದರು ಬೆಂಟಿಂಕನೂ ಆ ಸಲಹೆಯನ್ನು ಅನುಮೋದಿಸಿದನು. ಆತನು ತನ್ನ ವರದಿಯಲ್ಲಿ ಹೀಗೆ ತಿಳಿಸಿರುವನು.—

"ಬುದ್ಧಿವಂತ ದೇಶೀಯನೂ, ಸಹಗಮನ ಮೊದಲಾದ ಹಿಂದೂ ಪದ್ಧತಿಗಳಲ್ಲಿ ಬೇರೂರಿರುವ ಮೂಢ ನಂಬಿಕೆಗಳನ್ನು ನಿರ್ಮೂಲಗೊಳಿಸುವುದರಲ್ಲಿ ಆಸಕ್ತನಾಗಿರುವವನೂ ಆದ ರಾಮಮೋಹನನು ನನ್ನಲ್ಲಿ ಮಾತನಾಡುವಾಗ ನಮ್ಮ ಆತುರದ ನಿಬಂಧನೆಗಳಿಂದ ದೇಶದಲ್ಲಿ ಗಲಭೆ ಹುಟ್ಟುವುದೆಂಬ ಭಯವನ್ನು ಸೂಚಿಸಿದನೆಂಬುದನ್ನು ನಾನು ಇಲ್ಲಿ ಒಪ್ಪಿಕೊಳ್ಳಬೇಕು. ಸಹಗಮನಾಚರಣೆಗೆ ಹೆಚ್ಚು ಆತಂಕಗಳನ್ನು ಕಲ್ಪಿಸುವುದರಿಂದಲೂ ಪೋಲಿಸ್ ಸಿಬ್ಬಂದಿಯ ಸಹಾಯದಿಂದಲೂ ಆ ಪದ್ಧತಿಯನ್ನು ಯಾರ ಗಮನವನ್ನೂ ಆಕರ್ಷಿಸದೆ, ಆಡಂಬರವಿಲ್ಲದೆ, ನಿಲ್ಲಿಸಬಹುದೆಂದು ಸೂಚಿಸಿದನು. ಸರ್ವರಿಗೂ ವಿದಿತವಾಗುವಂತೆ ಪ್ರತ್ಯಕ್ಷರೀತಿಯಲ್ಲಿ ನಿಬಂಧನೆಗಳನ್ನು ಮಾಡಿದರೆ ಜನರ ಮನಸಿನಲ್ಲಿ ಭೀತಿಗೆ ಕಾರಣವಾಗಿ ಅವರು ಹೀಗೆ ಅರ್ಥಮಾಡಿಕೊಳ್ಳುವರು: "ಇಂಗ್ಲಿಷಿನವರು ರಾಜ್ಯಕ್ಕಾಗಿ ಹೋರಾಡುತ್ತಿದ್ದಾಗ ನಮ್ಮ ಮತಾಚಾರಗಳಲ್ಲಿ ಪ್ರವೇಶಿಸದೆ ಎಲ್ಲ ಮತಗಳನ್ನೂ ಸಮದೃಷ್ಟಿಯಿಂದ ಕಾಣುವುದು ಯುಕ್ತವೆಂದು ಭಾವಿಸಿದರು. ಆದರೆ ಈಗ ರಾಜ್ಯವನ್ನು ಗೆದ್ದು ತಾವೇ ಅಧಿಕಾರಿಗಳಾದಮೇಲೆ ತಮ್ಮ ಮೊದಲನೆಯ ಕೆಲಸವು ತಮ್ಮ ಪ್ರತಿಜ್ಞೆಯನ್ನು ಮೀರುವುದಾಯಿತು. ಮಹಮ್ಮದೀಯರಂತೆ ಇವರೂ ಮುಂದೆ ನಮ್ಮ ಮೇಲೆ ತಮ್ಮ ಮತಾಚಾರಗಳನ್ನು ಹೊರಿಸುವಂತಾಗುವುದು.''

ವಿಲಿಯಂ ಬೆಂಟಿಂಕನು ೧೮೨೯ನೆಯ ಡಿಸೆಂಬರ್ ೪ನೆಯ ತಾರೀಖಿನಲ್ಲಿ ಅಪ್ಪಣೆಕೊಡಿಸಿದ ನಿಬಂಧನೆಯಿಂದ ಸಹಗಮನ ಪದ್ಧತಿಯನ್ನು ನಿರ್ಮೂಲಗೊಳಿಸಿದನು. ಈ ನಿಬಂಧನೆಯ ಆದಿಭಾಗದಲ್ಲಿ ರಾಮಮೋಹನರ ಅಭಿಪ್ರಾಯಗಳನ್ನೂ, ವಾಕ್ಯಸರಣಿಯನ್ನೂ, ಅವರ ಪ್ರಭಾವವನ್ನೂ ಸ್ಪಷ್ಟವಾಗಿ ಕಾಣಬಹುದಾಗಿದೆ. ಈ ನಿಬಂಧನೆಯ ಕೆಳಗಿನ ವಾಕ್ಯಗಳು ರಾಮಮೋಹನರ ಸಹಗಮನದ ಮೇಲಿನ ಲೇಖನಗಳನ್ನು ಜ್ಞಾಪಕಕ್ಕೆ ತರುವುವಾಗಿವೆ.

"ಹಿಂದೂ ವಿಧವೆಯರನ್ನು ಜೀವಸಹಿತವಾಗಿ ಸುಡುವ ಅಥವಾ ಹೂಳುವ ಈ ಸಹಗಮನ ಪದ್ಧತಿಯು ಮಾನವ ಪ್ರಕೃತಿಗೇ ವಿರೋಧವಾಗಿದೆ. ಇದು ಅಗತ್ಯವಾಗಿ ಆಚರಿಸಬೇಕಾದುದೆಂದು ಯಾವ ಹಿಂದೂ ಶಾಸ್ತ್ರವೂ ವಿಧಿಸಿಲ್ಲ. ಅಷ್ಟೇ ಅಲ್ಲದೆ ಶುದ್ಧವಾದ ಜೀವನವೂ ಆತ್ಮಸಂಯಮವೂ ವಿಧವೆಯರಿಗೆ ಯೋಗ್ಯವೆಂದು ವಿಧಿಸುತ್ತದೆ. ಹಿಂದೂಗಳೇ ಇದನ್ನು ಕ್ರೂರವೂ ವಿಧಿವಿರುದ್ಧವೂ ಎಂದೆಣಿಸಿರುತ್ತಾರೆ. ಆದುದರಿಂದ ಗವರ್ನರ್ ಜನರಲ್ಲರೂ ಅವರ ಮಂತ್ರಿಮಂಡಲವೂ ಈ ದುಷ್ಟ ಪದ್ಧತಿಯನ್ನು ಕಾನೂನು ಮೂಲಕ ತಡೆಗಟ್ಟದಲ್ಲದೆ ನಿರ್ಮೂಲವಾಗದೆಂದು ಯೋಚಿಸಿರುತ್ತಾರೆ.''

ನಿಬಂಧನೆಯ ಈ ವಾಕ್ಯಗಳಿಂದ ಬೆಂಟಿಂಕನು ಎಷ್ಟರಮಟ್ಟಿಗೆ ರಾಮ ಮೋಹನರಿಂದ ಪ್ರೇರಿತನಾಗಿದ್ದನೆಂಬುದು ವ್ಯಕ್ತವಾಗುವುದು ಅವರು ಬಹುಕಾಲ ಲೇಖನಗಳ ಮೂಲಕವೂ, ಪುಸ್ತಕಗಳ ಮೂಲಕವೂ, ವಾದಗಳ ಮೂಲಕವೂ ಹಿಂದೂ ಶಾಸ್ತ್ರಗಳ ಅಭಿಪ್ರಾಯಗಳನ್ನು ಜನರ ಗೋಚರಕ್ಕೆ ತರದೆ ಇದ್ದಿದ್ದಲ್ಲಿ ಬೆಂಟಿಂಕನ ಹಿಂದೂ ಶಾಸ್ತ್ರ ವಿಷಯಕವಾದ ಮಾತು ಗಳು ಜನರ ಆದರಣೆಗೆ ಪಾತ್ರವಾಗುತ್ತಿರಲಿಲ್ಲ ರಾಮಮೋಹನರು ಜನರ ಮನಸ್ಸನ್ನು ಬಹುಮಟ್ಟಿಗೆ ಪರಿಷ್ಕರಿಸಿದ್ದುದರಿಂದ ಕಾನೂನಿನ ರಚನೆಯು ಸುಲಭವೂ ಸಾಧ್ಯವೂ ಆಯಿತು ಹೀಗೆ ಧೈರ್ಯದಿಂದ ವರ್ತಿಸಿದ ಇಬ್ಬರು ಮಹಾನುಭಾವರೂ ಭಾರತೀಯರ ಮನಃಪೂರ್ವಕವಾದ ಚಿರಕೃತಜ್ಞತೆಗೆ ಪಾತ್ರರಾಗಿರುತ್ತಾರೆ.

ಬೆಂಟಿಂಕನ ಆಜ್ಞೆಯಿಂದ ಈ ವಿಷಯದಲ್ಲಿ ರಾಮಮೋಹನರ ಪ್ರಯತ್ನಗಳು ಕೊನೆಮುಟ್ಟಲಿಲ್ಲ ಸಹಗಮನವಾದಿಗಳು ಗವರ್ನರ್ ಜನ ರಲ್ಲರು ಅನುಸರಿಸಿದ್ದ ಮಾರ್ಗವೂ ಅವರ ಆಜ್ಞೆಯೂ ಅಸಾಧುವಾದು ದೆಂದು ವ್ಯಕ್ತಪಡಿಸುವ ಒಂದು ಅರ್ಜಿಯನ್ನು ಸಿದ್ಧಗೊಳಿಸಿ ೧೮೩೦ ನೆಯ ಜನವರಿ ೧೪ ನೆಯ ತೇದಿಯಲ್ಲಿ ಒಪ್ಪಿಸಿದರು ಆ ಅರ್ಜಿಗೆ ಕಲ್ಕತ್ತೆಯ ಲ್ಲಿನ ೮೦೦ ಜನರು ಸಹಿ ಹಾಕಿದ್ದರು, ೧೨೦ ಪಂಡಿತರು ಇದನ್ನು ಅನು ಮೋದಿಸಿದ್ದರು ಅದೇ ಅರ್ಥವನ್ನು ಕೊಡುವ ಮತ್ತೊಂದು ಅರ್ಜಿಯು, ಪರಸ್ಥಳದ ೩೪೦ ಜನರಿಂದ ಸಹಿಯಾಗಿ, ಅರ್ಪಿತವಾಯಿತು ರಾಮ ಮೋಹನರೂ ತಟಸ್ಥರಾಗಿರಲಿಲ್ಲ ಗವರ್ನರ್ ಜನರಲ್ಲರನ್ನು ಅಭಿನಂದಿ ಸುವ ಉದ್ದೇಶದಿಂದ ಕಲ್ಕತ್ತೆಯ ೩೦೦ ಜನರಿಂದ ಸಹಿಯಾದ ಒಂದು ಪತ್ರವೂ ೮೦೦ ಜನ ಕ್ರೈಸ್ತರಿಂದ ಸಹಿಯಾದ ಮತ್ತೊಂದು ಪತ್ರವೂ, ಪ್ರತಿಪಕ್ಷದವರು ಅರ್ಜಿಕೊಟ್ಟ ಎರಡು ದಿನಗಳಲ್ಲಿ, ಎಂದರೆ ೧೬ ನೆಯ ಜನವರಿಯಲ್ಲಿ, ಅರ್ಪಿತವಾದುವು ಬೆಂಟಿಂಕನು ತನ್ನ ಆಜ್ಞೆ ಯನ್ನು ರದ್ದುಮಾಡುವುದಿಲ್ಲವೆಂದೂ, ಬ್ರಿಟಿಷ್ ಚಕ್ರವರ್ತಿಗಳಲ್ಲಿ ಮನವಿ ಮಾಡಿಕೊಳ್ಳಬಹುದೆಂದೂ 'ಸತಿ' ಪಕ್ಷದವರಿಗೆ ಉತ್ತರ, ಕೊಟ್ಟನು ಪ್ರತಿಪಕ್ಷದವರು ಜನವರಿ ೧೭ರಲ್ಲಿ, ಬಹಿರಂಗ ಸಭೆ ಸೇರಿ ಇಂಗ್ಲೆಂಡಿನ ಅಧಿ ಕಾರಿಗಳಲ್ಲಿ ಮನವಿಮಾಡಿಕೊಳ್ಳುವುದಾಗಿ ನಿರ್ಧರಮಾಡಿದರು ಇದೇ ಸಭೆಯಲ್ಲಿ ಅವರು "ಧರ್ಮಸಭೆ" ಎಂಬ ಸಂಸ್ಥೆಯನ್ನು ಸ್ಥಾಪಿಸಿ, ರಾಮ ಮೋಹನರ ಚಳುವಳಿಗೆ ವಿರೋಧ ಚಳುವಳಿ ನಡಸಲು ಸಭೆ ಸೇರಿದ್ದಲ್ಲಿಯೇ

೧೧,೨೬೦ ರೂಪಾಯಿಗಳನ್ನು ಚಂದಾರೂಪದಲ್ಲಿ ಪಡೆದರು. ರಾಮಮೋಹನರು ಇದರಿಂದ ಭೀತರಾಗಲಿಲ್ಲ. ಅವರು ಕೂಡಲೇ "ಸಹಗಮನವು ಶಾಸ್ತ್ರ ಸಮ್ಮತವೇ" ಎಂಬ ಮತ್ತೊಂದು ಲೇಖನವನ್ನು ಪ್ರಚುರಪಡಿಸಿದರು. ಅದರಲ್ಲಿ ೧೨೦ ಪಂಡಿತರ ವಾದಗಳನ್ನೂ ಖಂಡಿಸಲು ಪ್ರಯತ್ನಿಸಿದರು. ಅಷ್ಟೇ ಅಲ್ಲದೆ ಮುಂದೆ ವಿದೇಶಕ್ಕೂ ಹೋಗಿ ಅಲ್ಲಿಯೂ ಪ್ರತಿಪಕ್ಷದವರ ಪ್ರಯತ್ನಗಳನ್ನು ವಿಫಲಗೊಳಿಸಿದನು. ಹೀಗೆ ಸಹಗಮನ ನಿರೋಧದ ವಿಷಯದಲ್ಲಿ ರಾಮಮೋಹನರ ಪ್ರಯತ್ನಗಳು ಯಾವಜ್ಜೀವವೂ ನಡೆದುವು. ಆದರ ಅವರ ಪ್ರಯತ್ನಗಳು ಪೂರ್ಣವಾಗಿ ಫಲಿಸಿದುದನ್ನು ನೋಡುವ ಸುಯೋಗವು ಅವರಿಗೆ ಲಭಿಸಲಿಲ್ಲ,

ರಾಮಮೋಹನರು ಸಹಗಮನ ವಿಷಯದಲ್ಲಿ ಶ್ರಮಿಸಿದಂತೆಯೇ ಭಾರತೀಯ ಸ್ತ್ರೀಯರ ಸ್ಥಾನಮಾನಗಳ ಉನ್ನತಿಗೂ ಶ್ರಮಿಸಿದರು. ರಾಮಮೋಹನರ ಕಾಲಕ್ಕೆ ಮೊದಲು ಸ್ತ್ರೀಯರ ಸಾಮಾಜಿಕ ಸ್ಥಿತಿಯು ಶೋಚನೀಯವಾಗಿತ್ತು. ಅವರಿಗ ಯಾವ ಬಗೆಯ ಹಕ್ಕು ಸ್ವಾತಂತ್ರ್ಯಗಳಾಗಲಿ ಹೊರಗಿನ ಪ್ರಪಂಚದ ವ್ಯವಹಾರವಾಗಲಿ ಇರಲಿಲ್ಲ. ಸಾಲದುದಕ್ಕೆ ಪುರುಷರು ಅವರನ್ನು ಅಲ್ಲಗಳೆದು ಹೀನವಾಗಿ ಕಾಣುತ್ತಿದ್ದರು. ಹೀಗ ಜನಾಂಗದಲ್ಲಿ ಅರ್ಧ ಪ್ರಜೆಯು ಅಜ್ಞಾನಾಂಧಕಾರದಲ್ಲಿ ತೊಳಲುತ್ತಿದ್ದರೆ ದೇಶಕ್ಕೆ ಏಳಿಗೆಯೊದಗಲಾರದೆಂಬುದನ್ನು ರಾಮಮೋಹನರು ಕಂಡುಕೊಂಡರು. ಆದುದರಿಂದಲೇ ಅವರು ತಮ್ಮ ಕಾರ್ಯಕ್ರಮದಲ್ಲಿ ಸ್ತ್ರೀಯ ಏಳಿಗೆಗೆ ಮುಖ್ಯ ಭಾಗವನ್ನು ಕೊಟ್ಟದ್ದುದು. ಸಹಗಮನ ವಿಚಾರದ ಚರ್ಚೆಯ ಸಂದರ್ಭದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ಇತರ ಪ್ರಶ್ನೆಗಳನ್ನೂ ಪರೀಕ್ಷಿಸಲು ಅವಕಾಶ ದೊರೆಯಿತು. ಅವರ ಗಮನಕ್ಕೆ ಬಂದ ಬಹುಪತ್ನೀ ವಿವಾಹ, ವಿಧವಾ ವಿವಾಹ, ಸ್ತ್ರೀಯರ ಆಸ್ತಿಯ ಹಕ್ಕುಗಳು, ಸ್ತ್ರೀ ವಿದ್ಯಾಭ್ಯಾಸ--ಈ ಸಾಮಾಜಿಕ ವಿಚಾರಗಳಲ್ಲಿ ಸ್ತ್ರೀಯರ ಸ್ಥಿತಿಯನ್ನು ಉತ್ತಮಗೊಳಿಸಲು ಪ್ರಯತ್ನಿಸಿದರು. ಸಹಗಮನದಂತೆಯೇ ಬಹುಪತ್ನೀ ವಿವಾಹವು ಆಗ ಹೆಚ್ಚು ರೂಢಿಯಲ್ಲಿದ್ದ ಪದ್ಧತಿ. ಮುಖ್ಯವಾಗಿ ಉತ್ತಮವರ್ಗದ ಬ್ರಾಹ್ಮಣರು ತಮ್ಮ ಕಾಮೇಚ್ಛೆಯ ಪೂರ್ತಿಗಾಗಿಯೋ ಅಥವಾ ಬೇರ ಅಲ್ಪ ಪ್ರಯೋಜನಕ್ಕಾಗಿಯೋ ಹತ್ತು, ಇಪ್ಪತ್ತು, ಮೂವತ್ತು ಮದುವೆಗಳನ್ನು ಮಾಡಿಕೊಳ್ಳುವುದೂ ಇತ್ತು. ಈ ಬಹುಪತ್ನಿ

ಯರಲ್ಲಿ ಕೆಲವರು ಪತಿಯ ಜೀವಿತಕಾಲದಲ್ಲಿಯೂ ಕೆಲವರು ಆಮೇಲೂ ತಮ್ಮ ಹುಟ್ಟಿದ ಮನೆಯವರ ರಕ್ಷಣೆಗೆ ಒಳಗಾಗುವುದೂ ಸಹಜವಾಗಿತ್ತು ಪತಿಯು ತೀರಿಹೋದಮೇಲೆ ಅವರಿಗೆ ಉಳಿದ ದಾರಿಗಳು ಮೂರು (೧) ಪುನಃ ವಿವಾಹವಾಗಿ ಮತ್ತೊಬ್ಬ ಪತಿಯನ್ನು ಪಡೆಯದೆ ತಮ್ಮ ಉಳಿದ ಜೀವಮಾನವನ್ನೆಲ್ಲ ದಾಸ್ಯ ವೃತ್ತಿಯಲ್ಲಿ ಕಳೆಯುವುದು, (೨) ತಮ್ಮ ಜೀವನವನ್ನು ನಡೆಸಿಕೊಳ್ಳಲು ಅಧರ್ಮ ಅಯುಕ್ತ ಮಾರ್ಗಗಳನ್ನು ಅನುಸರಿಸುವುದು, (೩) ತಮ್ಮ ಪತಿಯ ಜೊತೆಯಲ್ಲಿ ಸಹಗಮನ ಮಾಡುವುದು.

ಬಹು ಪತ್ನೀ ವಿವಾಹವು ಶಾಸ್ತ್ರ ನಿಷಿದ್ಧವಾದದು ಯಾಜ್ಞವಲ್ಕ್ಯನು ಮೊದಲ ಪತ್ನಿಯಲ್ಲಿ ಈ ಲೋಪಗಳಿದ್ದಲ್ಲಿ ಅವಳ ಜೀವಿತ ಕಾಲದಲ್ಲಿಯೇ ಎರಡನೆಯ ಮದುವೆಯನ್ನು ಅನುಮೋದಿಸುವನು (೧) ಮದ್ಯಪಾನ (೨) ಗುಣವಾಗದ ರೋಗ (೩) ಮೋಸ (೪) ಬಂಜೆತನ (೫) ದುಂದುತನ (೬) ದುರ್ಭಾಷೆಯನ್ನಾಡುವುದು (೭) ಕೇವಲ ಮಕ್ಕಳನ್ನು ಮಾತ್ರ ಪಡೆಯುವುದು (೮) ಪತಿಯಲ್ಲಿ ದ್ವೇಷ ಮನುವೂ ಇದನ್ನೇ ಅನುಮೋದಿಸುವನು ರಾಮಮೋಹನರು ೧೮೨೨ ರಲ್ಲಿ ಬರೆದು, ಅವರ ಮಗ ರಾಮಪ್ರಸಾದನಿಂದ ೧೮೫೬ ರಲ್ಲಿ ಪ್ರಕಟಿತವಾದ, "ಸ್ತ್ರೀಯರ ಹಕ್ಕುಗಳು" ಎಂಬ ಲೇಖನದಲ್ಲಿ ಈ ವಿಚಾರವಾಗಿ ಹೀಗೆ ಬರೆದಿರುವರು:

"ಪತ್ನಿಯ ಜೀವಿತಕಾಲದಲ್ಲಿಯೇ ಮತ್ತೊಂದು ಮದುವೆಯಾಗಲು ಸರ್ಕಾರದ ಅಪ್ಪಣೆಯಾಗಬೇಕೆಂದೂ ಅಂಥ ಅರ್ಜಿಗಳನ್ನು ಪರೀಕ್ಷಿಸಲು ಒಬ್ಬ ನ್ಯಾಯಾಧಿಕಾರಿಯನ್ನು ಸರ್ಕಾರದವರು ನಿಯಮಿಸಿ ಶಾಸ್ತ್ರ ಸಮ್ಮತವಾಗಿರುವ ದೋಷಗಳಿದ್ದಲ್ಲಿ ಮಾತ್ರ ಪುನರ್ವಿವಾಹಕ್ಕೆ ಸರ್ಕಾರದ ಸಮ್ಮತಿಯನ್ನು ಕೊಡುವುದಾದರೆ, ಬಂಗಾಳದಲ್ಲಿ ಸ್ತ್ರೀಯರ ದುಃಸ್ಥಿತಿಯೂ ಸ್ತ್ರೀಯರ ಆತ್ಮಹತ್ಯೆಗಳೂ ಬಹುಮಟ್ಟಿಗೆ ಕಡಿಮೆಯಾಗುವುವು."

ಸ್ತ್ರೀಯರ ಆತ್ಮಹತ್ಯೆಯು ಇಂಡಿಯದ ಇತರ ಭಾಗಗಳಿಗಿಂತ ಬಂಗಾಳದಲ್ಲಿ ಹತ್ತರಷ್ಟು ಹೆಚ್ಚಾಗಿತ್ತೆಂದು ಹೇಳಬಹುದು ಬಂಗಾಳದಲ್ಲಿದ್ದ ಬಹು ಪತ್ನೀ ಪದ್ಧತಿಯೂ ತಮ್ಮ ಪತ್ನಿಯರ ಬದುಕಿನಲ್ಲಿ ಗಂಡಸರಿಗಿದ್ದ ಔದಾಸೀನ್ಯವೂ ಇದಕ್ಕೆ ಮುಖ್ಯಕಾರಣಗಳಾಗಿವೆ.

ಹೆಂಗಸರ ಆಸ್ತಿಯ ಹಕ್ಕುಗಳ ವಿಷಯದಲ್ಲಿದ್ದ ನಿಬಂಧನೆಗಳು ಬಹುಪತ್ನೀ ವಿವಾಹಕ್ಕೆ ಬಹುಮಟ್ಟಿಗೆ ಸಹಕಾರಿಯಾಗಿದ್ದುವು. ಹಿಂದೂಗಳು ತಮ್ಮ ಆಸ್ತಿಯನ್ನೆಲ್ಲ ತಮ್ಮ ಗಂಡುಮಕ್ಕಳಿಗೆ ಶೇಖರಿಸಿಡಬೇಕಾಗಿತ್ತೇ ವಿನಾ ಅದರಲ್ಲಿ ಯಾವ ಭಾಗವನ್ನೂ ತಮ್ಮ ಪತ್ನಿಯರಿಗೆ ಇಡಬೇಕಾಗಿರಲಿಲ್ಲ. ದಾಯಭಾಗದ ವಿಚಾರದಲ್ಲಿ ನಿರ್ಣಯ ಮಾಡಿರುವ ಈಚಿನವರಿಂದ ಈ ಪದ್ಧತಿಯು ಬಂಗಾಳದಲ್ಲಿ ಪ್ರಚಾರಕ್ಕೆ ಬಂತು. ಯಾಜ್ಞವಲ್ಕ್ಯನೇ ಮೊದಲಾದ ಪೂರ್ವದ ಶಾಸ್ತ್ರಕಾರರು ಗಂಡನು ಸತ್ತ ಮೇಲೆ ಅವನ ಆಸ್ತಿಯಲ್ಲಿ ಗಂಡು ಮಕ್ಕಳಂತೆ ಹೆಂಡತಿಗೂ ಸಮಭಾಗವುಂಟೆಂದು ತಿಳಿಸಿರುವರು ಅಲ್ಲದೆ ಹೆಣ್ಣು ಮಕ್ಕಳಿಗೂ ಭಾಗವುಂಟೆಂಬುದನ್ನು ಮನುವೇ ಮುಂತಾದವರು ವಿಧಿಸಿರುವರು. ಆದರೆ ನವೀನರು ಪತ್ನಿಗಾಗಲಿ ಹೆಣ್ಣು ಮಕ್ಕಳಿಗಾಗಲಿ ಆಸ್ತಿಯಲ್ಲಿ ಯಾವ ಭಾಗದ ಹಕ್ಕನ್ನೂ ವಿಧಿಸಿಲ್ಲ. ಆಸ್ತಿಯೆಲ್ಲ ಗಂಡು ಮಕ್ಕಳಿಗೇ ಸೇರತಕ್ಕದ್ದೆಂದು ಹೇಳಿರುವರು. ಇದರ ಪರಿಣಾಮವಾಗಿ ಸಂಸಾರಗಳಲ್ಲಿ ಅನರ್ಥಗಳುಂಟಾಗಲು ಅವಕಾಶವಾಯಿತು. ಒಂದು ಕಾಲದಲ್ಲಿ ಮನೆಗೆ ಒಡತಿಯಾಗಿದ್ದವಳು ಕೆಲಕಾಲದ ಮೇಲೆ ತನ್ನ ಮಕ್ಕಳ ಅಥವಾ ಮೊಮ್ಮಕ್ಕಳ ಮತ್ತು ಅವರ ಪತ್ನಿಯರ ಅಧೀನಕ್ಕೆ ಬಿದ್ದು, ಅವರ ತಿರಸ್ಕಾರಕ್ಕೆ ಒಳಗಾಗ ಬೇಕಾಗುವುದು. ಗೃಹಕೃತ್ಯದಲ್ಲಿ ಅವಳಿಗೆ ಯಾವ ಅಧಿಕಾರವೂ ಇಲ್ಲ. ಪ್ರಾಚೀನರ ಅಭಿಮತವು ಹೇಗೋ ಲುಪ್ತವಾಗಿ ಹೀನಸ್ಥಿತಿ ಬಂದಿತ್ತು.

ಆಗ ರೂಢಿಯಲ್ಲಿದ್ದ ಮತ್ತೊಂದು ದುಷ್ಟಪದ್ಧತಿಯು ಸ್ತ್ರೀ ವಿಕ್ರಯ. ಹೆಣ್ಣು ಮಕ್ಕಳು ಹಣ ಸಂಪಾದನೆಗೆ ಒಂದು ಸಾಧನವಾಗಿದ್ದರು. ಹೆಚ್ಚು ಹಣ ವ್ಯಯಮಾಡಿ ಅವರಿಗೆ ಮದುವೆ ಮಾಡುವ ಬದಲು ಯಾರು ಹೆಚ್ಚು ಹಣಕೊಡುವರೋ ಅಂಥವರಿಗೆ ತಮ್ಮ ಮಕ್ಕಳನ್ನು ಕೊಡುವ ಪದ್ಧತಿಯು ಉತ್ತಮ ವರ್ಗದ ಹಿಂದೂಗಳಲ್ಲಿಯೂ ಇತ್ತು. ಇದರಿಂದ ಅನೇಕವೇಳೆ ಬರಿಯ ಹಣದಾಶೆಯಿಂದಲೇ ತಮ್ಮ ಮಕ್ಕಳನ್ನು ಮುದುಕರಿಗೂ, ದುರ್ಬಲರಿಗೂ, ರೋಗಿಷ್ಠರಿಗೂ ಕೊಡಬೇಕಾಗುತ್ತಿತ್ತು. ಇದರಿಂದ ತಂದೆತಾಯಿಗಳು ತಾವಾಗಿಯೇ ಹೆಣ್ಣು ಮಕ್ಕಳ ಮೇಲೆ ವೈಧವ್ಯವನ್ನಾಗಲಿ ದುಃಸ್ಥಿತಿಯನ್ನಾಗಲಿ ಹೊರಿಸುವಂತಾಗುತ್ತಿತ್ತು. ಇಂತಹ ನಿರ್ದಯವೂ ಅಸ್ವಾಭಾ

ವಿಕವೂ ಆದ ಕಾರ್ಯಗಳಿಂದ ತಂದೆ ತಾಯಿಗಳು ತಮ್ಮ ಹೀನದೆಶೆಯನ್ನು ತಂದು ಕೊಳ್ಳುವುದು ಮಾತ್ರವಲ್ಲದೆ ಹಿಂದೂ ಶಾಸ್ತ್ರಗಳಿಗೂ ವಿರೋಧವಾಗಿ ನಡೆಯುತ್ತಿದ್ದರು ರಾಮಮೋಹನರು ತಮ್ಮ ಲೇಖನಗಳಲ್ಲಿ ಈ ಪದ್ಧತಿಯನ್ನೂ ಶಾಸ್ತ್ರಗಳ ಆಧಾರದಿಂದಲೇ ತೀಕ್ಷ್ಣವಾಗಿ ಖಂಡಿಸಿದರು

ರಾಮಮೋಹನರು, ಸಹಗಮನ ನಿರೋಧ ಚಳುವಳಿಗೆ ಸಂಬಂಧಿಸಿದಂತೆ, ಹಿಂದೂ ಸ್ತ್ರೀಯರ ಗುಣಾತಿಶಯಗಳನ್ನು ಕುರಿತು ೧೮೧೮ ರಲ್ಲಿ ಒಂದು ಲೇಖನವನ್ನು ಬರೆದರು. ಅದರ ಸಾರಾಂಶವು ಈ ರೀತಿಯಿದೆ.—

ಸ್ತ್ರೀಯರು ಸಾಮಾನ್ಯವಾಗಿ ದೇಹಶಕ್ತಿಯಲ್ಲಿ ಮನುಷ್ಯರಿಗಿಂತಲೂ ಕಡಿಮೆಯಾದವರು ಆದುದರಿಂದ ಪುರುಷವರ್ಗವು ಸ್ತ್ರೀಯರ ಅಬಲತೆಯನ್ನು ನೆಪಮಾಡಿಕೊಂಡು ಅವರಿಗೆ ಸಹಜವಾಗಿ ಸಲ್ಲಬೇಕಾಗಿರುವ ಉತ್ತಮ ಸ್ಥಾನವನ್ನು ಕೊಡದೆ ಸ್ತ್ರೀಯರು ಅಂಥ ಯೋಗ್ಯತೆಗೆ ಅನರ್ಹರೆಂದು ಹೇಳುವರು. ಸ್ತ್ರೀಯರ ಬುದ್ಧಿಯು ಕೀಳಾದುದೆಂಬುದಕ್ಕೆ ಅವರ ಬುದ್ಧಿಯನ್ನು ಯಾವ ಅವಕಾಶದಲ್ಲಿ ಪರೀಕ್ಷಿಸಿದ? ಪರೀಕ್ಷಿಸದಿದ್ದಲ್ಲಿ ಅವರಿಗೆ ತಿಳಿವಳಿಕೆಯಿಲ್ಲವೆಂದು ಆಕ್ಷೇಪಿಸುವುದೇಕೆ? ಹೇಳಿಕೊಟ್ಟ ವಿದ್ಯಾಬುದ್ಧಿಗಳನ್ನು ಯಾವನಾದರೂ ಗ್ರಹಿಸದಿದ್ದಲ್ಲಿ ಅಥವಾ ಗ್ರಹಿಸಿದ್ದನ್ನು ಜ್ಞಾಪಕದಲ್ಲಿಟ್ಟುಕೊಳ್ಳದಿದ್ದರೆ ಅಂಥವನನ್ನು ಬುದ್ಧಿಯಿಲ್ಲದವನೆಂದು ಹೇಳಬಹುದು ಆದರೆ ಸಾಮಾನ್ಯವಾಗಿ ಸ್ತ್ರೀಯರಿಗೆ ವಿದ್ಯಾಬುದ್ಧಿಗಳನ್ನು ಹೇಳಿಸದೆಯೇ ಇಟ್ಟಿರುವುದರಿಂದ ಅವರನ್ನು ಬುದ್ಧಿಹೀನರೆಂದು ಹೇಳಲಾಗದು. ಸ್ತ್ರೀಯರಲ್ಲಿ ಪ್ರಸಿದ್ಧ ವಿದ್ವಾಂಸರಿರಲಿಲ್ಲವೇ? ಲೀಲಾವತಿ ಮತ್ತು ಭಾನುಮತಿ ಎಂಬವರು ಶಾಸ್ತ್ರವಿದ್ಯೆಯಲ್ಲಿ ಪರಿಣತರಾಗಿದ್ದವರು ಯಾಜ್ಞವಲ್ಕ್ಯರು ತಮ್ಮ ಹೆಂಡತಿಯಾದ ಮೈತ್ರೇಯಿದೇವಿಗೆ ಕಠಿಣತರವಾದ ಬ್ರಹ್ಮವಿದ್ಯೆಯನ್ನು ಹೇಳಿಕೊಟ್ಟರೆಂದೂ ಆಕೆಯು ಅದನ್ನು ಗ್ರಹಿಸಿ ಜ್ಞಾನ ಸಾಧಿಸಿದಂತೆಯೂ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿಲ್ಲವೆ?

ಎರಡನೆಯದಾಗಿ, ಸ್ತ್ರೀಯರು ದೃಢಮನಸ್ಕರಲ್ಲವೆಂಬ ಆಕ್ಷೇಪಣೆ ಅತ್ಯಸ್ತ್ಯವಾದುದು ಮರಣವೆಂದರೆ ಗಂಡಸೂ ಭಯಪಟ್ಟಿರುವ ಈ ದೇಶದಲ್ಲಿ ಹೆಂಗಸು ತನ್ನ ದೃಢಮನಸ್ಸಿನಿಂದ ಮೃತನಾದ ಗಂಡನ ಜೊತೆಯಲ್ಲಿ ತಾನೂ ಸಾಯಲು ಸಿದ್ಧಳಾಗುವಳು. ಆದರೂ ಹೆಂಗಸರನ್ನು ಮನೋದಾರ್ಢ್ಯವಿಲ್ಲದವರೆಂದು ಆಕ್ಷೇಪಿಸುವುದಾಗಿದೆ

ಮೂರನೆಯದಾಗಿ, ಅವರ ನಂಬಿಕೆಯ ವಿಷಯದಲ್ಲಿ ಸ್ತ್ರೀಪುರುಷರಿಬ್ಬರ ನಡೆವಳಿಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರಲ್ಲಿ ಯಾರು ಪ್ರೀತಿಘಾತುಕ

ರೆಂಬುದು ವ್ಯಕ್ತವಾಗುವುದು. ಪ್ರತಿಯೊಂದು ಊರಿನಲ್ಲಿಯೂ ಪುರುಷರಿಂದ ವಂಚಿತರಾದ ಸ್ತ್ರೀಯರ ಸಂಖ್ಯೆಯನ್ನೂ ಸ್ತ್ರೀಯರಿಂದ ವಂಚಿತರಾದ ಪುರುಷರ ಸಂಖ್ಯೆಯನ್ನೂ ಹೋಲಿಸಿ ನೋಡಿದಲ್ಲಿ, ವಂಚಿತರಾದ ಸ್ತ್ರೀಯರ ಸಂಖ್ಯೆಯು ಮತ್ತೊಂದಕ್ಕಿಂತ ಹತ್ತರಷ್ಟಾಗುವುದರಲ್ಲಿ ಸಂದೇಹವಿಲ್ಲ. ಪುರುಷರು ಸಾಮಾನ್ಯವಾಗಿ ಓದು ಬರಹ ಬಲ್ಲವರು ಮತ್ತು ಸಾಮಾಜಿಕವ್ಯವಹಾರಗಳನ್ನು ನಡೆಸಬಲ್ಲವರು; ಆದರೂ ಅವರು ಸ್ತ್ರೀಯರು ಆಗಾಗ್ಗೆ ಮಾಡಬಹುದಾದ ತಪ್ಪುಗಳನ್ನೇ ಮಾಡುವರು. ಆದರೆ ಅವರು ಅವುಗಳನ್ನು ಅಪರಾಧಗಳೆಂದು ಭಾವಿಸುವುದಿಲ್ಲ. ಸ್ತ್ರೀಯರಲ್ಲಿರುವ ಒಂದು ತಪ್ಪನ್ನು ಒಪ್ಪಿಕೊಳ್ಳಬೇಕು. ಅದೇನೆಂದರೆ: ಇತರರಲ್ಲಿಯೂ ತಮ್ಮಂತೆಯೇ ಮೋಸವಿಲ್ಲವೆಂದು ಭಾವಿಸಿ, ತಮ್ಮ ಅಂತರಂಗವನ್ನು ಪುರುಷರಿಗೆ ಬಿಚ್ಚಿಹೇಳಿ ಕೊನೆಗೆ ಬಹಳ ಕಷ್ಟಕ್ಕೆ ಈಡಾಗುವುದು. ಇದರಿಂದ ಕೆಲವರು ಆತ್ಮಹತ್ಯೆಯನ್ನೂ ಮಾಡಿಕೊಳ್ಳಬೇಕಾಗುವುದು.

ನಾಲ್ಕನೆಯದಾಗಿ, ಅವರ ರಾಗೋದ್ರೇಕದ ವಿಷಯದಲ್ಲಿ, ಮದುವೆಯ ಪದ್ಧತಿಗಳನ್ನು ವಿಚಾರ ಮಾಡಿದರೆ ಇದು ವ್ಯಕ್ತವಾಗುವುದು. ಒಬ್ಬ ಪುರುಷನು ಎರಡು ಮೂರುಸಲ, ಕೊನೆಗೆ ಹತ್ತುಸಲ, ಮದುವೆಯಾಗಬಹುದು. ಸ್ತ್ರೀಯು ಒಬ್ಬ ಪುರುಷನನ್ನು ಮಾತ್ರ ಮದುವೆಯಾಗತಕ್ಕವಳು; ಅವನು ಸತ್ತಲ್ಲಿ ಐಹಿಕ ಸುಖಗಳನ್ನು ತ್ಯಜಿಸಿ ಅವನನ್ನು ಹಿಂಬಾಲಿಸಲು ಇಚ್ಛಿಸುವಳು ಅಥವಾ ಸಂನ್ಯಾಸಿನಿಯಾಗಿ ಜೀವಿಸುವಳು.

ಐದನೆಯದಾಗಿ, ಅವರಿಗೆ ಸದ್ಗುಣ ಭಾವನೆಯಿಲ್ಲವೆಂಬ ಆಕ್ಷೇಪಣೆಯು ನ್ಯಾಯವಾದುದಲ್ಲ. ಅವರು ಅನುಭವಿಸುವ ಕಷ್ಟ, ನಿಂದೆ, ತಿರಸ್ಕಾರ, ಮನೋವ್ಯಥೆಗಳಲ್ಲಿ ಅವರ ಸದ್ಗುಣವೇ ಅವರಿಗೆ ಸ್ಥೈರ್ಯಕೊಡತಕ್ಕದ್ದಾಗಿದೆ. ಎಷ್ಟು ಜನ ಉತ್ತಮವರ್ಗದ ಬ್ರಾಹ್ಮಣರು ಹಣಕ್ಕೋಸ್ಕರವಾಗಿಯೇ ಹತ್ತು ಹದಿನೈದು ಸಲ ಮದುವೆ ಮಾಡಿಕೊಳ್ಳುವವರಿಲ್ಲ. ಅವರು ಮದುವೆ ಮಾಡಿಕೊಳ್ಳುವವರಲ್ಲಿ ಅನೇಕರ ಮುಖವನ್ನು ಮದುವೆಯ ದಿನವಾದಮೇಲೆ ನೋಡುವುದಿಲ್ಲ; ಮತ್ತೆ ಕೆಲವರನ್ನು ತಮ್ಮ ಜೀವಮಾನದಲ್ಲಿ ಮೂರು ನಾಲ್ಕು ಸಲ ಮಾತ್ರ ನೋಡುವರು. ಆದರೂ ಆ ಸ್ತ್ರೀಯರಲ್ಲಿ ಬಹುಮಂದಿ ತಮ್ಮ ಗಂಡಂದಿರಿಂದ ಏನನ್ನೂ ನಿರೀಕ್ಷಿಸದೆ ತಂದೆಯ ಅಥವಾ ಅಣ್ಣನ ಸಹಾಯದಿಂದ ಜೀವನವನ್ನು ನಡೆಸುತ್ತ ತೊಂದರೆ ಪಡುತ್ತ ತಮ್ಮ ಶೀಲವನ್ನು ಕಾಪಾಡಿಕೊಳ್ಳುವರು. ಒಂದುವೇಳೆ ತಾವು ಮದುವೆಯಾದ ಹೆಂಡತಿಯರನ್ನು ತಮ್ಮಲ್ಲಿಯೇ ವಾಸಕ್ಕೆಂದು ಕರೆತಂದರೆ ಅವರು ಅನುಭವಿಸುವ ತೊಂದರೆ ಎಷ್ಟು? ಮದುವೆಯಲ್ಲಿ ಪತ್ನಿಯು ಪತಿಯ ಅರ್ಧಾಂಗಿಯೆಂದು ಎಣಿಸಲ್ಪಟ್ಟರೆ ನಡೆವಳಿಯಲ್ಲಿ ಅವರು ಪ್ರಾಣಿಗಳಿಗಿಂತ ಹೀನವಾದ ಮರ್ಯಾದೆಯನ್ನು ಪಡೆಯುವರು. ಹೆಂಗಸಾದವಳು ಮನೆಯಲ್ಲಿನ ಕೆಲಸಕ್ಕಾಗಿ

ಣಿಯ ಮಿತಳಾಗುವಳು. ಬೆಳಗಿನಿಂದ ರಾತ್ರಿಯವರೆಗೂ ದುಡಿಯುತ್ತಿರಬೇಕಾಗುವುದು. ತಾವು ಮಾಡುವ ಅಡಿಗೆ ಉಪಚಾರಗಳಲ್ಲಿ ಎಳ್ಳಷ್ಟು ತಪ್ಪಾದರೆ ಗಂಡನಿಂದಲೂ ಅತ್ತೆ ಮೊದಲಾದವರಿಂದಲೂ ಏಟು, ನಿಂದೆಗೆ ಒಳಗಾಗುವುದಿಲ್ಲ. ಶ್ರೀಮಂತರಲ್ಲದವರ ಮನೆಗಳಲ್ಲಿ ದನಕರುಗಳನ್ನು ನೋಡಿಕೊಳ್ಳುವ ಮತ್ತು ಬೆರಣಿತಟ್ಟುವ ಕೆಲಸವೂ ಅವರಿಗೇ ಸೇರಿದ್ದು. ಪತಿಯು ಶ್ರೀಮಂತನಾದರೆ ಪತ್ನಿಯ ಕಣ್ಣೆದುರಿಗೇ ಭೋಗಲಾಲಸೆಯಲ್ಲಿ ಮಗ್ನನಾಗುವನು. ಅವರ ಸದ್ಗುಣದಿಂದಲೇ ಅವರು ಇಷ್ಟು ಕಷ್ಟಗಳನ್ನೂ ಸಹಿಸುವುದು. ಒಂದುವೇಳೆ ಈ ಕಷ್ಟಗಳನ್ನು ತಪ್ಪಿಸಿಕೊಳ್ಳಲು ಗಂಡನ ಮನೆಯನ್ನು ಬಿಟ್ಟು ಹೋದರೆ ನ್ಯಾಯಸ್ಥಾನದ ಸಹಾಯದಿಂದ ಆಕೆಯನ್ನು ಒಂದಕ್ಕೆ ಬರಮಾಡಿಕೊಳ್ಳುವನು. ಅವಳು ತನ್ನ ಮನೆ ಬಿಟ್ಟು ಹೋದುದಕ್ಕಾಗಿ ಪ್ರತೀಕಾರ ಮಾಡಲು ಎಲ್ಲ ಪ್ರಯತ್ನಗಳನ್ನೂ ಮಾಡುವನು. ಕೊನೆಗೆ ಗೋಪ್ಯವಾಗಿ ಕೊಲೆಯನ್ನೂ ಮಾಡುವನು. ಸ್ತ್ರೀಯರ ಸ್ಥಿತಿಯು ಈ ರೀತಿ ಇದ್ದರೂ ಇತರ ವಿಷಯದಲ್ಲಿ ಪ್ರಗತಿಗೆ ಕೊರತೆ ಇಲ್ಲದಿರುವುದು ನನಗೆ ದುಃಖಕರವಾಗಿದೆ."

ವಿಧವಾ ವಿವಾಹವೂ ರಾಮಮೋಹನರ ಗಮನಕ್ಕೆ ಬರದೆ ಇರಲಿಲ್ಲ. ಬಾಲವಿಧವಾ ವಿವಾಹವು ಆಚರಣೆಗೆ ಬರಬೇಕೆಂದು ಅವರು ತಮ್ಮ ಸ್ನೇಹಿತರಲ್ಲಿ ಹೇಳುತ್ತಿದ್ದರಂತೆ. ಆದರೆ ಅವರು ವಿದೇಶಕ್ಕೆ ಹೋಗಬೇಕಾಗಿದ್ದುದರಿಂದ ಆ ವಿಷಯದಲ್ಲಿ ಹೆಚ್ಚು ಆಸಕ್ತಿ ವಹಿಸಲು ಸಾಧ್ಯವಾಗಲಿಲ್ಲ. ವಿಧವಾ ವಿವಾಹವನ್ನು ಅನುಮೋದಿಸುವ ಕಾನೂನು ಜಾರಿಗೆ ಬಂದಿದ್ದರೂ ಅದನ್ನು ಆಚರಿಸುತ್ತಿದ್ದವರು ಕೇವಲ ಸ್ವಲ್ಪಮಂದಿ. ರಾಮಮೋಹನರು ಸೀಮೆಯಿಂದ ಹಿಂತಿರುಗಿ ಬಂದಮೇಲೆ ಆ ಪದ್ಧತಿಯನ್ನು ಪ್ರಚಾರಕ್ಕೆ ತರುವರೆಂಬ ಸುದ್ದಿ ದೇಶದಲ್ಲಿ ಹರಡಿತ್ತು.

ರಾಮಮೋಹನರು ಸೀಮೆಯಿಂದ ಹಿಂತಿರುಗಿ ಬಂದಿದ್ದಲ್ಲಿ ದೇಶದಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಮತ್ತಷ್ಟು ಉತ್ತೇಜನವು ದೊರೆಯುತ್ತಿತ್ತೆಂದು ಧಾರಾಳವಾಗಿ ಹೇಳಬಹುದು.

ಸಾಮಾಜಿಕ, ಆರ್ಥಿಕ, ವ್ಯಾವಹಾರಿಕ ವಿಷಯಗಳಲ್ಲಿ ಸ್ತ್ರೀಯರಿಗೆ ತಕ್ಕ ಸ್ಥಾನಗೌರವಗಳಿರಲಿಲ್ಲ. ಅವರ ಸ್ಥಿತಿಯು ದುರ್ಗತಿಗೆ ಇಳಿದಿದ್ದುದರಿಂದ ಅವರು ಆತ್ಮಗೌರವವನ್ನೂ ಕಳೆದುಕೊಂಡಿದ್ದರು. ಅವರ ಸ್ಥಿತಿ

ಯನ್ನು ಉತ್ತಮ ಪಡಿಸುವವರೆಗೂ ರಾಮಮೋಹನರಿಗೆ ತೃಪ್ತಿಯಿರಲಿಲ್ಲ. ಅವರು ಕೈಕೊಂಡ ಅನೇಕ ದೇಶೋದ್ಧಾರಕ ಕೆಲಸಗಳಲ್ಲಿ ಇದನ್ನು ಸಾಧಿಸುವುದಾದರೂ ಆಗ ಎಷ್ಟು ಕಷ್ಟವಾಗಿತ್ತೆಂದು ಈಗ ಊಹಿಸಲು ಸಾಧ್ಯವಿಲ್ಲ. ಸ್ತ್ರೀಯರ ಏಳಿಗೆಯ ವಿಷಯದಲ್ಲಿ ಅಡ್ಡಿಯಾಗಿದ್ದವನು ಪುರುಷನೇ ಅಲ್ಲ; ಸ್ತ್ರೀಯೂ ಸೇರಿದ್ದಳು. ನವಭಾರತದಲ್ಲಿ ಸ್ತ್ರೀಯು ಸಮಾಜದಲ್ಲಿ ಉತ್ತಮಸ್ಥಾನವನ್ನೂ ಗೌರವವನ್ನೂ ಪಡೆದಿದ್ದು, ಸಮಾಜದಲ್ಲಿ ಪುರುಷನಿಗೆ ಸರಿಸಮನಾದವಳೆಂದು ಎಣಿಸಲ್ಪಟ್ಟಿದ್ದರೆ, ಅದು ರಾಮಮೋಹನರ ಉದ್ಯಮದಿಂದಲೇ ಆದುದೆಂದು ಧಾರಾಳವಾಗಿ ಹೇಳಬಹುದು.

ರಾಮಮೋಹನರ ಉಪದೇಶಗಳೆಲ್ಲವೂ ಇತರರ ಆಚರಣೆಗೆ ಮಾತ್ರ ಕೊಟ್ಟವುಗಳಲ್ಲ. ಅವರು ತಮ್ಮ ಉಪದೇಶಗಳನ್ನು ತಾವೇ ಆಚರಣೆಗೆ ತಂದರು. ಅವರು ಸ್ತ್ರೀಯರಲ್ಲಿಡಬೇಕೆಂದು ಬೋಧಿಸಿದ ಗೌರವ ಸನ್ಮಾನಗಳಿಗೆ ಅವರ ನಡತೆಯೇ ಜಾಜ್ವಲ್ಯಮಾನವಾದ ನಿದರ್ಶನವಾಗಿದೆ. ತನ್ನ ತಾಯಿಯಾಗಲಿ, ಮಗಳಾಗಲಿ, ಹೆಂಡತಿಯಾಗಲಿ, ಬಂಧುಗಳಾಗಲಿ—ಎಲ್ಲರನ್ನೂ ಬಹಳ ಮರ್ಯಾದೆಯಿಂದ ಕಾಣುತ್ತಿದ್ದುದು ಅವರ ಸುಗುಣಗಳಲ್ಲಿ ಒಂದು. ತಮ್ಮ ಎದುರಿನಲ್ಲಿ ಸ್ತ್ರೀಯರು ನಿಂತಿರುವ ವರೆಗೂ ಅವರು ಕುಳಿತುಕೊಳ್ಳುತ್ತಿರಲಿಲ್ಲ. ಅನೇಕ ಬಿಡುವಿಲ್ಲದ ಕೆಲಸಗಳಲ್ಲಿಯೂ ಕಠಿಣ ವ್ಯಾಸಂಗದಲ್ಲಿಯೂ ಇದ್ದ ರಾಮಮೋಹನರು ದಿನವೂ ಸಂಜೆಯಲ್ಲಿ ತಮ್ಮ ಹೆಂಡತಿಯರು, ಹೆಣ್ಣುಮಕ್ಕಳು ಮತ್ತು ಇತರ ಸ್ತ್ರೀ ಬಂಧುಗಳೊಡನೆ ಸ್ವಲ್ಪ ಹೊತ್ತಾದರೂ ಸರಸದಿಂದ ಮಾತನಾಡುತ್ತಿದ್ದರಂತೆ. ಸ್ತ್ರೀಯರ ಕೊಟಡಿಯೊಳಕ್ಕೆ ಹೋದಾಗ ತಮ್ಮ ಹೆಂಡತಿಯರು ಅವರ ಸ್ಥಳಗಳಲ್ಲಿ ಕುಳಿತುಕೊಳ್ಳುವವರೆಗೂ ತಾವು ತಮ್ಮ ಪೀಠದ ಬಳಿಯಲ್ಲಿಯೇ ನಿಂತಿರುತ್ತಿದ್ದರಂತೆ. ಆಗ ಗೃಹಕೃತ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಕುರಿತು ಮಾತನಾಡುತ್ತಿದ್ದರಂತೆ. ದಿನದ ಆ ಭಾಗವನ್ನು ಸಂಸಾರದಲ್ಲಿನ ಎಲ್ಲರೂ ಹೆಚ್ಚು ಸಂತೋಷಿಸುತ್ತಿದ್ದರು. ಸ್ತ್ರೀಯರೆಲ್ಲರೂ ತಮ್ಮ ದಿನದ ಕೆಲಸಗಳನ್ನು ಮುಗಿಸಿದ ಮೇಲೆ ಸಂತೋಷದಿಂದ ಕಳೆಯಬಹುದಾದ ಕಾಲವನ್ನು ತವಕದಿಂದ ನಿರೀಕ್ಷಿಸುತ್ತಿದ್ದರು. ಅದರಲ್ಲಿ ರಾಮಮೋಹನರ

ಮೊದಲ ಹೆಂಡತಿಯು ನಾಚಿಕೆಯಿಂದ ಹೆಚ್ಚುಹೊತ್ತು ಮಾತುಕತೆಗಳಲ್ಲಿ ಸೇರುತ್ತಿರಲಿಲ್ಲ. ಎರಡನೆಯ ಹೆಂಡತಿಯೇ ಸಂಭಾಷಣೆಯನ್ನು ಮೊದಲು ಮಾಡುತ್ತಿದ್ದಳು. ಇಬ್ಬರು ಸತ್ನಿಯರೂ ಪತಿಯ ಮಹತ್ವವೇನೆಂಬುದನ್ನು ಬಲ್ಲವರಾಗಿದ್ದರು.

ರಾಮಮೋಹನರು ಸ್ತ್ರೀಯರ ಉದ್ಧಾರದಲ್ಲಿ ನಿರತರಾಗಿದ್ದಾಗ ಅವರ ಹಿರಿಯ ಹೆಂಡತಿಯು, ೧೮೨೪ರಲ್ಲಿ, ಆಕಸ್ಮಾತ್ತಾಗಿ ದೈವಗತಿ ಹೊಂದಿದಳು. ಆಕೆಗೆ ಇಬ್ಬರು ಗಂಡು ಮಕ್ಕಳೂ ಒಬ್ಬ ಹೆಣ್ಣು ಮಗಳೂ ಇದ್ದರು. ಆಕೆಯ ಸಮಾಧಿಯ ಮೇಲೆ ಒಂದು ಸ್ತಂಭವನ್ನು ರಾಮಮೋಹನರು ನಿಲ್ಲಿಸಿದರಂತೆ. ಅವರ ದಾಂಪತ್ಯ ಜೀವನವು ಮೊದಲಲ್ಲಿ ಅಷ್ಟು ಸುಖಮಯವಾಗಿದ್ದಂತೆ ತೋರುವುದಿಲ್ಲ. ಏಕೆಂದರೆ ತಂದೆಯು ಅವರಿಗೆ ಒಂಬತ್ತನೆಯ ವರ್ಷದೊಳಗಾಗಿಯೇ ಮೂರು ಮದುವೆಗಳನ್ನು ಮಾಡಿದ್ದನು. ಅದರಲ್ಲಿ ಮೊದಲ ಪತ್ನಿಯು ಚಿಕ್ಕಂದಿನಲ್ಲಿಯೇ ತೀರಿಹೋದಳು. ಇದಾದ ಮೇಲೆ ಒಂದು ವರ್ಷದ ಅಂತರದಲ್ಲಿಯೇ ಎರಡು ಮದುವೆಗಳನ್ನು ಮಾಡಿದನು. ಈ ಬಹುಪತ್ನೀ ವಿವಾಹವು ರಾಮಮೋಹನರಿಗೆ ಸಮ್ಮತವಾಗಿರಲಿಲ್ಲ. ಹಿಂದೆ ನೋಡಿರುವಂತೆ ಅವರು ಏಕಪತ್ನೀ ವಿವಾಹ ಪದ್ಧತಿಯನ್ನು ಉಪದೇಶಿಸಿದರು. ತಮ್ಮ ಉಪದೇಶಕ್ಕೆ ತಾವೇ ವಿರೋಧಿಯಾಗುವುದಕ್ಕೆ ಅವರಿಗೆ ಇಷ್ಟವಿರಲಿಲ್ಲ. ಆದರೂ ರಾಮಮೋಹನರು ಈ ವಿಷಯದಲ್ಲಿ ದೋಷಕ್ಕೆ ಕಾರಣರಲ್ಲ. ತಮ್ಮ ಅಭಿಮತವನ್ನು ಕೇಳದೆಯೇ, ತಮಗೆ ವಿವೇಕ ಒದಗುವ ಮೊದಲೇ, ಅವರಿಗೆ ಮದುವೆಗಳಾಗಿದ್ದುವು. ಆದರೂ ಅವರ ಮೇಲೆ ಆಕ್ಷೇಪಣೆಯು ತೀವ್ರವಾಗಿದ್ದಾಗ, ತಮ್ಮ ಪತ್ನಿಯರಿಂದ ಅಗಲಿ ಬೇರೆ ಇರುತ್ತಿದ್ದರಂತೆ. ಅವರ ಏಕಪತ್ನೀ ವ್ರತದ ಪಕ್ಷಪಾತವು ಎಷ್ಟರ ಮಟ್ಟಿಗೆ ಇದ್ದಿತೆಂದರೆ ತಮ್ಮ ಹತ್ತಿರ ಬಂಧುಗಳ ಪೈಕಿ ಯಾರಾದರೂ ಬಹುಪತ್ನೀ ವಿವಾಹಿತರಿದ್ದರೆ ಅಂತಹವರಿಗೆ ತಮ್ಮ ಆಸ್ತಿಯಲ್ಲಿ ಯಾವ ಭಾಗಕ್ಕೂ ಹಕ್ಕಿಲ್ಲದಂತೆ ಮಾಡಿದರು. ತಮ್ಮ ಇಬ್ಬರು ಪತ್ನಿಯರಲ್ಲಿ ಹಿರಿಯಾಕೆಯು ಮಡಿದ ಮೇಲೆ ಅವರ ಮನಸ್ಸು ನಿರಾಳವಾಯಿತು.

ದಕ್ಷಿಣ ಭಾರತದಲ್ಲಿ ೧೮೨೪ ರ ಸುಮಾರಿನಲ್ಲಿ ಕ್ಷಾಮ ಒದಗಿತು. ಕ್ಷಾಮಪೀಡಿತರ ಸಹಾಯಾರ್ಥವಾಗಿ ಹಣ ಶೇಖರಿಸಲು ಪ್ರಾರ್ಥನಾ ಪತ್ರಿಕೆಯೊಂದು ಸಿದ್ಧವಾಯಿತು. ಈ ಪ್ರಯತ್ನದಲ್ಲಿಯೂ ರಾಮ ಮೋಹನರೇ ಮುಖಂಡರಾಗಿದ್ದರು. ಆ ಪ್ರಾರ್ಥನಾ ಪತ್ರಿಕೆಗೆ ಬೇರೆ ಬೇರೆ ಮತಗಳಿಗೆ ಸೇರಿದ ಹದಿನಾಲ್ಕು ಮಂದಿಯ ಸಹಿ ಆಯಿತು. ಹಿಂದೂಗಳಿಗೂ ಮಹಮ್ಮದೀಯರಿಗೂ ಕ್ರೈಸ್ತರಿಗೂ ಅನ್ನಛತ್ರಗಳನ್ನು ಏರ್ಪಡಿಸುವುದೇ ಆ ಪ್ರಾರ್ಥನಾ ಪತ್ರಿಕೆಯ ಮುಖ್ಯ ಉದ್ದೇಶವಾಗಿತ್ತು. ಇದರಿಂದ ರಾಮಮೋಹನರ ಪರಮತ ಸಹಿಷ್ಣುತೆಯೂ ದೀನರಲ್ಲಿದ್ದ ಕರುಣೆಯೂ ವ್ಯಕ್ತವಾಗುವುವು.

# ಪ್ರಕರಣ ೮

## ಬ್ರಹ್ಮ ಸಮಾಜ ಸ್ಥಾಪನೆ—ರಾಜಕೀಯ ಸುಧಾರಣೆ —ವಿದೇಶ ಪ್ರಯಾಣ

ವೇದಗಳು ಅದ್ವಿತೀಯ ಬ್ರಹ್ಮನ ಆರಾಧನೆಯನ್ನೇ ಉಪದೇಶಿಸುವುವು ಶಿಷ್ಯನು ಯಾಜ್ಞವಲ್ಕ್ಯರನ್ನು ಕುರಿತು "ದೇವರೆಷ್ಟು ಮಂದಿ ?" ಎಂದು ಕೇಳಲು ಅವರು "ಒಬ್ಬನೇ" ಎಂದು ಉತ್ತರವಿತ್ತರು ಶಿಷ್ಯನು ಪುನಃ "ಅಗ್ನಿ, ವಾಯು, ಆದಿತ್ಯ, ಕಾಲ, ಬ್ರಹ್ಮ, ರುದ್ರ, ವಿಷ್ಣು—ಹೀಗೆ ಅನೇಕರಲ್ಲಿ ಕೆಲವರು ಒಬ್ಬನನ್ನೂ ಮತ್ತೆ ಕೆಲವರು ಹಲವರನ್ನೂ ಪೂಜಿಸುವರು ಇವರಲ್ಲಿ ಯಾರ ಆರಾದನೆಯು ನಮಗೆ ಉತ್ತಮ" ಎಂದು ಕೇಳಲು ಗುರುವರ್ಯರು "ಇವರೆಲ್ಲರೂ ಆ ಬ್ರಹ್ಮನ ಪ್ರತೀಕಗಳು, ಬ್ರಹ್ಮನು ಇವರೆಲ್ಲರನ್ನೂ ಒಳಗೊಂಡಿರುವನು ಮನುಷ್ಯನು ಇವರಲ್ಲಿ ಯಾರನ್ನಾದರೂ ಕುರಿತು ಧ್ಯಾನಮಾಡಬಹುದು, ಪೂಜಿಸಬಹುದು ಅಥವಾ ಪ್ರತೀಕಗಳಾದ ಇವರನ್ನೆಲ್ಲ ನಿರಾಕರಿಸಬಹುದು" ಈ ವಾಕ್ಯಗಳಿಂದ ಉಪನಿಷತ್ತುಗಳ ಉಪದೇಶವೇನೆಂಬುದು ಸ್ಪಷ್ಟವಾಗುವುದು ರಾಮಮೋಹನರ ಕಾಲದಲ್ಲಿ ಈ ವೇದ ಉಪನಿಷತ್ತುಗಳ ತತ್ತ್ವಗಳಿಗೆ ಬದಲಾಗಿ ಜನರು ಪುರಾಣ ಇತಿಹಾಸಗಳಲ್ಲಿ ಉಕ್ತವಾಗಿರುವ ಕೋಟ್ಯನು ಕೋಟಿ ದೇವದೇವತೆಗಳ ಆರಾಧನೆಯಲ್ಲಿ ನಿರತರಾಗಿದ್ದರು ಹೀಗೆ ಹಿಂದೂ ಮತ ತತ್ತ್ವಕ್ಕೂ ರೂಢಿಯಲ್ಲಿದ್ದ ಮತಾಚಾರಕ್ಕೂ ವಿಶೇಷ ಅಂತರವಿತ್ತು ಅಲ್ಲದ ಉಪನಿಷತ್ತುಗಳು ನಿರ್ಗುಣ ನಿರಾಕಾರ ಬ್ರಹ್ಮನ ಆರಾಧನೆಯನ್ನು ವಿಧಿಸುವುವು. ಆದರೆ ಈ ವಿಷಯದಲ್ಲಿಯೂ ವೇದಾಂತಮಾರ್ಗವು ಉತ್ತವಾಗಿ ಮೂರ್ತಿಪೂಜೆಯು ಆಚರಣೆಯಲ್ಲಿತ್ತು

ರಾಮಮೋಹನರು ಮೂರ್ತಿಪೂಜೆಯನ್ನು ವಿರೋಧಿಸಿ ಒಬ್ಬನೇ ಆದ ಪರಬ್ರಹ್ಮನ ಆರಾಧನೆಯನ್ನು ತಮ್ಮ ಚರ್ಚೆಗಳಲ್ಲಿಯೂ ಪುಸ್ತಕಗಳಲ್ಲಿಯೂ ಸಾರಿದರೆಂಬುದನ್ನು ಹಿಂದೆ ನೋಡಿದ್ದೇವೆ

ರಾಮಮೋಹನರ ಧಾರ್ಮಿಕ ಸುಧಾರಣೆಯಲ್ಲಿ ಮುಖ್ಯವಾದುದು ವಿಗ್ರಹಾರಾಧನೆಯ ಖಂಡನೆ. ಹಿಂದೂ ಶಾಸ್ತ್ರಗಳ ಆಧಾರದಿಂದಲೇ ವಿಗ್ರಹಾರಾಧನೆಯನ್ನು ಖಂಡಿಸಿದರು. ಅವರು ಪುರಾಣೋಕ್ತ ಮಾರ್ಗ ವನ್ನು ತ್ಯಜಿಸಿ ವೇದೋಕ್ತ ಪ್ರಮಾಣವನ್ನು ಎತ್ತಿಹಿಡಿದರು. ಹಿಂದೂ ಮತ ತತ್ತ್ವಕ್ಕೆ ಆಧಾರವಾಗಿದ್ದು, ಆದರೆ ಜನರ ಅಜ್ಞಾನದಲ್ಲಿ ಲುಪ್ತವಾ ಗಿದ್ದ, ವೇದಮಾರ್ಗವನ್ನು ಪ್ರಚಾರಕ್ಕೆ ತಂದರು. ಆದುದರಿಂದ ರಾಮ ಮೋಹನರು ನೂತನ ಮತಾಚಾರ್ಯರಲ್ಲ; ಆರ್ಷೇಯ ಮತೋದ್ಧಾರಕ ರೆಂದು ಹೇಳಬಹುದು. ಹಿಂದೂ ಮತಕ್ಕೆ ಆರ್ಷೇಯದ ಪರಿಶುದ್ಧತೆ ಯನ್ನು ಕಲ್ಪಿಸಬೇಕೆಂಬುದೇ ಅವರ ಆಶಯವಾಗಿತ್ತು. ಅವರ "ವೇದಾಂತ" ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿರುವರು:—

"ಹಿಂದೂಗಳ ವಿಗ್ರಹಾರಾಧನೆಯು ಸಮಾಜದಲ್ಲಿ ಉಂಟುಮಾಡಿ ರುವ ಅನುಚಿತವಾದ ಅಥವಾ ಹಾನಿಕರವಾದ ಪದ್ಧತಿಗಳು ಸಮಾಜವನ್ನು ಹೀನ ಸ್ಥಿತಿಗೆ ತರುತ್ತಿರುವುದು ನನ್ನ ಮನಸ್ಸಿಗೆ ಬಂದಂತೆಲ್ಲ ದೇಶೀಯರ ವಿಷಯದಲ್ಲಿ ಕನಿಕರ ಹುಟ್ಟಿ ಅವರನ್ನು ಭ್ರಾಂತಿ ನಿದ್ರೆಯಿಂದ ಎಚ್ಚರಿಸಲು ನನ್ನ ಕೈಯಲ್ಲಾದ ಎಲ್ಲ ಪ್ರಯತ್ನವನ್ನೂ ಮಾಡಲು ಪ್ರೇರಿಸಿದೆ."

ವಿಚಾರ ಪರತೆಯಲ್ಲಿಯೂ ಆಧ್ಯಾತ್ಮಿಕ ವಿಚಾರಗಳಲ್ಲಿಯೂ ದೇಶೀ ಯರು ಅಧೋಗತಿಗೆ ಇಳಿದಿದ್ದುದರಿಂದ ಅವರನ್ನು ಎಚ್ಚರಿಸಿ ಅವರಿಗೆ ತಿಳಿ ವಿನ ಬೆಳಕನ್ನು ನೀಡಲು ವೇದಾಂತದ ತತ್ತ್ವಗಳನ್ನು ಅನುಸರಿಸಿದರು. ವೇದಾಂತದ ಮೂಲ ತತ್ತ್ವಗಳನ್ನು ಗ್ರಹಿಸಬಲ್ಲವರಾದ ವಿದ್ವಾಂಸರು ಸ್ವಲ್ಪ ಮಂದಿ ಮಾತ್ರ ಇದ್ದರು. ಜನ ಸಾಮಾನ್ಯರಲ್ಲಿ ವಿಚಾರಕ್ರಾಂತಿ ಉಂಟು ಮಾಡಬೇಕಾಗಿದ್ದಲ್ಲಿ ವೇದವೇದಾಂತಗಳನ್ನು ಜನ ಸಾಮಾನ್ಯಕ್ಕೆ ಅರ್ಥವಾಗುವ ಭಾಷೆಗಳಲ್ಲಿ ಒದಗಿಸುವ ಆವಶ್ಯಕತೆಯನ್ನು ಕಂಡುಕೊಂ ಡರು. ಆದುದರಿಂದಲೇ ರಾಮಮೋಹನರ ಮುಖ್ಯ ಗ್ರಂಥಗಳು ಎರಡು ಮೂರು ಭಾಷೆಗಳಿಗೆ ಭಾಷಾಂತರವಾಗಿರುವುದು.

ರಾಮಮೋಹನರಿಗೆ ವಿಗ್ರಹಾರಾಧನೆಯ ಖಂಡನೆಯಲ್ಲಿಯೂ ಏಕ ಬ್ರಹ್ಮ ತತ್ತ್ವದ ಸಮರ್ಥನೆಯಲ್ಲಿಯೂ ಎಷ್ಟರಮಟ್ಟಿಗೆ ಭಾವೋದ್ರೇಕ ಇತ್ತೆಂದರೆ, ಯಾರಾದರೂ ವಿಗ್ರಹಗಳನ್ನು ಬೀದಿಗಳಲ್ಲಿ ತೆಗೆದುಕೊಂಡು

ಹೋಗುತ್ತಿದ್ದರೆ ಅವರ ಕಣ್ಣುಗಳಲ್ಲಿ ನೀರು ಕರೆಯುತ್ತಿತ್ತಂತೆ ಮತ್ತು ಅವರು ಆ ಸ್ನೇಹಿತರನ್ನು ಕುರಿತು "ಅಯ್ಯಾ ತಮ್ಮಂದಿರಾ, ನಮ್ಮದು ವಿಶ್ವಮತ, ಅದು ವಿಗ್ರಹಾರಾಧನೆಗಿಂತಲೂ ಬಹಳ ಮೇಲಾದುದು" ಎಂದು ಹೇಳುತ್ತಿದ್ದರಂತೆ

ದ್ವಾರಕಾನಾಥಾ ಠಾಕೂರನಿಗೆ ರಾಮಮೋಹನರಲ್ಲಿ ವಿಶೇಷ ಗೌರವ ಇತ್ತು ಅವನಿಗೆ ಚಿಕ್ಕ ವಯಸ್ಸಿನಲ್ಲಿ ಮತಾಚಾರಗಳಲ್ಲಿ ದೃಢವಾದ ನಂಬಿಕೆಯಿತ್ತು ಆದರೆ ಕಾಲಕ್ರಮದಲ್ಲಿ ರಾಮಮೋಹನರ ಸಹವಾಸದಿಂದ ಈ ನಂಬಿಕೆಯು ಸ್ವಲ್ಪ ಸಡಿಲವಾಯಿತು ಠಾಕೂರನು ದೇವರ ಪೂಜೆಯನ್ನು ಪದ್ಧತಿಯಂತೆ ಮಾಡುತ್ತಿದ್ದನು ಹೀಗೆ ಪೂಜೆಮಾಡುತ್ತಿದ್ದ ವೇಳೆಯಲ್ಲಿಯೇ ರಾಮಮೋಹನರು ಠಾಕೂರನ ಮನೆಗೆ ಬರುತ್ತಿದ್ದರು ಅವರು ಠಾಕೂರನ ಮನೆಯ ಬೀದಿಯ ಕಡೆಗೆ ತಿರುಗುವ ವೇಳೆಗೆ ಅದು ಠಾಕೂರನಿಗೆ ತಿಳಿಯುತ್ತಿತ್ತು ಠಾಕೂರನು ಕೂಡಲೆ ತನ್ನ ಪೂಜೆಯನ್ನು ನಿಲ್ಲಿಸಿ ರಾಮಮೋಹನರನ್ನು ನೋಡಿ ಎದುರುಗೊಳ್ಳಲು ಬರುತ್ತಿದ್ದನಂತೆ ರಾಮಮೋಹನರ ಪ್ರಭಾವವು ಇತರ ಸ್ನೇಹಿತರ ಮೇಲೆ ಅಷ್ಟು ತೀವ್ರವಾಗಿತ್ತು

ದೇವೇಂದ್ರನಾಥ ಠಾಕೂರನು ಅವನ ತಾತನ ಇಷ್ಟದಂತೆ ಒಂದುಸಲ ರಾಮಮೋಹನರನ್ನು ದುರ್ಗಾ ಪೂಜೆಗೆ ಕರೆಯಲು ಹೋದನಂತೆ ರಾಮಮೋಹನರು ತಮ್ಮ ಸ್ವಾಭಾವಿಕ ಉತ್ಸಾಹದಿಂದ 'ನನ್ನನ್ನು ಪೂಜೆಗೆ ಕರೆಯುವುದೆ ?'' ಎಂದರಂತೆ ತಾವು ವಿಗ್ರಹಾರಾಧನೆಯ ದ್ವೇಷಿಗಳಾಗಿದ್ದರೂ ಜನರು ತಮ್ಮನ್ನು ಪೂಜೆಗೆ ಕರೆಯುತ್ತಿದ್ದುದನ್ನು ನೋಡಿ ಆಶ್ಚರ್ಯಪಟ್ಟರು ಬರಿಯ ಔಪಚಾರಿಕ ಆಹ್ವಾನವೆಂದು ಭಾವಿಸಿ ಠಾಕೂರನ ಮನೆಗೆ ಹೋಗಲಿಲ್ಲವಂತೆ

ರಾಮಮೋಹನರು ಒಂದುಕಡೆ ವಿಗ್ರಹಾರಾಧನೆಯನ್ನು ಖಂಡಿಸಿ ಹಿಂದೂ ಧರ್ಮದ ಒಂದು ಲಕ್ಷಣವನ್ನು ಪ್ರಕಾಶಕ್ಕೆ ತಂದರು ಅದೇ ಧರ್ಮದ ಮತ್ತೊಂದು ಲಕ್ಷಣವು ದೇವರು ಒಬ್ಬನೂ ಅದ್ವಿತೀಯನೂ ಆಗಿದ್ದಾನೆ ಎನ್ನುವುದು ಅವರು ಹಿಂದೂ ಮತ ತತ್ತ್ವವನ್ನು ಮಾತ್ರವೇ ಅಲ್ಲದೆ ಇತರ ಮತ ತತ್ತ್ವಗಳನ್ನು ಅಭ್ಯಾಸಮಾಡಿ ಅವುಗಳ

ಲ್ಲಿನ ಕುಂದುಕೊರತೆಗಳನ್ನೂ ವ್ಯಕ್ತಪಡಿಸಿದ್ದರು. ಹಿಂದೂ, ಇಸ್ಲಾಂ ಮತ್ತು ಕ್ರೈಸ್ತಮತಗಳ ತತ್ತ್ವವನ್ನು ಕೂಲಂಕಷವಾಗಿ ಪರಿಶೀಲಿಸಿ ಆ ಮೂರು ಮತಗಳಲ್ಲಿಯೂ ಅಡಗಿದ್ದ ಉತ್ತಮ ತತ್ತ್ವಗಳನ್ನು ಪ್ರಚಾರ ಮಾಡುವ ಪ್ರಯತ್ನದಲ್ಲಿ ತ್ರಿಮತಸ್ಥರ ಆಕ್ಷೇಪ ದ್ವೇಷಗಳಿಗೂ ಈಡಾಗಿದ್ದರೆಂದು ಹಿಂದೆ ಹೇಳಿದೆ.

ರಾಮಮೋಹನರಿಗೆ ಹಿಂದೂ, ಇಸ್ಲಾಂ ಮತ್ತು ಕ್ರೈಸ್ತ ಮತಗಳಲ್ಲಿ ಯಾವ ಒಂದು ಮತವೂ ಉತ್ತಮವೆಂದು ತೋರಲಿಲ್ಲ. ಆದುದರಿಂದ ಅವರು ಆ ಮೂರು ಮತಗಳಲ್ಲಿನ ಸರ್ವೋತ್ಕೃಷ್ಟ ತತ್ತ್ವಗಳನ್ನೂ ಸಂಗ್ರಹಿಸಿ ತಮ್ಮದೇ ಆದ ಒಂದು ಹೊಸ ಮತವನ್ನು ಅನುಸರಿಸಿದರು. ಅದನ್ನೇ ಇತರರಿಗೂ ಅವರು ಉಪದೇಶಿಸಿದರು. ಭಿನ್ನಾತ್ಮಕವಾದ ಮತ ತತ್ತ್ವಗಳ ವ್ಯಾಸಂಗದಿಂದ ಅವರು ವಿಶ್ವಮತ ತತ್ತ್ವವನ್ನು ಸಾರುವಂತಾಯಿತು. ಹಿಂದೂ ಮತ ಗ್ರಂಥಗಳೂ ಜ್ಞಾನ ಭಂಡಾರವೂ ಆದ ವೇದ ಉಪನಿಷತ್ತುಗಳಿಂದ ಎಲ್ಲ ಜೀವಗಳೂ ಮತ್ತು ಪ್ರಪಂಚವೂ ಬ್ರಹ್ಮನಲ್ಲಿ ಐಕ್ಯವಾಗಿರುವುದೆಂಬುವನ್ನೂ, ಇಸ್ಲಾಂ ಮತದಿಂದ ಭಗವಂತನ ದಿವ್ಯ ಪ್ರಭುತ್ವವನ್ನೂ ಎಲ್ಲ ಮನುಷ್ಯರೂ ಸಮಾನರೆಂಬುದನ್ನೂ, ಕ್ರೈಸ್ತಮತದಿಂದ ಮನುಷ್ಯನ ಇಹ ಲೋಕ ಸುಖ ಶಾಂತಿಗಳಿಗೆ ಅವಶ್ಯವಾದ ಸಾಮಾಜಿಕ ಧರ್ಮ ನೀತಿಗಳನ್ನೂ ಸಂಗ್ರಹಿಸಿದ್ದರು. ಅವರ ಮನಸ್ಸು ಯಾವ ಒಂದು ಮತ ತತ್ತ್ವಕ್ಕೂ ಅಧೀನವಾಗಿರಲಿಲ್ಲ. ಅವರು ಎಲ್ಲ ಮತಗಳಿಂದಲೂ ಜ್ಞಾನವನ್ನೂ ಸತ್ಯವನ್ನೂ ಹೀರಿದ್ದರು. ಇದರ ಪರಿಣಾಮವಾಗಿ ಅವರ ಮನಸ್ಸು ವಿಶಾಲವಾದ ವಿಶ್ವತತ್ತ್ವಕ್ಕಾಗಿ ಹಾತೊರೆಯುತ್ತಿತ್ತು. ವರ್ಣನೆಗೆ ಮೀರಿದ, ಆದರೆ ಸರ್ವರಿಂದ ಅಂಗೀಕೃತವಾದ, ಅದ್ವಿತೀಯ ಬ್ರಹ್ಮ ತತ್ತ್ವದಿಂದಲೂ, ಎಲ್ಲ ಮತ ತತ್ತ್ವಗಳ ಸಾರವನ್ನೊಳಗೊಂಡ ಒಂದು ನೂತನ ತತ್ತ್ವಸಾಧನೆಯಿಂದಲೂ, ಉದ್ವೇಗಗೊಂಡಿದ್ದ ಅವರ ಮನಸ್ಸಿಗೆ ಯಾವ ಒಂದು ಮತದಿಂದಲೂ ಸಮಾಧಾನ ಒದಗದೆ ಹೋಯಿತು. ಅವರ ಮನಸ್ಸಿನ ಮೂಸೆಯಲ್ಲಿ ಹಿಂದೂ, ಇಸ್ಲಾಂ ಮತ್ತು ಕ್ರೈಸ್ತ ಮತಗಳು ಒಂದರೊಡನೆ ಒಂದು ಮಿಶ್ರಸಂಮಿಶ್ರಗಳಾಗಿ ಕೊನೆಗೆ ವಿಶ್ವಮತವೆಂಬ ಒಂದು ಹೊಸ ಮತವು ಜನ್ಮತಾಳಿತು. ಅವರ ಮನಸ್ಸು ಬಹುಕಾಲದ

ಶಾಸ್ತ್ರವ್ಯಾಸಂಗದಿಂದಲೂ ಲೋಕಾನುಭವದಿಂದಲೂ ಕೂಡಿ ನವತೇಜಸ್ಸಿನಿಂದ ಹೊಮ್ಮುತ್ತಿತ್ತು ಒಳಗೊಳಗೇ ಕುಮುಲುತ್ತ ಹೊಗೆಯಾಡುತ್ತ ಆಸ್ಫೋಟನಕ್ಕೆ ಕಾದಿದ್ದ ಒಂದು ಅಗ್ನಿ ಪರ್ವತದಂತೆ, ನೂತನ ಪ್ರೇರಣೆಗಳಿಂದಲೂ, ತಮ್ಮ ಸೂಕ್ಷ್ಮ ಜ್ಞಾನದಿಂದಲೂ, ಕಲಕಿದ್ದ ಮನಸ್ಸಿನಿಂದ ಹೊಸ ತತ್ತ್ವದ ಬೆಳಕು ಹುಟ್ಟಿ ಜನಾಂಗವಲ್ಲೆಲ್ಲ ಹರಡಲು ತಕ್ಕ ಸನ್ನಿವೇಶವು ಆವಶ್ಯಕವಾಗಿತ್ತು

ಒಬ್ಬನೂ ಅದ್ವಿತೀಯನೂ ಆದ ಬ್ರಹ್ಮನ ಉಪಾಸನೆಗೂ, ಬ್ರಹ್ಮವಿಷಯಕವಾದ ಚರ್ಚೆ ವಿಚಾರಗಳಿಗೂ, ತಮ್ಮ ಸ್ನೇಹಿತರಿಂದ ಕೂಡಿದ "ಆತ್ಮೀಯ ಸಭೆ" ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದರೆಂಬುದನ್ನು ಹಿಂದೆ ನೋಡಿದ್ದೇವೆ ಆದರೆ ಆ ಸಂಸ್ಥೆಯು ಒಂದೆರಡು ವರ್ಷಗಳಲ್ಲಿಯೇ ಕೊನೆಗಂಡಿತು ರಾಮಮೋಹನರ ಮಗನಮೇಲೆ ಹೂರಿಸಿದ ಮೋಸದ ಸಂಬಂಧವಾದ ವ್ಯವಹಾರದಿಂದಲೂ, ಅವರ ಗೃಹಕೃತ್ಯದ ಇತರ ವ್ಯವಹಾರಗಳಿಂದಲೂ, 'ಸಭೆ'ಯ ಕಾರ್ಯಗಳು ಕ್ರಮವಾಗಿ ನಡೆಯಲು ಅಡ್ಡಿಯಾಯಿತು ಈ ಮಧ್ಯದಲ್ಲಿ ಕ್ರೈಸ್ತ ಏಕಮೂರ್ತಿ ಪಂಗಡಕ್ಕೆ ಸೇರಿದ್ದ ಅವರ ಸ್ನೇಹಿತನಾದ ವಿಲಿಯಂ ಆಡಮ್ಸನೊಂದಿಗೆ ಒಂದು ಹೊಸ ವ್ಯವಸ್ಥೆಯನ್ನು ೧೮೨೧ ರಲ್ಲಿ ಮೊದಲುಮಾಡಿದರು. ಬಂಗಾಳದ "ಹರ್ಕಾರ" ಪತ್ರಿಕೆಯ ಕಛೇರಿಯಲ್ಲಿ ವಿಲಿಯಂ ಆಡಂ ಪ್ರತಿಭಾನುವಾರವೂ ಬೆಳಗ್ಗೆ ಭಗವದಾರಾಧನೆಯನ್ನು ಜರುಗಿಸುತ್ತಿದ್ದನು. ರಾಮಮೋಹನರೂ ಅವರ ಮನೆಯವರೂ ಸ್ನೇಹಿತರೂ ಆ ಆರಾಧನೆಯಲ್ಲಿ ಭಾಗವಹಿಸುತ್ತಿದ್ದರು ರಾಮಮೋಹನರು ಹಿಂದೂ ಏಕಮೂರ್ತಿವಾದಿ ಎಂಬ ಹೆಸರಿಟ್ಟುಕೊಂಡರು ಇದು ಪ್ರತಿಪಕ್ಷಿಗಳ ಆಕ್ಷೇಪ ನಿಂದೆಗಳಿಗೆ ಅವಕಾಶಕೊಟ್ಟಿತು ಇತರ ಪೂಜಾಮಂದಿರಗಳಿರುವಾಗ ಅವನ್ನು ಬಿಟ್ಟು ಕ್ರೈಸ್ತರ ಏಕಮೂರ್ತಿ ಪಕ್ಷದವರ ಆರಾಧನೆಗಳಿಗೇಕೆ ಹೋಗಬೇಕೆಂದು ಪ್ರತಿಪಕ್ಷದವರು ಪ್ರಶ್ನಿಸಿದಾಗ, ರಾಮಮೋಹನರು ತಮ್ಮ ಶಿಷ್ಯ ಚಂದ್ರಶೇಖರದೇವನ ಹೆಸರಿನಲ್ಲಿ ಹೀಗೆ ಉತ್ತರಕೊಟ್ಟರು --

"ಹಿಂದೂಗಳು ದೂಷ್ಯವಾದ ಪದ್ಧತಿಗಳನ್ನು ಹಿಡಿದು ಪದೇ ಪದೇ ಬೋಧಿಸುತ್ತಿರುವ ತತ್ತ್ವಗಳು ನನಗೆ ಬೇಸರಿಕೆಯನ್ನು ಉಂಟುಮಾಡಿವೆ

ಕ್ರೈಸ್ತ ಏಕಮೂರ್ತಿ ವಾದಿಗಳು ಭಗವಂತನೊಬ್ಬನೇ ಎಂದು ನಂಬಿ ಆ ತತ್ತ್ವವನ್ನು ಪ್ರಚಾರಮಾಡುತ್ತಿರುವರು. ಆದೇ ತತ್ತ್ವವನ್ನೇ ಕ್ರೈಸ್ತರ ಪವಿತ್ರ ಮತಗ್ರಂಥಗಳೂ ವೇದಗಳೆಂದು ಹೆಸರು ಪಡೆದಿರುವ ನಮ್ಮ ಪುರಾತನ ಧರ್ಮಗ್ರಂಥಗಳೂ ಸಾರುವುವು.''

ಈ ಏಕಮೂರ್ತಿ ತತ್ತ್ವವೇ ರಾಮಮೋಹನರನ್ನೂ ಕ್ರೈಸ್ತ ಮತೀಯ ನಾಪ ವಿಲಿಯಂ ಆಡಮನನ್ನೂ ಒಂದುಗೂಡಿಸಿದ್ದುದು.

ರಾಮಮೋಹನರಿಗೆ ಅನ್ಯಮತಗಳಲ್ಲಿದ್ದ ಸಮತಾಭಾವವು ಈ ದೇಶ ಪರದೇಶಗಳೆಲ್ಲಿ ಅವರ ಆಪ್ತ ಸ್ನೇಹಿತರಿಗೂ ಕೂಡ ಒಂದು ಸಮಸ್ಯೆಯಾಗಿತ್ತು. ಅವರಿಗಿದ್ದ ಭಾವವೈಶಾಲ್ಯವು ಇತರರಿಗೆ ಇಲ್ಲದಿದ್ದುದೇ ಇದಕ್ಕೆ ಕಾರಣ. ಅವರು ಎಲ್ಲ ಮತಗಳನ್ನೂ ತಮ್ಮ ವಿಶ್ವಮತದೃಷ್ಟಿಯಿಂದ ನೋಡುತ್ತಿದ್ದರು. ಪ್ರತಿಯೊಂದು ಮತದಲ್ಲಿಯೂ ಎಷ್ಟರಮಟ್ಟಿನ ಸತ್ಯವನ್ನು ಕಂಡಿದ್ದರೋ ಅಷ್ಟರಮಟ್ಟಿಗೆ ಆ ಮತದಲ್ಲಿ ಸಾಮರಸ್ಯವನ್ನು ಪಡೆದಿದ್ದರು. ಆದುದರಿಂದಲೇ ಅವರು ಹಿಂದೂಗಳಾಗಿಯೂ ಮಹಮ್ಮದೀಯರಾಗಿಯೂ ಕ್ರೈಸ್ತರಾಗಿಯೂ ತೋರಿದುದು. ತಮ್ಮ ಮನಸ್ಸಿನಲ್ಲಿ ಮೂರು ಮತ ಧರ್ಮಗಳೂ ಹುದುಗಿದ್ದುವೆಂದು ಅವರಿಗೇ ಸ್ಪಷ್ಟವಾಗಿತ್ತು. ತಾವು ಸತ್ತಮೇಲೆ ಹಿಂದೂ, ಇಸ್ಲಾಂ; ಕ್ರೈಸ್ತ—ಈ ತ್ರಿಮತಸ್ಥರೂ ತಮ್ಮನ್ನು ಆಯಾ ಮತಗಳಿಗೆ ಸೇರಿದವರೆಂದು ಸಾರುವುದಾಗಿ ಅವರೇ ನಂದಕಿಶೋರ ಬೋಸನಲ್ಲಿ, ಇಂಗ್ಲೆಂಡಿಗೆ ಪ್ರಯಾಣ ಬೆಳೆಸುವ ಮೊದಲು, ಹೇಳಿಕೊಂಡರಂತೆ. ವಿಗ್ರಹಾರಾಧನೆಯನ್ನೂ ಅನೇಕ ದೇವ ದೇವತೆಯರ ಪೂಜೆಯನ್ನೂ ಖಂಡಿಸುವಾಗ ವೇದಪ್ರಮಾಣವನ್ನೂ, ಕ್ರೈಸ್ತರ ತ್ರಿಮೂರ್ತಿ ತತ್ತ್ವವನ್ನು ಖಂಡಿಸುವಾಗ ಬೈಬಲ್ಲಿನ ಆಧಾರವಾಕ್ಯಗಳನ್ನೂ, ಇಸ್ಲಾಂ ಮತದ ಲೋಪದೋಷಗಳನ್ನು ಖಂಡಿಸುವಾಗ ಕೊರಾನಿನ ವಾಕ್ಯಗಳನ್ನೂ ಎತ್ತಿಹಿಡಿಯುತ್ತಿದ್ದರು. ಈ ಬಗೆಯ ಮನೋವೈಶಾಲ್ಯವೂ ಸಮನ್ವಯ ಭಾವವೂ ಅವರಲ್ಲಿದ್ದಾಗ ಅವರನ್ನು ಎಲ್ಲರೂ ತಮ್ಮ ತಮ್ಮ ಮತೀಯನೆಂದು ಸಾರಿದ್ದೇನೂ ಆಶ್ಚರ್ಯವಲ್ಲ. ಒಂದೇ ಮತತತ್ತ್ವದ ಸಂಕುಚಿತಮಾರ್ಗವನ್ನು ಬಿಟ್ಟು ಭಿನ್ನ ಮತಗಳ ಸಮನ್ವಯದ ಹೆದ್ದಾರಿಯನ್ನು ಹಿಡಿದುದು ರಾಮ

ಮೋಹನರ ಒಂದು ಮಹತ್ವವೇ ಸರಿ. ಕ್ರೈಸ್ತ ಮತವನ್ನು ಸಹನೆಯಿಂದಲೂ ಶ್ರದ್ಧೆಯಿಂದಲೂ ಅಭ್ಯಾಸಮಾಡಿ ಆ ಮತತತ್ತ್ವಗಳನ್ನು ಪ್ರಚಾರಮಾಡಲು ತೊಡಗಿದ ಭಾರತೀಯ ಸುಧಾರಕರಲ್ಲಿ ರಾಮಮೋಹನರೇ ಮೊದಲನೆಯವರು. ಅವರಿಗೆ ಹಿಂದೆಯೇ ಸರ್ವಮತ ಸಮನ್ವಯ ಭಾವವಿದ್ದ ಕಬೀರ್, ನಾನಕರಂತಹ ಸುಧಾರಕರಿದ್ದರೂ ಅವರು ರಾಮಮೋಹನರಂತೆ ಕ್ರೈಸ್ತಮತ ಪ್ರಭಾವಕ್ಕೆ ಈಡಾಗಿದ್ದವರಲ್ಲ.

ರಾಮಮೋಹನರ ಕೀರ್ತಿಯು ಹೊರದೇಶಗಳಲ್ಲಿಯೂ ವ್ಯಾಪಿಸಿತ್ತೆಂದು ಹಿಂದೆ ತಿಳಿಸಿದೆ. ಕ್ರೈಸ್ತ ಮತದಲ್ಲಿ ಅವರಿಗಿದ್ದ ಅಭಿಮಾನವೂ, ವಿದೇಶೀಯರಲ್ಲಿದ್ದ ಪ್ರೀತಿ ವಿಶ್ವಾಸಗಳೂ ಅದಕ್ಕೆ ಮುಖ್ಯ ಕಾರಣಗಳು. ಬಾಸ್ಟನ್ ಪಟ್ಟಣದ ಡಾ|| ಟಕ್ಕರ್‌ಮನ್ ಎಂಬವನು ರಾಮಮೋಹನನು ಕ್ರೈಸ್ತನೇ ಎಂದು ಆಡಮನನ್ನು ಪ್ರಶ್ನಿಸಿದನು. ಆಡಮ್ ಅವನಿಗೆ ಹೀಗೆ ಉತ್ತರ ಬರೆದನು —

"ಅವನು ಕ್ರೈಸ್ತನೂ ಹೌದು, ಹಿಂದೂವೂ ಹೌದು. ಕ್ರೈಸ್ತರಲ್ಲಿ ಕ್ರೈಸ್ತ, ಹಿಂದೂಗಳಲ್ಲಿ ಹಿಂದೂ. ನನ್ನ ಮಾತು ಅಸಂಗತವೆಂದಾಗಲಿ ಅಥವಾ ರಾಮಮೋಹನನು ತನ್ನ ಮತವಿಷಯದಲ್ಲಿ ಕಪಟಿಯೆಂದಾಗಲಿ ನೀವು ಹೇಳುವ ಮೊದಲು ಆತನ ಸ್ಥಿತಿಯನ್ನು ಸಂಪೂರ್ಣವಾಗಿ ತಿಳಿಯಬೇಕು. ಅವನು ವಿಗ್ರಹಾರಾಧನೆಯನ್ನು ಖಂಡಿತವಾಗಿಯೂ, ಸಂಪೂರ್ಣವಾಗಿಯೂ, ಬಹಿರಂಗವಾಗಿಯೂ ತ್ಯಜಿಸಿರುವನು, ಆತನು ತನ್ನ ಪ್ರಭಾವ ಸಂಪತ್ತುಗಳನ್ನು ಕ್ರೈಸ್ತಮತಪ್ರಚಾರದಲ್ಲಿ ವಿನಿಯೋಗಿಸುತ್ತಿರುವುದರಿಂದ ವಸ್ತುತಃ ಕ್ರೈಸ್ತನಲ್ಲದಿದ್ದರೂ ಭಾವತಃ ಕ್ರೈಸ್ತನೆಂಬುದರಲ್ಲಿ ಸಂಶಯವಿಲ್ಲ. ಅವನು ತನ್ನ ಆಸ್ತಿಯನ್ನೆಲ್ಲ ನಮ್ಮ ಸಂಸ್ಥೆಗೆ ದಾನಮಾಡಿರುತ್ತಾನೆ, ಅವನು ಕ್ರೈಸ್ತ ಮತವನ್ನು ಮನಃಪೂರ್ವಕವಾಗಿ ಅಂಗೀಕರಿಸದಿದ್ದರೆ ಆ ಮತದ ಕಲ್ಯಾಣಗುಣವನ್ನು ತನ್ನ ದೇಶೀಯರಲ್ಲಿ ಹರಡಲು ತೀವ್ರವಾಗಿ ಆತುರಯುಳ್ಳವನಾಗಿರುತ್ತಿದ್ದನೇ ಎಂಬುದನ್ನು ನಿಮ್ಮ ಊಹೆಗೇ ಬಿಡುತ್ತೇನೆ."

ರಾಮಮೋಹನರ ಮತಾಚಾರವಿಷಯಗಳನ್ನು ಕ್ರೈಸ್ತರು ಹೇಗೆ ಅರ್ಥಮಾಡಿಕೊಂಡಿದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆಡಮನು ಬರೆದ ಮೇಲಿನ ಕಾಗದವನ್ನು ರಾಮಮೋಹನರಿಗೆ ತೋರಿಸಿದಾಗ ಅವರು ಅಲ್ಲಿನ ಅಭಿಪ್ರಾಯಗಳನ್ನು ಒಪ್ಪಿದರಂತೆ.

ಈ ಮಧ್ಯದಲ್ಲಿ ಕ್ಷೀಣಗತಿಗೆ ಇಳಿಯುತ್ತಿದ್ದ ಕ್ರೈಸ್ತ ಏಕಮೂರ್ತಿ ಪಕ್ಷದ ಸಂಸ್ಥೆಯ ಪುನರುದ್ಧಾರಕ್ಕೆ ಪ್ರಯತ್ನಗಳು ನಡೆದುವು. ಅದುವರೆಗೆ ರಾಮಮೋಹನರು ಆ ಸಂಸ್ಥೆಯ ಸಭೆಗಳಲ್ಲಿ ಭಾಗವಹಿಸುತ್ತಿರಲಿಲ್ಲ. "ಏಕಮೂರ್ತಿ ಪಕ್ಷದ ಪರವಾದ ಒಂದು ನೂರು ಕಾರಣಗಳು" ಎಂಬ ಲೇಖನವು ೧೮೨೬ ರಲ್ಲಿ ಆ ಸಂಸ್ಥೆಯವರಿಂದ ಪ್ರಚುರವಾಯಿತು. ರಾಮಮೋಹನರು ಅದನ್ನು ಓದಿ ಬಹುವಾಗಿ ಮೆಚ್ಚಿದರು. ಅದನ್ನು ತಮ್ಮ ಮುದ್ರಾಲಯದಲ್ಲಿ ಸ್ವಂತ ವೆಚ್ಚದಿಂದ, ಉಚಿತವಾಗಿ ಹಂಚಲು, ಪುನಃ ಮುದ್ರಿಸಿದರು. ಮುಂದಿನ ವರ್ಷ, ೧೮೨೭ನೆಯ ಆಗಸ್ಟ್ ೩ನೆಯ ತಾರೀಖಿನ ದಿನ, ಏಕಮೂರ್ತಿ ಸಂಸ್ಥೆಯ ಕಾರ್ಯವು ಪುನಃ ಪ್ರಾರಂಭವಾಯಿತು. ಪ್ರತಿ ಭಾನುವಾರವೂ ಪೂಜೆ ಮತ್ತು ಆರಾಧನೆಗಳು ಮೊದಲಾದುವು. ಇದಕ್ಕಾಗಿ "ಹರ್ಕಾರ" ಪತ್ರಿಕೆಯ ಕಛೇರಿಯಲ್ಲಿ ಒಂದು ಕೊಟಡಿಯನ್ನು ಬಾಡಿಗೆಗೆ ತೆಗೆದುಕೊಳ್ಳಲಾಯಿತು. ಉಪಾಸನಾ ಸಭೆಗಳಿಗೆ ರಾಮಮೋಹನರೂ ಅವರ ಮನೆಯವರೂ ಆಪ್ತ ಸ್ನೇಹಿತರೂ ಸೇರುತ್ತಿದ್ದರು. ರಾಮಮೋಹನರ ಮಗ ರಾಧಾಪ್ರಸಾದನು ಅದಕ್ಕೆ ಮೊದಲೇ ಆಂಗ್ಲೋ-ಹಿಂದೂ ಶಾಲೆಯ ಸಮೀಪದಲ್ಲಿ ಒಂದು ಪೂಜಾ ಮಂದಿರವನ್ನೂ ಒಂದು ಪಾಠಶಾಲೆಯನ್ನೂ ಕಟ್ಟಲು ನಿವೇಶವನ್ನು ಕೊಟ್ಟಿದ್ದನು. ಆ ಮಂದಿರವನ್ನು ಕಟ್ಟಲು ೩-೪ ಸಾವಿರ ರೂಪಾಯಿಗಳು ಬೇಕಾದೀತೆಂದು ಅಂದಾಜಾಗಿತ್ತು. ಇಷ್ಟು ಹಣವನ್ನೂ ರಾಮಮೋಹನರು ಚಂದಾಮೂಲಕ ಶೇಖರಿಸುವರೆಂಬ ನಂಬಿಕೆಯು ವಿಲಿಯಂ ಆಡಂ ಮೊದಲಾದ ಕ್ರೈಸ್ತ ಏಕಮೂರ್ತಿ ವಾದಿಗಳಿಗಿತ್ತು. ಅದೇ ವರ್ಷದ ನವೆಂಬರ್ ತಿಂಗಳಲ್ಲಿ ಸಾಯಂಕಾಲದ ಪೂಜೆಯ ಏರ್ಪಾಟೂ ಪ್ರಾರಂಭವಾಯಿತು. ಆದರೆ ಈ ಪ್ರಯತ್ನಗಳೊಂದೂ ಫಲಿಸಲಿಲ್ಲ. ಈ ಪೂಜಾ ಸಭೆಗಳಿಗೆ ಹೆಚ್ಚು ಜನ ಸೇರುತ್ತಿರಲಿಲ್ಲ. ಆ ಸಂಸ್ಥೆಗೆ ಸೇರಿದ್ದವರಲ್ಲಿಯೇ

ಹೆಚ್ಚು ಆಸಕ್ತಿ ಇರಲಿಲ್ಲ. ಅದೇ ಸಮಯದಲ್ಲಿ ಆರಾಧನೆಯನ್ನು ಬಂಗಾಳಿ ಭಾಷೆಯಲ್ಲಿ ನಡೆಸಲು ಬೇರೆ ಒಂದು ಮಂದಿರವನ್ನು ಕಟ್ಟಬೇಕೆಂಬ ಸಲಹೆಯೂ ಬಂತು. ಇಂಗ್ಲಿಷನ್ನು ಬಿಟ್ಟು ಬಂಗಾಳಿಯಲ್ಲಿ ಆರಾಧನೆಯನ್ನು ನಡೆಸಬೇಕೆಂಬುದಕ್ಕೆ ಹೆಚ್ಚು ಆಕ್ಷೇಪಣೆ ಬಂತು. ದೇಶಭಾಷೆಯು ಆರಾಧನೆಯಂತಹ ಗೌರವಾರ್ಹವಾದ ಕೆಲಸಕ್ಕೆ ಅನರ್ಹವೆಂದೂ, ಬಂಗಾಳಿಯಲ್ಲಿ ಹೇಳಿದ್ದಾಗಲಿ ಬರೆದದ್ದಾಗಲಿ ಅಲ್ಪವೆಂದೂ ನಿಂದಾಸ್ಪದವೆಂದೂ ಜನರಿಂದ ಎಣಿಸಲ್ಪಡಬಹುದೆಂದೂ, ವಿಲಿಯಂ ಆಡಂ ಮೊದಲಾದವರು ಭಾವಿಸಿದರು. ಪ್ರಾಚೀನ ಭಾಷೆಗಳಾದ ಸಂಸ್ಕೃತ, ಪಾರ್ಸಿ ಮತ್ತು ಆಳರಸರ ಭಾಷೆಯಾದ ಇಂಗ್ಲಿಷ್——ಇವು ಮಾತ್ರ ಜನರ ಗೌರವಕ್ಕೆ ಪಾತ್ರವಾದುವೆಂದು ಎಣಿಸಲ್ಪಟ್ಟಿತ್ತು.

ಕ್ರೈಸ್ತ ಏಕಮೂರ್ತಿ ಸಂಸ್ಥೆಯು ಹೀಗೆ ಹೀನಸ್ಥಿತಿಗೆ ಬರುತ್ತಿರಲು ಆಡಮನು ಅದನ್ನು ಪುನರುಜ್ಜೀವನಗೊಳಿಸಲು ಮತ್ತೊಂದು ಪ್ರಯತ್ನವನ್ನು ನಡೆಸಿದನು. ಕ್ರೈಸ್ತಸಂಗಡದ ಜೊತೆಗೆ ದೇಶೀಯ ಯುವಕರ ಗುಂಪೊಂದನ್ನು ಕೂಡಿಸಲು ಯತ್ನಿಸಿದನು. ಇವರೆಲ್ಲರಿಗೂ ಹಿಂದೂ ಏಕಮೂರ್ತಿವಾದಿಗಳೆಂಬ ಹೆಸರು ಸಂದಿತು. ರಾಮ ಮೋಹನರೂ ಅವರ ಅನುಯಾಯಿಗಳೂ ಆ ಹೆಸರನ್ನೇ ಧರಿಸಿದರು. ಆ ಹೊಸ ದೇಶೀಯ ಸಂಸ್ಥೆಯನ್ನು ಕುರಿತು ಆಡಮನು ಲಂಡನ್ನಿನಲ್ಲಿನ ತನ್ನ ಸ್ನೇಹಿತನೊಬ್ಬನಿಗೆ ಹೀಗೆ ಬರೆಯುತ್ತಾನೆ —

"ಬ್ರಿಟಿಷ್ ಇಂಡಿಯಾದ ಏಕಮೂರ್ತಿವಾದಿಗಳ ಸಂಸ್ಥೆಗೆ ಅಂಗವಾಗಿ, ಒಬ್ಬದೇವನ ಬಹಿರಂಗ ಪೂಜೆಯಸಲುವಾಗಿ, ದೇಶೀಯ ಏಕಮೂರ್ತಿವಾದಿಗಳ ಸಂಸ್ಥೆಯೊಂದನ್ನು ಕೂಡಿಸುವ ಪ್ರಯತ್ನದಲ್ಲಿರುತ್ತೇನೆ. ಯಾವ ದುರಭಿಪ್ರಾಯವೂ ಹುಟ್ಟದಿರುವುದಕ್ಕಾಗಿ ಕ್ರೈಸ್ತಮತದ ಸಂಪರ್ಕವು ಇದಕ್ಕೆ ಇಲ್ಲದಂತೆ ನೋಡಿಕೊಳ್ಳುವುದು ಅಗತ್ಯವಾಗಿದೆ. ಇದನ್ನು ಸ್ಥಾಪಿಸಿ ನಡೆಸುವುದರಲ್ಲಿ ನಾನು ಜಯಶಾಲಿಯೇ ಆದಲ್ಲಿ ಈ ಸಂಸ್ಥೆಯು ನಮ್ಮ ಅಭಿಪ್ರಾಯಗಳಿಗೆ ಪೋಷಕವೂ ಆಗುವುದು."

ಈ ಸಂಸ್ಥೆಯಿಂದ ಕಲ್ಕತ್ತೆಯಲ್ಲಿ ಕ್ಷೀಣಿಸುತ್ತಿದ್ದ ಕ್ರೈಸ್ತ ಏಕಮೂರ್ತಿ ಪಕ್ಷವು ಹೊಸ ಚೈತನ್ಯ ಪಡೆಯಬಹುದೆಂಬ ಕೊನೆಯ ನಿರೀಕ್ಷೆಯು ಆಡಮ

ನಿಗೆತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ; ಅಲ್ಲದೆ, ಹಿಂದೂಗಳೂ ಕ್ರೈಸ್ತರೂ ಒಂದುಗೂಡಲು ಸಹಾಯಕವಾಗಿ, ಕೊನೆಯಲ್ಲಿ ಕ್ರೈಸ್ತ ತತ್ತ್ವಗಳು ದೇಶದಲ್ಲಿ ನಿಂತರೂ ನಿಲ್ಲಬಹುದೆಂಬ ನಿರೀಕ್ಷೆಯೂ ಇತ್ತು. ಆದರೆ ಹಿಂದೂಗಳು ಆ ಸಂಸ್ಥೆಯನ್ನು ಹೆಚ್ಚು ಆದರದಿಂದ ಕಾಣಲಿಲ್ಲ; ಅವರಿಗೆ ಕ್ರೈಸ್ತರಲ್ಲಿಯೂ ಅವರ ಸಂಸ್ಥೆಗಳಲ್ಲಿಯೂ ಒಂದು ಬಗೆಯ ಸಂಶಯವಿದ್ದೇ ಇತ್ತು. ಹಿಂದೂಗಳು ರಾಮಮೋಹನರ ನೇತೃತ್ವದಲ್ಲಿ ತಾವೇ ಹೊಸ ಮಾರ್ಗವನ್ನು ಅವಲಂಬಿಸುತ್ತಿದ್ದರು.

ಸಂದರ್ಭ ಸನ್ನಿವೇಶಗಳು ಈ ರೀತಿ ಒದಗುತ್ತಿರಲು, ಭಾರತದ ಧಾರ್ಮಿಕ ಚರಿತ್ರೆಯಲ್ಲಿ ಒಂದು ಹೊಸ ಪ್ರಕರಣವೂ, ಭಾರತದ ಧಾರ್ಮಿಕ ಸಂಸ್ಥೆಗಳಲ್ಲಿ ಗಣ್ಯವೂ ಆಗಿರುವ, ಬ್ರಹ್ಮಸಮಾಜದ ಸ್ಥಾಪನೆಗೆ ಕಾರಣವಾದ ಒಂದು ಘಟನೆ ಒದಗಿತು. ಒಂದುದಿನ ಬೆಳಗ್ಗೆ ರಾಮಮೋಹನರು, ಅವರ ಮಕ್ಕಳು, ಬಂಧುಗಳು, ತಾರಾಚಂದ್ರ ಚಕ್ರವರ್ತಿ ಮತ್ತು ಚಂದ್ರಶೇಖರ ದೇವ ಎಂಬ ಇಬ್ಬರು ಶಿಷ್ಯರು—ಇವರೊಂದಿಗೆ ಕ್ರೈಸ್ತ ಏಕಮೂರ್ತಿಪಕ್ಷದ ಪೂಜಾ ಮಂದಿರದಿಂದ ಮನೆಗೆ ಹೋಗುತ್ತಿದ್ದರು. ಅವರ ಶಿಷ್ಯರು "ನಾವೆಲ್ಲ ವಿದೇಶೀಯರ ಪೂಜಾ ಮಂದಿರಕ್ಕೆ ಹೋಗಬೇಕಾದ ಆವಶ್ಯಕತೆಯೇನಿದೆ? ನಮಗಾಗಿ ನಾವೇ ಒಂದು ಪೂಜಾಮಂದಿರವನ್ನು ಏರ್ಪಡಿಸಿಕೊಳ್ಳಬೇಕು.'' ಎಂದರು. ತಮ್ಮ ಅಭಿಪ್ರಾಯಗಳಿಗೆ ಒಪ್ಪುವ ಪೂಜಾ ಮಂದಿರವು ತಮ್ಮಲ್ಲಿಯೇ ಇಲ್ಲದಿರುವುದರಿಂದ ಕ್ರೈಸ್ತರ ಪೂಜಾ ಮಂದಿರಕ್ಕೆ ಹೋಗಬೇಕಾಗಿದೆಯೆಂದು ಅವರು ಆಕ್ಷೇಪಿಸಿದರು. ಅವರ ಆಕ್ಷೇಪವು ರಾಮಮೋಹನರ ಮನಸ್ಸನ್ನು ಆಕರ್ಷಿಸಿತು. ಇಂಥ ಒಂದು ಸ್ಫೂರ್ತಿಗಾಗಿಯೇ ಸಮಯ ಕಾಯುತ್ತಿದ್ದ ರಾಮಮೋಹನರು ಕೂಡಲೇ ಕೆಲವು ಸ್ನೇಹಿತರ ಸಲಹೆಯನ್ನು ಪಡೆದರು. ಬೇರೆ ಸಂಸ್ಥೆಯನ್ನು ಸ್ಥಾಪಿಸುವುದರಲ್ಲಿ ಇರಬಹುದಾದ ಸಾಧಕ ಬಾಧಕಗಳನ್ನೂ, ಆ ಕಾರ್ಯಸಾಧನೆಗೆ ಹೇಗೆ ಮುಂದುವರಿಯಬೇಕೆಂಬುದನ್ನೂ, ಚರ್ಚಿಸುವುದಕ್ಕೆ ಅವರ ಮನೆಯಲ್ಲಿಯೇ ಒಂದು ಸಭೆ ಏರ್ಪಾಡಾಯಿತು. ಅದೇ ಮುಂದಿನ ಬ್ರಹ್ಮಸಮಾಜಕ್ಕೆ ಅಂಕುರವೆಂದು ಹೇಳಬಹುದು. ಆ ಸಭೆಗೆ ದ್ವಾರಕಾನಾಥ ಠಾಕೂರ್, ಕಾಳಿನಾಥ ಮುನ್ಷಿ, ಪ್ರಸನ್ನಕುಮಾರ ಠಾಕೂರ್ ಮೊದಲಾದವರು ಬಂದಿದ್ದರು. ಮತಭೇದವಿಲ್ಲದೆ ಒಬ್ಬ ದೇವರ

ಪೂಜೆಯನ್ನು ಎಲ್ಲರೂ ನಡೆಸುವುದಕ್ಕಾಗುವಂತೆ ಒಂದು ಮಂದಿರವನ್ನು ಏರ್ಪಡಿಸಬೇಕೆಂದು ನಿಶ್ಚಯವಾಯಿತು. ರಾಮಮೋಹನರ ಶ್ರೀಮಂತ ಸ್ನೇಹಿತರು ದ್ರವ್ಯ ಸಹಾಯವನ್ನು ನೀಡಿದರು. ಕಲ್ಕತ್ತೆಯ "ಫೆರಿಂಗೀ ಕಮಲ್‌ವಸು" ಎಂದು ಪ್ರಸಿದ್ಧನಾಗಿದ್ದ ರಾಮಕಮಲವಸುವಿನ ಮನೆಯನ್ನು ಬಾಡಿಗೆಗೆ ತೆಗೆದುಕೊಂಡರು. ಆ ಭವನದಲ್ಲಿ ೧೮೨೮ ರ ಆಗಸ್ಟ್ ೨೦ನೆಯ ತಾರೀಖಿನ ದಿನ ಸಮಾಜಕ್ಕೆ ಅಂಕುರಾರ್ಪಣವಾಯಿತು. ತಾರಾಚಂದ್ರ ಚಕ್ರವರ್ತಿಯೇ ಸಂಸ್ಥೆಯ ಮೊದಲನೆಯ ಕಾರ್ಯದರ್ಶಿ ಆದನು. ಸತ್ಯಾನ್ವೇಷಣೆಯಲ್ಲಿ ತೊಡಗಿದ್ದ ಯುವಕರ ಗುಂಪಿಗೆ ಹೊಸ ಶಕ್ತಿ ಉತ್ಸಾಹಗಳು ಬಂದುವು.

ಹೀಗೆ ಮೊದಲಾದ ಬ್ರಹ್ಮ ಸಮಾಜಕ್ಕೆ ಸದಸ್ಯರು ಉಪಾಸನೆಗಾಗಿ ಪ್ರತಿ ಶನಿವಾರವೂ ಕೂಡಿ ಸೇರುತ್ತಿದ್ದರು. ಅಲ್ಲಿನ ಕಾರ್ಯಕ್ರಮವು ಈ ರೀತಿ ಇತ್ತು. ವೇದಘೋಷ, ಉಪನಿಷತ್ತಿನ ಭಾಗಗಳ ಪಠನೆ ಮತ್ತು ಅದರ ಸಂಬಂಧವಾದ ಚರ್ಚೆ, ಇಬ್ಬರು ಆಂಧ್ರ ಬ್ರಾಹ್ಮಣರು ವೇದಗಳನ್ನು ಪಠಿಸುತ್ತಿದ್ದರು, ಮಹಾಮಹೋಪಾಧ್ಯಾಯ ಉತ್ಸವಾನಂದ ವಿದ್ಯಾವಾಗೀಶನು ಉಪನಿಷತ್ತುಗಳನ್ನು ಓದುತ್ತಿದ್ದನು. ಪಂಡಿತ ರಾಮಚಂದ್ರ ವಿದ್ಯಾವಾಗೀಶನು ಆ ಭಾಗಗಳಿಗೆ ಬಂಗಾಳಿಯಲ್ಲಿ ಅರ್ಥ ವ್ಯಾಖ್ಯಾನಗಳನ್ನು ಹೇಳುತ್ತಿದ್ದನು ಮತ್ತು ರಾಮಮೋಹನರು ತಾವು ಬರೆದ ಧರ್ಮಬೋಧಕ ಹಾಡುಗಳನ್ನೂ ಹಾಡುತ್ತಿದ್ದರು, ಗೋಲಮ್ ಅಬ್ಬಾಸ್ ಎಂಬ ಮುಹಮ್ಮದೀಯನು ವಾದ್ಯವನ್ನು ನುಡಿಸುತ್ತಿದ್ದನು. ಆಗಾಗ್ಗೆ ಮಹಮ್ಮದೀಯ ಮತ್ತು ಕ್ರೈಸ್ತ ಬಾಲಕರು ಪಾರ್ಸಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಹಾಡುಗಳನ್ನು ಹೇಳುತ್ತಿದ್ದರು. ಈ ಉಪಾಸನಾ ಸಭೆಗಳಿಗೆ ಅನೇಕ ಹಿಂದೂಗಳು ಸೇರುತ್ತಿದ್ದರು, ಕೆಲವು ವೇಳೆಗಳಲ್ಲಿ ವಿದೇಶೀಯರೂ ಬರುತ್ತಿದ್ದರು.

ಆ ಕಾಲದಲ್ಲಿ ಬ್ರಹ್ಮ ಸಮಾಜದಲ್ಲಿ ಕುಳಿತುಕೊಳ್ಳಲು ಕುರ್ಚಿಗಳಾಗಲಿ ಬೆಂಚುಗಳಾಗಲಿ ಇರಲಿಲ್ಲ. ಜಮಖಾನೆಯ ಮೇಲೆ ಬೆಳ್ಳಗಿರುವ ಬಟ್ಟೆಯನ್ನು ಹಾಸುತ್ತಿದ್ದರು. ಸಮಾಜದ ಕೂಟಗಳಿಗೆ ಬರುತ್ತಿದ್ದವರು ಅದರ ಮೇಲೆಯೇ ಕುಳಿತುಕೊಳ್ಳುತ್ತಿದ್ದರು. ರಾಮಮೋಹನರು ಬದಿರಿನ ಒಂದು ಕಾಲುಮಣೆಯ ಮೇಲೆ ಕುಳಿತುಕೊಳ್ಳುತ್ತಿದ್ದರು.

ಸಮಾಜದ ಕೂಟಗಳಿದ್ದ ದಿನಗಳಲ್ಲಿ ರಾಮಮೋಹನರ ಸ್ನೇಹಿತರೆಲ್ಲರೂ ಅವರ ಮನೆಯಲ್ಲಿ ಸೇರುತ್ತಿದ್ದರು. ಅಲ್ಲಿಂದ ಎಲ್ಲರೂ ಒಟ್ಟಿಗೆ ನಡೆದುಕೊಂಡು ಉಪಾಸನಾ ಮಂದಿರಕ್ಕೆ ಹೋಗುತ್ತಿದ್ದರು. ರಾಮಮೋಹನರು ಹೇಳುತ್ತಿದ್ದರಂತೆ: "ಈ ದೇಶದಲ್ಲಿ ದೇವಮಂದಿರಕ್ಕೆ ಹೋಗುವವರು ಗಾಡಿಗಳಲ್ಲಿ ಕುಳಿತು ಹೋಗುವುದಿಲ್ಲ ; ನಡೆದುಕೊಂಡೇ ಹೋಗುತ್ತಾರೆ. ನಾವೂ ನಡೆದೇ ಹೋಗೋಣ." ಮತ್ತೊಂದು ವಿಶೇಷವೇನೆಂದರೆ ಸಮಾಜಕ್ಕೆ ಹೋಗುವಾಗ ರಾಮಮೋಹನರು ಸಾಮಾನ್ಯ ಉಡುಪಾದ ಪಂಚೆ ಬನಿಯನ್ನುಗಳನ್ನು ಧರಿಸಿ ಹೋಗುತ್ತಿರಲಿಲ್ಲವಂತೆ. ಅಂಥ ಸಂದರ್ಭಗಳಲ್ಲೆಲ್ಲ ಆಸ್ಥಾನಯೋಗ್ಯವಾದ ಉಡುಪನ್ನು ಧರಿಸುತ್ತಿದ್ದರು. ರಾಮಮೋಹನರಿಗೆ ಮಹಮ್ಮದೀಯರ ವೇಷ ಭೂಷಣಗಳಲ್ಲಿ ಹೆಚ್ಚಿನ ಗೌರವವಿತ್ತು. ಹೀಗೆ ಉಡುಪು ಧರಿಸುವುದರಲ್ಲಿ ಅವರ ಅಭಿಪ್ರಾಯವೇನೆಂದರೆ ಭಗವಂತನು ಮಾನವನ ಯಜಮಾನ ಮತ್ತು ದೊರೆ. ಆದುದರಿಂದ ದೇವರ ಆಸ್ಥಾನಕ್ಕೆ ಹೋಗುವಾಗ ಮನುಷ್ಯನು ಉಚಿತವಾದ ಉಡುಪನ್ನು ಧರಿಸಿ ರಾಜಶ್ರೇಷ್ಠನ ಆಸ್ಥಾನದಲ್ಲಿರಲು ತಕ್ಕಂತಿರಬೇಕು. ಅವರು ಈ ಅಭಿಪ್ರಾಯವನ್ನು ಮಹಮ್ಮದೀಯ ಸಂಸ್ಕೃತಿಯಿಂದ ತಿಳಿದಿರಬೇಕು. ಅವರ ಸ್ನೇಹಿತರೂ ಅವರಂತೆಯೇ ಉಡುಪು ಧರಿಸಿ ಸಮಾಜಕ್ಕೆ ಹೋಗುತ್ತಿದ್ದರು. ಆದರೆ ದ್ವಾರಕಾನಾಥ ಠಾಕೂರನು ಮಾತ್ರ ಸಮಾಜಕ್ಕೆ ಹೋಗುವಾಗ ಪಂಚೆ ಬನಿಯನ್ನುಗಳನ್ನು ಧರಿಸಿಯೇ ಹೋಗುತ್ತಿದ್ದನು.

ಬ್ರಹ್ಮ ಸಮಾಜದ ಕೂಟಗಳಲ್ಲಿ ರಾಮಚಂದ್ರ ವಿದ್ಯಾವಾಗೀಶನು ಮಾಡುತ್ತಿದ್ದ ಪ್ರಾರಂಭ ಉಪದೇಶವು ಭಗವಂತನ ಅಂತರಂಗ ಉಪಾಸನೆಗೆ ಸಂಬಂಧಿಸಿತ್ತು; ಹಿಂದೂ ಮತಗ್ರಂಥಗಳ ಆಧಾರದಿಂದ ಆರಿಸಿ ಅಲ್ಲಿ ಪ್ರಚಾರ ಮಾಡುತ್ತಿದ್ದ ತತ್ತ್ವವೇನೆಂದರೆ " ದೇವರೊಬ್ಬನೇ, ಅವನು ಅದ್ವಿತೀಯನು ; ಅವನಲ್ಲಿ ಎಲ್ಲ ಪ್ರಪಂಚಗಳೂ ಎಲ್ಲ ಜೀವರಾಶಿಗಳೂ ಸೇರಿರುವುವು. ಯಾರು ಎಲ್ಲರಲ್ಲಿಯೂ ಭಗವಂತನ ಅಂಶವಿದೆಯೆಂಬುದನ್ನು ಬುದ್ಧಿಯಿಂದ ಗ್ರಹಿಸುತ್ತಾರೆಯೋ ಅವರು ಸರ್ವ ಸಮತಾ ಭಾವವನ್ನು ಪಡೆಯುವರು ಮತ್ತು ಭಗವಂತನಲ್ಲಿ ಐಕ್ಯತೆಯನ್ನೂ ಪಡೆಯುವರು." ರಾಮಮೋಹನರ ಈ ಬೋಧನ ತತ್ತ್ವವು ಹಿಂದೂ, ಮಹಮ್ಮದೀಯ ಮತ್ತು ಕ್ರೈಸ್ತ ಮತಗಳ ಸಂಯೋಜನೆಯಿಂದ ಆದುದೆಂದೂ ಎಲ್ಲ ಧರ್ಮ

ಗಳಿಗೂ ಮೂಲಾಧಾರವಾದುದೆಂದೂ ಹೇಳಬಹುದು ಅವರು ಲೋಕಕ್ಕೆ ಸಾರಿದ ಈ ತತ್ತ್ವವು ಸಾರ್ವತ್ರಿಕವಾಗಿದ್ದು ಸರ್ವಸಮ್ಮತವಾಗಿದೆ

ರಾಮಮೋಹನರ ಈ ಒಬ್ಬ ದೇವರ ಪೂಜಾಕ್ರಮವು ಕ್ರೈಸ್ತ ಏಕಮೂರ್ತಿಪಕ್ಷದವರಿಂದ ಅನುಕರಣ ಮಾಡಿದ್ದೆಂದು ಕೆಲವರು ಹೇಳುವರು ಆದರೆ ಇದಕ್ಕೆ ಆಧಾರವಿಲ್ಲ ಹಿಂದೂ, ಮಹಮ್ಮದೀಯ ಮತ್ತು ಕ್ರೈಸ್ತ ಮತಗಳಲ್ಲಿ ರೂಢಿಯಲ್ಲಿದ್ದ ಬೇರೆಬೇರೆ ಪೂಜಾಕ್ರಮಗಳನ್ನು ರಾಮಮೋಹನರು ತಿಳಿದಿದ್ದರು ಬ್ರಹ್ಮಸಮಾಜದ ಪೂಜಾಕ್ರಮವನ್ನು ನಿರ್ಧರಿಸುವಾಗ, ಕ್ರೈಸ್ತ ಏಕಮೂರ್ತಿ ಪಕ್ಷದವರ ಕ್ರಮವನ್ನು ಚಾಚೂ ತಪ್ಪದೆ ಅನುಕರಣಮಾಡಲಿಲ್ಲ ಹಿಂದೂಗಳಲ್ಲಿಯೇ ಹರಿಕಥೆ ಮತ್ತು ಹರಿಭಜನೆಗಳ ಕ್ರಮವಿತ್ತು ಆ ಕ್ರಮದಲ್ಲಿ ಕ್ರೈಸ್ತರಲ್ಲಿ ಕಾಣಬಹುದಾದ ಸಮುದಾಯ ಪ್ರಾರ್ಥನೆಯ ಲಕ್ಷಣವಿದೆ ಇದಲ್ಲದೆ ಹಿಂದೂಗಳಲ್ಲಿ ಸ್ತೋತ್ರ, ಸಂಕಲ್ಪ ಮತ್ತು ಪಾರಾಯಣಗಳೂ ಇದ್ದುದು ರಾಮಮೋಹನರ ಗಮನಕ್ಕೆ ಬರದೆ ಇರಲಾರದು ಆದುದರಿಂದ ಹಿಂದೂ ಪೂಜಾಕ್ರಮದಲ್ಲಿಯೇ ಇದ್ದ ಲಕ್ಷಣಗಳನ್ನೆಲ್ಲ ಒಂದುಗೂಡಿಸಿ ಒಂದು ಹೊಸ ಪೂಜಾಕ್ರಮವನ್ನು ಆಚರಣೆಗೆ ತಂದರೆಂದು ಧಾರಾಳವಾಗಿ ಹೇಳಬಹುದು

ಬ್ರಹ್ಮಸಮಾಜ ಸ್ಥಾಪನೆಯಿಂದ ಕ್ರೈಸ್ತ ಮತಕ್ಕೆ ಬೆಂಬಲವಾಗುವುದೆಂದು ವಿಲಿಯಂ ಆಡಮನು ನಿರೀಕ್ಷಿಸಿದ್ದನು ಕ್ರೈಸ್ತ ಏಕಮೂರ್ತಿ ಪಕ್ಷದವರಿಂದ ಐನೂರು ರೂಪಾಯಿಗಳ ಧನಸಹಾಯವನ್ನು ಬ್ರಹ್ಮ ಸಮಾಜಕ್ಕೆ ಒದಗಿಸಿದನು ಆಡಮನೂ ಬ್ರಹ್ಮಸಮಾಜದ ಪ್ರಾರ್ಥನಾ ಸಭೆಗಳಿಗೆ ಹೋಗುತ್ತಿದ್ದನು ಆದರೆ ಅಲ್ಲಿನ ಕಾರ್ಯಕ್ರಮಗಳೆಲ್ಲ ಅವನಿಗೆ ಒಪ್ಪಿಗೆಯಾಗಲಿಲ್ಲ ಅವನು ತ್ರಿಮೂರ್ತಿ ಮತ ತತ್ತ್ವವನ್ನು ಬಿಟ್ಟಿದ್ದರೂ ರಾಮಮೋಹನರ ವಿಶ್ವಮತವನ್ನು ಅಂಗೀಕರಿಸಿರಲಿಲ್ಲ ಆದುದರಿಂದ ಆಡಮನಿಗೆ ಬ್ರಹ್ಮಸಮಾಜದಲ್ಲಿನ ಆಸಕ್ತಿಯು ಕಡಿಮೆಯಾಗಿ ಕೊನೆಗೆ ಕ್ರೈಸ್ತ ಏಕಮೂರ್ತಿ ಪಕ್ಷವು ಕಲ್ಕತ್ತೆಯಲ್ಲಿ ಊರ್ಜಿತವಾಗಲಾರದೆಂದು ನಿರಾಶನಾಗಿ ಮದರಾಸಿಗೆ ಹೋದನು ಕಲ್ಕತ್ತೆಯ " ಜಾನ್‌ಬುಲ್ " ಎಂಬ ಪತ್ರಿಕೆಯು ಬ್ರಹ್ಮಸಮಾಜದ ಸ್ಥಾಪನೆಯನ್ನು ವರದಿಮಾಡಿ ವಿಶಾಲ ಬುದ್ಧಿಯ ಹಿಂದೂಗಳು ಕ್ರೈಸ್ತ ಏಕಮೂರ್ತಿ ದೈವ ಮತದಿಂದ

ಶುದ್ಧ ಏಕ ಬ್ರಹ್ಮ ಮತಕ್ಕೆ ಜಾರಿಕೊಂಡುದಕ್ಕಾಗಿ ವಿಷಾದ ಸೂಚಿಸಿತು. ಅಲ್ಲದೆ ರಾಮಮೋಹನರು ಇಂಡಿಯಾದಲ್ಲಿ ಕ್ರೈಸ್ತ ಮತದ ಮುಖ್ಯ ಪ್ರಚಾರಕರಾಗಬಹುದೆಂಬ ಆಶೆಯೂ ಕೊನೆಗಂಡುದಕ್ಕಾಗಿ ಪ್ರಲಾಪಿಸಿತು.

ದೇಶೀಯರು ಕ್ರೈಸ್ತ ಮತಕ್ಕೆ ದೂರವಾಗುತ್ತಿದ್ದುದು ಆ ಮತಸ್ಥರಿಗೇನೂ ಅಷ್ಟು ಪ್ರಿಯವಾಗಿರಲಿಲ್ಲ. ರಾಮಮೋಹನರ ಬ್ರಹ್ಮ ಸಮಾಜವು ಯಾವ ಒಂದು ಮತವನ್ನೂ ಪರಿಪೋಷಿಸದೆ ಒಂದು ಸ್ವತಂತ್ರ ಮತವನ್ನು ಅನುಸರಿಸಿತು. ಆದ್ದರಿಂದ ವಿಲಿಯಂ ಆಡಮನಿಗೆ ಅತೃಪ್ತಿ ಆದಂತೆಯೇ ಬ್ರಹ್ಮಸಮಾಜದ ವಿಷಯದಲ್ಲಿ ಇತರ ಕ್ರೈಸ್ತಮತೀಯರಿಗೂ ಅಸಮಾಧಾನವಾಯಿತು. ರಾಮಮೋಹನರು ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ ಎಲ್ಲ ಕ್ಷೇತ್ರಗಳಲ್ಲಿಯೂ ಸ್ವತಂತ್ರ ಮಾರ್ಗಗಾಮಿಗಳಾಗಿದ್ದರು. ಅವರು ವೃತ್ತಪತ್ರಿಕಾ ಕಾನೂನನ್ನು ವಿರೋಧಿಸಿದ್ದನ್ನು ನೋಡಿದ್ದೇವೆ. ಆ ಸಂದರ್ಭದಲ್ಲಿ ಹಲವು ವಿದೇಶೀಯರು ಅವರಿಗೆ ಶತ್ರುಗಳಾಗಿದ್ದರು. ಬ್ರಹ್ಮ ಸಮಾಜ ಸ್ಥಾಪನೆಯಿಂದ ಮತ್ತೆ ಕೆಲವರು ದ್ವೇಷಿಗಳಾದರು. ದೇಶೀಯರಲ್ಲಿಯೂ ವಿದೇಶೀಯರಲ್ಲಿಯೂ ರಾಮಮೋಹನರ ಆಗಿನ ಸ್ಥಿತಿ ಹೇಗಿತ್ತೆಂಬುದು ೧೮೨೮ ನೆಯ ಸೆಪ್ಟಂಬರ್ ೨೦ ರಲ್ಲಿ ಕರ್ನಲ್ ಯಂಗ್ ಎಂಬವನು ಬೆಂತಮ್ ಎಂಬಾತನಿಗೆ ಬರೆದಿರುವ ಪತ್ರದಿಂದ ವ್ಯಕ್ತವಾಗುತ್ತದೆ:

"ಈಗ ಎರಡು ವರ್ಷಗಳಿಂದ ಆತನ (ರಾಮಮೋಹನರ) ಕಾಲವೆಲ್ಲ ಆತನ ಮೇಲೂ ಆತನ ಮಗನ ಮೇಲೂ ಬಂದಿರುವ ಆರೋಪಗಳನ್ನು ಪರಿಹಾರ ಮಾಡಿಕೊಳ್ಳುವುದರಲ್ಲಿ ವಿನಿಯೋಗವಾಗುತ್ತಿದೆ; ಅವುಗಳಲ್ಲಿ ಕೆಲವು ಆತನ ಮಗನ ಮೇಲೆ ನೆಪಮಾತ್ರಕ್ಕೆ ಬಂದಿರತಕ್ಕವು; ವಾಸ್ತವವಾಗಿ ಆತನ ಮೇಲೆ, ಸ್ವತಂತ್ರ ಅಭಿಪ್ರಾಯಗಳಿಗಾಗಿ ದೇಶೀಯರ ಅಂಧ ಶ್ರದ್ಧೆಯ ತಂತ್ರದಿಂದಲೇ, ಬಂದಿರತಕ್ಕವು; ಅದಕ್ಕೆ ನಮ್ಮವರೂ ಕೆಲವರು ಪ್ರೋತ್ಸಾಹವೀಯುತ್ತಿರುವರು. ಅಧಿಕಾರ, ಪ್ರತಿಷ್ಠೆಗಳಲ್ಲಿರುವ "ಬಿಳಿಯ" ಜನರಿಗೆ "ಕರಿಯ", ಮನುಷ್ಯನು ಬುದ್ಧಿಯಲ್ಲಿ ಸರಿಸಮನಾಗಿರುವುದು ಅಥವಾ ಅವರನ್ನು ಮೀರಿಸುವುದು "ಬಿಳಿಯವರಿಗೆ" ಒಪ್ಪಿಗೆ ಆಗಿಲ್ಲ. ಆತನು ದೀರ್ಘವಾದ ಮತ್ತು ಕಷ್ಟತರವಾದ ವ್ಯವಹಾರಗ

ಳನ್ನು ಆತನ ಬುದ್ಧಿಶಕ್ತಿಯಿಂದಲೂ, ಸ್ಥೈರ್ಯದಿಂದಲೂ, ಋಜು ಮಾರ್ಗದಿಂದಲೂ, ಜಯಿಸಿದನು. ಈ ದೀರ್ಘ ವ್ಯವಹಾರಗಳೂ, ಈ ವ್ಯವಹಾರಗಳಿಗೆ ಸಂಬಂಧಿಸಿ ಕೈಸೇರುವುದು ಸಂದೇಹಾಸ್ಪದವಾಗಿದ್ದ ದ್ರವ್ಯದ ಅಪಾರತೆಯೂ ನ್ಯಾಯ ತೀರ್ಮಾನದಲ್ಲಿನ ಆಶಾಭಂಗಗಳೂ ಆತನ ದೇಹಾರೋಗ್ಯವನ್ನು ಬಹು ಮಟ್ಟಿಗೆ ಕುಗ್ಗಿಸಿದ್ದುವು. ಅವು ಈಗ ಮುಗಿದಿವೆ. ಆತನು ಪುನಃ ಹಿಂದಿನ ಆರೋಗ್ಯವನ್ನು ಆರ್ಜಿಸುವನೆಂದು ಔತ್ಸುಕ್ಯದಿಂದ ಆಶಿಸುತ್ತೇನೆ. ಇಲ್ಲಿ, ದೇಶೀಯರಲ್ಲಿ ಆತನಿಗೆ ಸರಿಸಮಾನರು ಇಲ್ಲದಿರುವುದು ಮಾತ್ರವಲ್ಲ, ಅನೇಕ ತೊಡರುಗಳ ಮಧ್ಯದಲ್ಲಿ ಆತನು ಸಾವಕಾಶವಾಗಿಯೂ ಕ್ರಮೇಣವೂ ಹೆಚ್ಚಿಸುತ್ತಿರುವ ಸಣ್ಣ "ಪರಿಶುದ್ಧ ತಂಡ" ಎನಿಸಿದ ಶಿಷ್ಯರಲ್ಲಿಯೂ ಯೋಗ್ಯತೆಯಲ್ಲಿ ಆತನಿಗೆ ಸರಿತೂಗತಕ್ಕವರು ಯಾರೂ ಇಲ್ಲ.

"ಅಂಥ ಮನುಷ್ಯನನ್ನು ಐರೋಪ್ಯರು ಉದಾಸೀನದಿಂದ ಕಾಣುವುದು—ತಿರಸ್ಕರಿಸುವುದು ಹಾಗಿರಲಿ—ಆಶ್ಚರ್ಯವೇ ಸರಿ. ಏಕೆಂದರೆ ಆತನು ನಮ್ಮ ಆಳಿಕೆಯಲ್ಲಿ ಬಹಳ ಆದರವುಳ್ಳವನಾಗಿದ್ದಾನೆ. ಆತನು ನಮ್ಮ ಪ್ರಾರ್ಥನಾ ಮಂದಿರಗಳನ್ನಾಗಲಿ, ಅರ್ಚಕ, ಲಾಯರುಗಳನ್ನಾಗಲಿ, ರಾಜ್ಯ ತಂತ್ರಜ್ಞರನ್ನಾಗಲಿ ವಿಶೇಷ ಪ್ರೀತಿಸುವನೆಂದಲ್ಲ. ಆದರೆ ಆತನ ಜನಾಂಗದಂಥ ಕೆಳಮಟ್ಟದ ಜನಾಂಗವು ಅಭಿವೃದ್ಧಿಯನ್ನೂ ಜ್ಞಾನವನ್ನೂ ಪಡೆಯುವುದಕ್ಕೆ ನಮ್ಮ ಉತ್ತಮ ಜನಾಂಗದ ಸಂಪರ್ಕ ಒಂದೇ ಇರುವ ಸಾಧನ ಮತ್ತು ಅವಕಾಶ ಎಂದು ಆತನು ತಿಳಿದಿರುವನು."

ದೇಶೀಯರ ಆಕ್ಷೇಪ ತೊಂದರೆಗಳಿಂದಾಗಲಿ ವಿದೇಶೀಯರ ಅಪಕಾರ ತಿರಸ್ಕಾರಗಳಿಂದಾಗಲಿ ರಾಮಮೋಹನರು ಎದೆಗುಂದಲಿಲ್ಲ. ಏಕಮೂರ್ತಿ ಪಕ್ಷದಲ್ಲಿಯೂ ಮಾನವರ ಸೋದರ ಭಾವದಲ್ಲಿಯೂ ಅವರಿಗೆ ಅತಿಶಯವಾದ ನಂಬಿಕೆಯಿತ್ತು. ಅವು ಅವರ ಮನಸ್ಸಿನಲ್ಲಿ ಸ್ಥಿರವಾಗಿ ನೆಲಸಿದ್ದ ತತ್ತ್ವಗಳಾಗಿದ್ದುವು. ವಿಶ್ವವ್ಯಾಪ್ತ ವಿಚಾರವನ್ನು ಕುರಿತು ಮಾತನಾಡುತ್ತಿದ್ದಾಗ ಭಾವಾವೇಗದಿಂದ ಕಣ್ಣುಗಳಲ್ಲಿ ನೀರು ಬರುತ್ತಿತ್ತು. ರಾಮಮೋಹನರ ಆಸಕ್ತಿಯೂ ಆದರ್ಶಪ್ರಾಯವಾಗಿತ್ತು. ಅಲ್ಲದೆ ಅವರು

ಎಲ್ಲ ಬಗೆಯ ಮನೋಭಾವದವರನ್ನೂ ಪ್ರೇಮ ಸಹಾನುಭೂತಿಗಳಿಂದ ಕಾಣುತ್ತಿದ್ದರು. ಪ್ರಸನ್ನ ಕುಮಾರ ಠಾಕೂರನು ನಾಸ್ತಿಕನಾಗಿದ್ದನು. ಆದರೂ ರಾಮಮೋಹನರ ಆಪ್ತ ಸ್ನೇಹಿತನಾಗಿಯೂ ಬ್ರಹ್ಮಸಮಾಜದ ಹಿತಚಿಂತಕನಾಗಿಯೂ ಇದ್ದನು. ರಾಮಮೋಹನರು ತಮ್ಮ ಅನುಯಾಯಿಗಳಲ್ಲಿ ಹೆಚ್ಚಿನ ಪ್ರೇಮವುಳ್ಳವರಾಗಿದ್ದರು. ಹೀಗೆಯೇ ಅನುಯಾಯಿಗಳೂ ಅವರಲ್ಲಿ ವಿಶೇಷವಾದ ಪ್ರೇಮವುಳ್ಳವರಾಗಿದ್ದರು. ಅವರು ರಾಮಮೋಹನರನ್ನು "ದಿವಾನ್ ಜಿ" ಎಂದು ಕರೆಯುತ್ತಿದ್ದರು. ಅನುಯಾಯಿಗಳನ್ನು ರಾಮಮೋಹನರು 'ಬಿರಾದರ್' ಎಂದು (ಪಾರ್ಸಿ ಭಾಷೆಯಲ್ಲಿ ಸಹೋದರನೆಂದರ್ಥ) ಕರೆಯುತ್ತಿದ್ದರು. ಅವರಿಗೆ ಪದೇ ಪದೇ ಬುದ್ಧಿವಾದವನ್ನು ಹೇಳಿ ನಿಯಮಾನುವರ್ತಿಗಳನ್ನಾಗಿ ಮಾಡುತ್ತಿದ್ದರು. ರಾಮಮೋಹನರ ಶೀಲವೂ, ಬ್ರಹ್ಮ ಸಮಾಜದಲ್ಲಿ ಅವರಿಗಿದ್ದ ಆಸಕ್ತಿಯೂ, ಜನರನ್ನು ಹೆಚ್ಚುಹೆಚ್ಚಾಗಿ ಆಕರ್ಷಿಸಿತು; ಹೆಚ್ಚು ಧನವೂ ಒದಗಿತು.

ಬ್ರಹ್ಮ ಸಮಾಜವು ಕ್ರಮೇಣ ಬೆಳೆಯುತ್ತ ಬಂತು. "ಆತ್ಮೀಯ ಸಭೆ" ಯು ಕೇವಲ ಕೆಲವು ಮಂದಿ ಗೆಳೆಯರ ಗೋಷ್ಠಿಯಾಗಿದ್ದರೆ ಇದು ಸಾರ್ವಜನಿಕ ಸಂಸ್ಥೆಯಾಗಿ ಬಹುಕಾಲ ಬಾಳುವ, ಅಷ್ಟೇ ಅಲ್ಲದೆ ಮುಂದೆ ಇಂಡಿಯಾ ದೇಶವನ್ನೆಲ್ಲ ಸ್ಫೂರ್ತಿಗೊಳಿಸುವ ಸತ್ವಯುತವಾದ ಸಂಸ್ಥೆಯಾಯಿತು. ರಾಮಮೋಹನರ ಶಿಷ್ಯರಲ್ಲೊಬ್ಬನಾದ ರಾಜನಾರಾಯಣ ಬೋಸನು ಸಂಸ್ಥೆಯ ಭವಿಷ್ಯವನ್ನು ಮನಗಂಡಿದ್ದನು. "ಆದಿ ಬ್ರಹ್ಮ ಸಮಾಜವು ಇಂಡಿಯದಲ್ಲಿ ಮಾತ್ರವಲ್ಲದೆ ಪ್ರಪಂಚದಲ್ಲೇ ಸ್ಥಾಪಿತವಾದ ಮೊದಲನೆಯ ಆಧ್ಯಾತ್ಮಿಕ ಸಂಸ್ಥೆ. ಪ್ರಪಂಚದಲ್ಲೆಲ್ಲ ಆಧ್ಯಾತ್ಮಿಕ ಸಂಸ್ಥೆಗಳನ್ನು ಸ್ಥಾಪಿಸುವ ಕಾಲವು ಬರುವುದು. ಆದರೆ ಆದಿ ಬ್ರಹ್ಮಸಮಾಜವೇ ಅವುಗಳಿಗೆಲ್ಲ ಮೊದಲು ಎಂದು ಹೇಳಬೇಕಾಗುವುದು" ಎಂದು ಸಾರಿದನು. ಆತನ ಮಾತು ದೇಶದಲ್ಲೆಲ್ಲ ಹರಡಿತು; ರಾಮಮೋಹನರ ಉಪದೇಶಗಳಿಂದ ಪ್ರೇರಿತರಾಗಿದ್ದವರು ಸಚೇತನ ನವಭಾರತವನ್ನು ಮುಂಗಾಣುತ್ತಿದ್ದರು,

ಹೀಗೆ ಅಭಿವೃದ್ಧಿಗೆ ಒಂದು ಪ್ರಭಾವವನ್ನು ಬೀರುತ್ತಿದ್ದ ಸಮಾಜದ ಕಾರ್ಯಕಲಾಪಗಳಿಗೆ ಅದುವರೆಗಿದ್ದ ಬಾಡಿಗೆ ಮನೆಯು ಸಾಕಾಗಲಿಲ್ಲ. 'ಸಮಾಜ'ಕ್ಕೆ ದ್ರವ್ಯ ಸಂಪತ್ತಿಯೊದಗಿದುದರಿಂದ ೧೮೨೯ ನೆಯ ಜೂನ್ ೬ ನೆಯ ತಾರೀಖಿನಲ್ಲಿ ಚಿತ್ಪೂರ್ ರಸ್ತೆಯಲ್ಲಿ ಒಂದು ನಿವೇಶವನ್ನು ಕ್ರಯಕ್ಕೆ ಕೊಂಡು ಒಂದು ಭವನವನ್ನೂ ಕಟ್ಟಿದ ದಾಯಿತು. ನಿವೇಶಕ್ಕೂ ಕಟ್ಟಡಕ್ಕೂ ಹೆಸರಿಗೆ ಮಾತ್ರ ೨೦-೩೦ ರೂಪಾಯಿಗಳನ್ನು ಕೊಟ್ಟಂತೆ ಕಾಣುವುದು. ಅವಕ್ಕೆ ಆ ವೇಳೆ ಹೆಚ್ಚು ಹಣ ಕೊಟ್ಟರೋ ಅಥವಾ ಅದರ ಮಾಲೀಕರು ನಿವೇಶ ಕಟ್ಟಡಗಳನ್ನು ಸಮಾಜಕ್ಕೆ ದಾನ ಮಾಡಿದರೋ ಖಂಡಿತವಾಗಿ ತಿಳಿವಿಲ್ಲ. ಬ್ರಹ್ಮಸಮಾಜದ ಚರಿತ್ರೆಯಲ್ಲಿ ಇದು ಒಂದು ಮುಖ್ಯ ಸಂಗತಿಯಾಗಿದೆ. ಆನಂತರ 'ಸಮಾಜ'ಕ್ಕೆ ನಾಯಕರಾಗಿದ್ದವರು ೧೮೩೦ ನೆಯ ವರ್ಷದ ಜನವರಿಯಲ್ಲಿ ಒಂದು ಖರೀದಿ ಪತ್ರವನ್ನು ಬರೆದು ಬ್ರಹ್ಮಸಮಾಜಕ್ಕೆ ಅದುವರೆಗೆ ಸೇರಿದ್ದ ಚರ ಸ್ಥಿರ ಆಸ್ತಿಗಳನ್ನೆಲ್ಲ ಕೆಲವು ಸದಸ್ಯರ ವಶಕ್ಕೊಪ್ಪಿಸಿದರು. ಈ ಪತ್ರವನ್ನು ಬರೆದುಕೊಟ್ಟವರು ದ್ವಾರಕಾನಾಥಠಾಕೂರ, ಪ್ರಸನ್ನ ಕುಮಾರ ಠಾಕೂರ, ರಾಮಮೋಹನರಾಯ, ಕಾಳಿನಾಥ ರಾಯ ಮತ್ತು ರಾಮಚಂದ್ರ ವಿದ್ಯಾವಾಗೀಶ. ಇವರಿಂದ ಸಮಾಜವು ವೈಕುಂಠನಾಥರಾಯ, ರಾಮಮೋಹನರ ಮಗ ರಾಮಪ್ರಸಾದರಾಯ, ರಾಮನಾಥಠಾಕೂರ— ಇವರ ಹೆಸರಿಗೆ ಬದಲಾಯಿಸಲಾಯಿತು. ತಾರಾಚಂದ್ರ ಚಕ್ರವರ್ತಿಯು ಕಲ್ಕತ್ತೆಯನ್ನು ಬಿಟ್ಟು ಹೋಗಬೇಕಾಗಿ ಬಂದುದರಿಂದ ಬ್ರಹ್ಮಸಮಾಜಕ್ಕೆ ವಿಶ್ವಂಭರದಾಸನೆಂಬುವನು ಆ ಮೊದಲೇ ಕಾರ್ಯದರ್ಶಿಯಾಗಿದ್ದನು. ಅವನು ಜಾತಿಯಲ್ಲಿ ಬ್ರಾಹ್ಮಣೇತರನು. ಅನಂತರ ರಾಮಪ್ರಸಾದರಾಯನು ಕಾರ್ಯದರ್ಶಿಯಾದನು. ಆ ವೇಳೆಗೆ ಸಮಾಜಕ್ಕೆ ಸುಮಾರು ಆರು ಸಾವಿರ ರೂಪಾಯಿಗಳ ಧನಸಂಪತ್ತಿ ಇತ್ತು.

ಈ ಕ್ರಯಪತ್ರವು ಅನೇಕ ಕಾರಣಗಳಿಂದ ಮುಖ್ಯವಾದುದು. ಇದರಿಂದ ಬ್ರಹ್ಮಸಮಾಜದ ಸ್ಥಾಪನೆಯ ಸ್ಥಾಪಕರಾಗಿದ್ದ ಆಶೋತ್ತರಗಳೂ ಅವರ ದೂರದರ್ಶಿತೆಯೂ ವ್ಯಕ್ತವಾಗುವುವು. ಇವರಿಂದ ಬ್ರಹ್ಮಸಮಾಜದ ಗುರಿಯಲ್ಲಿದ್ದ ಆಧ್ಯಾತ್ಮಿಕ ತತ್ತ್ವವೇನೆಂಬುದು ಹೊರ

ಹಡುವುದು. ಕ್ರಯಪತ್ರವು ಕಾನೂನು ದೃಷ್ಟಿಯಲ್ಲಿ ಲೋಪದೋಷಗಳಿಲ್ಲದೆ ಬ್ರಹ್ಮಸಮಾಜದ ಕಾರ್ಯಕಲಾಪಗಳು ದೇಶದಲ್ಲಿ ಸಾರೋದ್ಧಾರವಾಗಿ ನಡೆಯುವಂತಾಯಿತು. ಬ್ರಹ್ಮಸಮಾಜದ ಉದ್ದೇಶವನ್ನು ಈ ಪತ್ರದಲ್ಲಿ ಸ್ಥಾಪಕರು ವಿವರಿಸಿರುವುದರಿಂದ ಅದರ ಕೆಲವು ಭಾಗಗಳನ್ನು ಇಲ್ಲಿ ಉದ್ಧರಿಸಬಹುದು ;—

ಹಕ್ಕುದಾರರು ಈ ಕಟ್ಟಡವನ್ನೂ, ಇದಕ್ಕೆ ಸೇರಿದ ಭೂಮಿ ಇತ್ಯಾದಿ ಸಮಸ್ತವಸ್ತುಗಳನ್ನೂ, ನಿಯಮಬದ್ಧರಾದ, ಬುದ್ಧಿವಿಕಾರವಿಲ್ಲದ, ಧರ್ಮನಿಷ್ಠರಾದ, ಎಲ್ಲಜನರಿಂದಲೂ, ಜಾತಿ, ರಾಷ್ಟ್ರಭೇದವಿಲ್ಲದೆ, ಬಹಿರಂಗವಾಗಿ ಸೇರಲು ಉಪಯೋಗಿಸತಕ್ಕದ್ದು ;

ನಿತ್ಯನೂ, ನಿರಾಕಾರನೂ, ವಿಶ್ವದ ಸೃಷ್ಟಿಕರ್ತನೂ, ರಕ್ಷಕನೂ ಆದ ಒಬ್ಬನೇ ಭಗವಂತನ ಆರಾಧನೆಗೆ ಉಪಯೋಗಿಸಬೇಕಲ್ಲದೆ ಬೇರೆ ಹೆಸರಿನ, ಬೇರೆ ಪಂಥದ, ಬೇರೊಬ್ಬ ವ್ಯಕ್ತಿಯ ಅಥವಾ ವ್ಯಕ್ತಿಗಳ, ಮನುಷ್ಯನ ಅಥವಾ ಮನುಷ್ಯರ ಆರಾಧನೆಗೆ ಈ ಕಟ್ಟಡವನ್ನು ಉಪಯೋಗಿಸಕೂಡದು ;

ಲೋಹದ ವಿಗ್ರಹವಾಗಲಿ, ಕಲ್ಲಿನ ಅಥವಾ ಮರದ ಪ್ರತಿಮೆಯನ್ನಾಗಲಿ ಅಥವಾ ಮತ್ತಾವ ತೆರದ ಪಟವನ್ನಾಗಲಿ ಚಿತ್ರವನ್ನಾಗಲಿ ಅಥವಾ ಆ ಬಗೆಯ ಯಾವುದನ್ನಾಗಲಿ ಈ ಕಟ್ಟಡ ಅಥವಾ ಇದಕ್ಕೆ ಸೇರಿದ ನಿವೇಶದಲ್ಲಿಗೆ ಬರಗೊಡಿಸಕೂಡದು ; ಯಾವಬಗೆಯ ಕಾಣಿಕೆ, ಆಹುತಿ, ಯಜ್ಞಗಳನ್ನೂ ಇಲ್ಲಿ ನಡೆಸಲಾಗದು ; ಯಾವ ಪ್ರಾಣಿಯನ್ನಾಗಲಿ, ಧರ್ಮದ ಹೆಸರಿನಲ್ಲಾಗಲಿ, ಆಹಾರಕ್ಕಾಗಿ ಆಗಲಿ, ಇಲ್ಲಿ ವಧೆ ಮಾಡಕೂಡದು ;

ಈ ಕಟ್ಟಡದ ಒಳಗಾಗಲಿ ಹೊರಗಾಗಲಿ, ಜೀವಧಾರಣೆಗೆ ಪ್ರಕೃತವಿರುವಷ್ಟು ವಿನಾ, ತಿನ್ನುವುದಾಗಲಿ, ಕುಡಿಯುವುದಾಗಲಿ, ಇತರ ಬಗೆಯ ಅತಿ ಸಂತೋಷ ಸಮಾರಂಭಗಳಾಗಲಿ ನಡೆಯಗೊಡಿಸತಕ್ಕದ್ದಲ್ಲ ;

ಸರ್ವರಿಂದ ಇಲ್ಲಿ ಪೂಜೆಗೆಂದು ಸಂಸ್ಕೃತವಾಗಿರುವ, ಅಥವಾ ಇನ್ನು ಮುಂದೆ ಆಗುವ, ಸಜೀವ ಅಥವಾ ನಿರ್ಜೀವ ವಸ್ತುಗಳ ವಿಷಯದಲ್ಲಿಯಾಗಲಿ, ಇಲ್ಲಿ ನಡೆಯುವ ಪ್ರಾರ್ಥನೆಯ, ಭಜನೆಯ ಅಥವಾ ಬೇರೆ ರೀತಿಯ ಸೇವೆಯ ವಿಷಯದಲ್ಲಿಯಾಗಲಿ, ಯಾರೂ ಅವಮಾನ ಮಾಡುವುದಾಗಲಿ, ತಿರಸ್ಕರಿಸುವುದಾಗಲಿ, ಹೇಯವಾಗಿ ಕಾಣುವುದಾಗಲಿ, ಅಥವಾ ಅವನ್ನು ಸೂಚಿಸುವುದಾಗಲಿ ಮಾಡಕೂಡದು ;

ಸೃಷ್ಟಿಕರ್ತನಲ್ಲಿ ಧ್ಯಾನಪನ್ನಾಗಲಿ, ಮನುಷ್ಯನಲ್ಲಿ ಧರ್ಮ, ನೀತಿ, ನಿಷ್ಠೆ, ಸದ್ಗುಣ, ಎಲ್ಲ ಮತಗಳ ಸಮನ್ವಯಭಾವ—ಇವುಗಳನ್ನು ಪ್ರೇರಿಸದ ಯಾವ ಪ್ರಾರ್ಥನೆ, ಭಜನೆ, ಪೂಜೆಗಳನ್ನೂ ಇಲ್ಲಿ ನಡೆಸಲಾಗದು ;

ನೀತಿವಂತನಾದ, ನಿಷ್ಠನಾದ ವಿದ್ಯಾವಂತನಾದ ಮತ್ತು ಕೀರ್ತಿಶಾಲಿಯಾದ ಒಬ್ಬನನ್ನು ಈ ಸಂಸ್ಥೆಗೆ ಮುಖ್ಯಸ್ಥನನ್ನಾಗಿ ನೇಮಿಸುತ್ತೇವೆ ; ಆತನ ನೇತೃತ್ವದಲ್ಲಿ ಇಲ್ಲಿ ಉಪಾಸನೆಯು ಪ್ರತಿದಿನವಾಗಲಿ ಅಥವಾ ಕೊನೆಯ ಪಕ್ಷ ವಾರಕ್ಕೊಂದಾವರ್ತಿಯಾಗಲಿ ನಡೆಯಲಿ.

ಬ್ರಹ್ಮಸಮಾಜದ ಸ್ಥಾಪನೆಗೂ ಅದರ ಅಭಿವೃದ್ಧಿಗೂ ರಾಮ ಮೋಹನರೇ ಮೂಲಾಧಾರವಾಗಿದ್ದವರೆಂದು ಹೇಳಬೇಕಾಗಿಲ್ಲ. ಉಳಿದ ವರೆಲ್ಲ ಅವರ ಅನುಯಾಯಿಗಳಾಗಿ ಅವರಿಂದ ಸ್ಫೂರ್ತಿಹೊಂದಿದವರಾಗಿದ್ದರು. ಬ್ರಹ್ಮಸಮಾಜದ ಉದ್ದೇಶ ಧ್ಯೇಯಗಳ ವಿವರಣೆಯಿಂದ ರಾಮ ಮೋಹನರ ವಿಶ್ವಮಾನವತತ್ತ್ವವು ವ್ಯಕ್ತವಾಗುವುದು. ಕ್ರಯ ಪತ್ರದಲ್ಲಿನ ವಾಕ್ಯಗಳಿಂದ ರಾಮಮೋಹನರಿಗೆ ಮತ ವಿಚಾರದಲ್ಲಿ ಒಂದು ಕಡೆ ವಿಗ್ರಹಾ ರಾಧನೆ ಮತ್ತು ಜಾತಿಭೇದಗಳಲ್ಲಿದ್ದ ಅನಾದರವೂ, ಮತ್ತೊಂದು ಕಡೆ ಏಕ ಬ್ರಹ್ಮಭಾವವೂ ಮತ್ತು ಸರ್ವಮತ ಸಮಭಾವವೂ ಪ್ರಕಾಶವಾಗುವುವು. ಈ ನೂತನ ಪೂಜಾಮಂದಿರವು ಯಾವ ಸಂಕುಚಿತ ಭಾವಕ್ಕೂ ಎಡೆಗೊಡದೆ ವಿಶ್ವದಷ್ಟು ವಿಶಾಲವಾಗಿದ್ದು ಮಾನವ ವರ್ಗಕ್ಕೆಲ್ಲ ಅನ್ವಯಿಸುವುದಾಗಿದೆ. ಈ ಮಂದಿರದಲ್ಲಿ ಏಸುಕ್ರಿಸ್ತ, ಮಹಮ್ಮದ್ ಅಥವಾ ನಾರಾಯಣನ ಪೂಜೆಗೆ ಎಡೆಯಿಲ್ಲ. ಒಬ್ಬನೂ ಸರ್ವವ್ಯಾಪಿಯೂ ಆದ ಭಗವಂತನ ಪೂಜೆಗೇ ಪುರಸ್ಕಾರ. ಇದು ಹಿಂದೂಗಳ, ಮಹಮ್ಮದೀಯರ ಅಥವಾ ಕ್ರೈಸ್ತರ ದೇವಸ್ಥಾನವಲ್ಲ, ಸಮಸ್ತ ಮಾನವವರ್ಗದ ದೇವಸ್ಥಾನ. ಇದು ಬಂಗಾಳದವರಿಗಾಗಿ ಅಥವಾ ಭಾರತೀಯರಿಗಾಗಿ ಕಟ್ಟಿದ ಪೂಜಾಮಂದಿರ ವಲ್ಲ ; ಅಖಿಲ ಪ್ರಪಂಚದ ಪೂಜಾನಿವಾಸ.

ಈ ವಿಶ್ವವ್ಯಾಪಿಯಾದ ಸಂಸ್ಥೆಯ ವಿಷಯದಲ್ಲಿ ಯಾರಿಗೆ ತಾನೆ ಭಾವಪರವಶತೆಯುಂಟಾಗದು ? ಇಂಥ ಸಂಸ್ಥೆಯ ಸ್ಥಾಪನೆಗೆ ಕಾರಣ ವಾದ ವ್ಯಕ್ತಿಯ ಬುದ್ಧಿ ಸೂಕ್ಷ್ಮತೆಯು ಯಾರನ್ನು ತಾನೇ ವಿಸ್ಮಯಕ್ಕೂ ಗೌರವಕ್ಕೂ ಒಳಪಡಿಸದು ?

ಇಂಥ ಸಂಸ್ಥೆಯ ನಿರ್ಮಾಣವೇ ರಾಮಮೋಹನರ ಜೀವನದ ಪರಮೋದ್ದೇಶವಾಗಿತ್ತು. ಅದನ್ನು ಸಾಧಿಸಿ ಅವರು ಕೃತಕೃತ್ಯರಾದರು.

ಬ್ರಹ್ಮಸಮಾಜವು ಹೊಸ ಭವನದಲ್ಲಿ ಸುಮುಹೂರ್ತದಲ್ಲಿ ಪ್ರತಿಷ್ಠಿತವಾಗಬೇಕಾಗಿತ್ತು. ಅದಕ್ಕಾಗಿ ೧೮೩೦ ನೆಯ ಜನವರಿ ೨೩ನೆಯ ತೇದಿಯು ಗೊತ್ತಾಯಿತು. ಈ ನೂತನ ಭವನದ ಪ್ರಾರಂಭೋತ್ಸವವು ವಿಜೃಂಭಣೆಯಿಂದ ಜರುಗಿತು. ಇದಕ್ಕೆ ಸುಮಾರು ಐದುನೂರಕ್ಕೆ ಕಡಿಮೆ ಇಲ್ಲದೆ ಹಿಂದೂಗಳೂ, ಮಾಂಟಿಗಾಮರಿ ಮಾರ್ಟಿನ್ ಎಂಬ ಏಕಮಾತ್ರ ವಿದೇಶೀಯನೂ ಬಂದಿದ್ದರು. ಸಭೆಗೆ ಬಂದಿದ್ದ ಹಿಂದೂಗಳಲ್ಲಿ ಅನೇಕರು ಬ್ರಾಹ್ಮಣರಾಗಿದ್ದರು. ರಾಮಮೋಹನರೇ ನೂತನ ಮಂದಿರದ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಆ ಸಂದರ್ಭದಲ್ಲಿ ಅನೇಕ ಬ್ರಾಹ್ಮಣರಿಗೆ ಉಡುಗೊರೆಗಳೂ ದಾನಗಳೂ ಕೊಡಲಾದುವು.

ಬ್ರಹ್ಮಸಮಾಜವು ಹಿಂದಿನಿಂದ ರೂಢಿಗೆ ಬಂದಿದ್ದ ವೈಷ್ಣವ, ಶೈವ, ಶಾಕ್ತೇಯ ಸಂಘಗಳಿಗಿಂತ ಈ ರೀತಿಗಳಲ್ಲಿ ಬೇರೆಯಾಗಿದೆಯೆಂದು ಹೇಳಬಹುದು:—

(೧) ಬ್ರಹ್ಮಸಮಾಜಕ್ಕೆ ಯಾವ ಒಂದು ಮತಗ್ರಂಥದ ಪ್ರಾಮಾಣ್ಯದಲ್ಲಿಯೂ ನಂಬಿಕೆಯಿಲ್ಲ;

(೨) ಅವತಾರಗಳಲ್ಲಿ ನಂಬಿಕೆಯಿಲ್ಲ;

(೩) ಬಹುದೇವತಾಪೂಜೆಯೂ, ವಿಗ್ರಹಾರಾಧನೆಯೂ ಪಾಪಕರವೆಂದು ಅದನ್ನು ಸೂಚಿಸುತ್ತದೆ;

(೪) ವರ್ಣಭೇದವನ್ನು ತಿರಸ್ಕರಿಸುತ್ತದೆ;

(೫) ಕರ್ಮ ಮತ್ತು ಪುನರ್ಜನ್ಮಗಳಲ್ಲಿ ನಂಬಿಕೆಯನ್ನು ಐಚ್ಛಿಕವೆಂದು ಹೇಳುತ್ತದೆ;

(೬) ಇತರ ಸಂಘಗಳಲ್ಲಿ ಮತನಿಯಮಗಳು ವಿಧಿರೂಪದಲ್ಲಿದ್ದರೆ, ಬ್ರಹ್ಮಸಮಾಜದ ನಿಯಮಗಳು ನಿಷೇಧರೂಪದವು.

ಹಿಂದಿನ ಸಂಘಗಳಂತೆಯೇ ಭಗವಂತನ ದಿವ್ಯ ವ್ಯಕ್ತಿತ್ವವನ್ನೂ, ಭಗವಂತನ ಪರಮಾನುಗ್ರಹ ಶಕ್ತಿಯನ್ನೂ, ಭಗವದಾತ್ಮದ ಪೂಜೆಯ ಘನತೆಯನ್ನೂ ಬ್ರಹ್ಮಸಮಾಜವು ಒಪ್ಪುತ್ತದ

ಪೂರ್ವದ ಸಂಘಗಳು ಆಬಾಲವೃದ್ಧರನ್ನೂ ಅನುಗ್ರಹಿಸುವ ದಯಾಮಯವಾದುವು ಅವು ಸಂಪ್ರದಾಯದ ಆಧಾರದ ಮೇಲಿರುವುದರಿಂದ ಕರುಣೆ ಸಹಾನುಭೂತಿ ಸಹಿಷ್ಣುತೆಗಳಿಂದ ಕೂಡಿವೆ ಅವು ಸಮಾಜದ ಸಾಮಾನ್ಯ ಜನರನ್ನು ಆಕರ್ಷಿಸಿದ ಹೊಸದಾಗಿ ಅವತಾರ ಮಾಡಿದ ಬ್ರಹ್ಮ ಸಮಾಜದ ಸಂಘವು ಸಮಾಜದ ವಿದ್ಯಾವಂತ ವರ್ಗವನ್ನು ಮಾತ್ರ ಆಕರ್ಷಿಸಿದ, ಅಲ್ಲದ ಇಸ್ಲಾಂ ಮತ್ತು ಕ್ರೈಸ್ತ ಮತಗಳನ್ನು ಅನುಸರಿಸಿ ವಿಗ್ರಹಾರಾಧನೆಯನ್ನು ನಿಷೇಧಿಸಿ, ಅವುಗಳ ಪೂಜಾಪದ್ಧತಿಗಳನ್ನು ಅನುಸರಿಸಿದೆ ಬ್ರಹ್ಮ ಸಮಾಜದ ಚರಿತ್ರೆಯನ್ನು ಬರೆದಿಟ್ಟಿರುವ ಪಂಡಿತ ಶಿವನಾಥ ಶಾಸ್ತ್ರಿಯವರು ಬ್ರಹ್ಮ ಸಮಾಜದ ರೀತಿ ನೀತಿಗಳನ್ನು ಕುರಿತು ಹೀಗೆ ಹೇಳಿದ್ದಾರೆ "ನಮ್ಮಲ್ಲಿ ಸಹೃದಯರಾದವರಿಗೆ ಹಿಂದೂ ಧರ್ಮ ಗ್ರಂಥಗಳಲ್ಲಿ ಅಡಗಿರುವ ಸದ್ಭಕ್ತಿ ಆಚರಣೆಗಳಿಗಿಂತ ಪಾಶ್ಚಾತ್ಯರ ಮಾದರಿಗಳು ಹೆಚ್ಚು ಮನಮೋಹಕಗಳಾಗಿವೆ ಹಿಂದೂ ಪದ್ಧತಿಯ ಧ್ಯಾನ ಸಮಾಧಿಗಳಲ್ಲಿ ನಮಗಿರುವ ಆಸಕ್ತಿಗಿಂತಲೂ ಪಾಶ್ಚಾತ್ಯರು ಬಾಯಲ್ಲಿ ಹೇಳುವ ಪ್ರಾರ್ಥನೆಯೂ ಭಜನವೂ ಪ್ರಿಯವಾಗಿವೆ"

ಹಿಂದೂ ಪೂಜಾವಿಧಾನ ಆದರ್ಶಗಳಿಗಿಂತ ಪಾಶ್ಚಾತ್ಯರ ಪೂಜಾವಿಧಾನಗಳೂ ಆದರ್ಶಗಳೂ ದೇಶೀಯರಿಗೆ ಮೋಹಕವಾಗಿವೆಯೆಂದು ಪರಕೀಯರು ಮಾಡಿರುವ ಆಕ್ಷೇಪಣೆಯು ಸಾಧುವಾಗಿಯೇ ಇದೆಯೆಂದು ಪಂಡಿತ ಶಿವನಾಥಶಾಸ್ತ್ರಿಗಳು ಒಪ್ಪಿಕೊಂಡಿದ್ದಾರೆ

ಈಗಲೂ ಬ್ರಹ್ಮ ಸಮಾಜದಲ್ಲಿ ಪೂಜಾ ಕ್ರಮವು ಕ್ರೈಸ್ತರ ಪೂಜಾ ಮಂದಿರಗಳಲ್ಲಿರುವಂತೆಯೇ ಇರುವುದು ಈ ದೃಷ್ಟಿಯಿಂದ ಬ್ರಹ್ಮ ಸಮಾಜವು ಏಸುವ್ಯಕ್ತಿಯಿಲ್ಲದ ಕ್ರೈಸ್ತ ಮತವಾಗಿದ

ನಿಯಮಗಳಲ್ಲಿ ಬ್ರಹ್ಮ ಸಮಾಜವು ಕ್ರೈಸ್ತ ಇಸ್ಲಾಂ ಮತಗಳಿಗಿಂತ ದುರ್ಬಲವಾದುದು ಆ ಮತಗಳಿಗೆ ಒಂದು ಗೊತ್ತಾದ ತಳಹದಿಯೂ ಗ್ರಂಥ ಪ್ರಾಮಾಣ್ಯವೂ ಇರುವಾಗ ಬ್ರಹ್ಮ ಸಮಾಜದ ಪ್ರಾಮಾಣ್ಯವು

ವ್ಯಕ್ತಿಯ ವಿಚಾರಪರತೆ ಅಥವಾ ಸ್ಫೂರ್ತಿಯನ್ನು ಆಶ್ರಯಿಸಿರುವುದು, ಎಂಬುದೆ ಕೇವಲ ಮಾನಸಿಕ ಪ್ರಾಪಂಚ್ಯಾವೃತ್ತಿದ್ದಾಗಿದೆ. ಬ್ರಹ್ಮ ಸಮಾಜವು ಉಪಯೋಗಿಸುವ ಹಿಂದೂ ಮತ್ತು ಇತರ ಮತಗಳ ಪ್ರಾರ್ಥನೆಗಳು ಪೂಜೆ ಧ್ಯಾನಗಳಿಗೆ ಸಹಾಯಕರವಾಗಿರಬೇಕೆಂದೇ ಹೊರತು ಅವು ಅವಶ್ಯವೆಂದಲ್ಲ.

ಬ್ರಹ್ಮಸಮಾಜವು ಅಮೂಲ್ಯ ಸಮಾಜ ಪರಿಷ್ಕರಣ ಕಾರ್ಯಗಳನ್ನು ನಡೆಸಿದ್ದರೂ, ಅನೇಕ ಪ್ರಸಿದ್ಧ ಮಹನೀಯರು ಆ ಸಂಘದ ಅನುಯಾಯಿಗಳಾಗಿದ್ದರೂ, ಅದು ಭಾರತದ ಧಾರ್ಮಿಕಗಗನದಲ್ಲಿ ಇನ್ನೂ ಕಿರುತಾರೆಯಂತೆಯೇ ಮಿನುಗುತ್ತಿದೆ. ಅದು ಅತಿಹೆಚ್ಚಿನ ಸಂಸ್ಕೃತಿಯನ್ನು ಬಯಸುವವರ ಧರ್ಮವಾಗಿಯೇ ಉಳಿದಿದೆ. ಅವರ ಪ್ರಾರ್ಥನಾಗೀತಗಳು ಉಜ್ವಲವಾಗಿದ್ದರೂ ಅವು ಶೂನ್ಯತೆಯ ಕಡೆಗೆ ಕೈ ತೋರಿಸುವುವು. ಹಿಂದಿನ ತ್ರಿಮತ ಸ್ಥಾಪಕರಾದ ಆಚಾರ್ಯರು ವಿಚಾರಪರತೆಯಿಂದ ಪರಿಷ್ಕರಣ ನಡೆಸಿದ್ದರೂ, ಅವರಿಗೆ ತುಂಬಿದ ಧಾರ್ಮಿಕ ಅನುಭವವಿದ್ದರೂ, ಗೊತ್ತಾದ ಹಿಂದೂ ಪ್ರಮಾಣ ಗ್ರಂಥಗಳ ಆಧಾರದ ಮೇಲೆಯೇ ಅವರ ಪಂಥಗಳನ್ನು ನೆಲೆಗೊಳಿಸಿದರು. ಬ್ರಹ್ಮಸಮಾಜವು ಪ್ರಮಾಣ ಗ್ರಂಥಗಳ ಬೆಲೆಯನ್ನು ಅರಿಯದೆ ಹೋದುದು ಅದರ ನಿಯಮಗಳಲ್ಲಿ ಒಂದು ಕೊರತೆ ಮತ್ತು ಆ ಪಂಥವು ವ್ಯಾಪಿಸದಿರಲು ಆತಂಕ. ಆದರೂ ಬ್ರಹ್ಮ ಸಮಾಜದಿಂದ ಹಿಂದೂ ಧರ್ಮಕ್ಕೆ ಉಪಕಾರವಾಗದೆ ಹೋಗಲಿಲ್ಲ. ಹಿಂದೂ ಧರ್ಮಕ್ಕೂ ಕ್ರೈಸ್ತ ಧರ್ಮಕ್ಕೂ ಮಧ್ಯಸ್ಥವಾದ ವಿಧಿಗಳನ್ನು ಕಲ್ಪಿಸಿ ಆ ಮೂಲಕ ಭಾರತೀಯರು ಹಿಂದೂ ಧರ್ಮವನ್ನು ತ್ಯಜಿಸಿ ಕ್ರೈಸ್ತ ಧರ್ಮವನ್ನು ಕೈಕೊಳ್ಳುವುದನ್ನು ತಪ್ಪಿಸಿ ಹಿಂದೂ ಧರ್ಮಕ್ಕೆ ಒದಗಿದ್ದ ಆಘಾತವನ್ನು ತಪ್ಪಿಸಿತು. ಅಲ್ಲದೆ ಸನಾತನ ಧರ್ಮವನ್ನು ಪುನರುಜ್ಜೀವಿತಗೊಳಿಸುವುದನ್ನು ಹವಣಿಸುವುದರಲ್ಲಿ ಧರ್ಮನಿಷ್ಠರಾದ ಹಿಂದೂಗಳನ್ನು ಎಚ್ಚರಗೊಳಿಸಿತು.

ಬ್ರಹ್ಮ ಸಮಾಜದ ಏಳಿಗೆಯು ನಿರಾತಂಕವಾಗಿ ಆಯಿತೆಂದು ಹೇಳಲಾಗದು. ಬ್ರಹ್ಮ ಸಮಾಜದ ಅಭಿವೃದ್ಧಿಯನ್ನೂ, ಅದು ಹೊಸ ಮಂದಿರದಲ್ಲಿ ಪ್ರತಿಷ್ಠಿತವಾದುದನ್ನೂ, ರಾಮಮೋಹನರ ವಿರೋಧಿ ಪಕ್ಷದವರು ಸಹನೆಯಿಂದ ಕಾಣಲಿಲ್ಲ. ಬ್ರಹ್ಮ ಸಮಾಜದ ಹೊಸ ಮಂದಿರದ ಆರಂಭೋತ್ಸವವು ನಡೆಯುವುದಕ್ಕೆ ೬ ದಿನಗಳು ಮುಂಚಿತವಾಗಿ ಸಂಪ್ರದಾಯ ಪಕ್ಷದವರು, ಬ್ರಹ್ಮ ಸಮಾಜಕ್ಕೆ ವಿರೋಧವಾಗಿ, "ಧರ್ಮಸಭೆ"

ಎಂಬ ಸಂಸ್ಥೆಯನ್ನು ಸ್ಥಾಪಿಸಿದರು ಅನೇಕ ಶ್ರೀಮಂತರು ಇದಕ್ಕೆ ಸದಸ್ಯರಾದರು, ೧೧,೨೬೦ ರೂಪಾಯಿಗಳು ಶೇಖರವಾದುವು ಬ್ರಹ್ಮ ಸಮಾಜದ ಪ್ರಭಾವವನ್ನು ತಡೆಗಟ್ಟುವುದೂ ಹಿಂದೂ ವಿಧಿಗಳನ್ನು ಆಚರಿಸದಿದ್ದವರಿಗೆ ಬಹಿಷ್ಕಾರ ಹಾಕುವುದೂ ಈ 'ಸಭೆ'ಯ ಉದ್ದೇಶವಾಗಿತ್ತು ಬ್ರಹ್ಮ ಸಮಾಜವನ್ನು ನಿರ್ಮೂಲ ಮಾಡುವುದಾಗಿ 'ಸಭೆ'ಯವರು ಭಾವಿಸಿದ್ದರು 'ಸಭೆ'ಗೆ ಒಂದು ಶಾಶ್ವತ ಭವನವನ್ನು ಹವಣಿಸಬೇಕೆಂಬ ಯೋಚನೆಯೂ ಇತ್ತು ಆದರೆ ಅದು ಫಲಿಸಲಿಲ್ಲ ಈ ಸಂಸ್ಥೆಗೆ ಭವಾನಿ ಚರಣ ಬಾನರ್ಜಿ ಎಂಬ ವಿದ್ವಾಂಸನು ಅಧ್ಯಕ್ಷನಾದನು, ರಾಧಾಕಾಂತ ದೇವನು ಕಾರ್ಯದರ್ಶಿಯಾದನು.

ಹೀಗೆ ಕಲ್ಕತ್ತೆಯ ಹಿಂದೂ ಸಮಾಜದಲ್ಲಿ ಎರಡು ಪ್ರಬಲವಾದ ಪಕ್ಷಗಳು ಹುಟ್ಟಿದುವು ಎರಡು ಪಕ್ಷದಲ್ಲಿಯೂ ಅನೇಕ ಪ್ರಸಿದ್ಧರಾದವರಿದ್ದರು 'ಧರ್ಮಸಭೆ'ಯವರು ತಮ್ಮ ಪಕ್ಷದ "ಸಮಾಚಾರ ಚಂದ್ರಿಕೆ" ಎಂಬ ಪತ್ರಿಕೆಯಲ್ಲಿ ದಿನವೂ ಸುಧಾರಕವರ್ಗದ ಮೇಲೆ ಬೈಗುಳವನ್ನು ಸುರಿಸುತ್ತಿದ್ದರು ಅದಕ್ಕೆ ಉತ್ತರವನ್ನು ಅವರಷ್ಟೇ ತೀಕ್ಷ್ಣವಾಗಿ ಸುಧಾರಕ ಗುಂಪಿನವರು ತಮ್ಮ 'ಕೌಮುದಿ' ಯಲ್ಲಿ ಸುರಿಸುತ್ತಿದ್ದರು ಈ ಮಹಾ ಕೋಲಾಹಲದಲ್ಲಿ ಸಾಮಾನ್ಯವರ್ಗದ ಪ್ರಜೆಗಳೂ ಭಾಗವಹಿಸುತ್ತಿದ್ದರು ರಾಮಮೋಹನರ ಲೇಖನಗಳು ಸುಲಭವಾದ ಬಂಗಾಳಿಯಲ್ಲಿ ಇರುತ್ತಿದ್ದುದರಿಂದ ಸಾಮಾನ್ಯರಿಗೂ ಪಂಡಿತರಿಗೂ ಅರ್ಥವಾಗುತ್ತಿತ್ತು ಸ್ನಾನಘಟ್ಟಗಳಲ್ಲಿಯೂ, ಅಂಗಡಿ ಬೀದಿಗಳಲ್ಲಿಯೂ, ಬೀದಿ ಚೌಕಗಳಲ್ಲಿಯೂ, ಪ್ರಮುಖಪ್ರಜೆಗಳ ದಿವಾನ್ ಖಾನೆಗಳಲ್ಲಿಯೂ--ಎಲ್ಲ ಕಡೆಗಳಲ್ಲಿಯೂ ಈ ಎರಡು ಪಂಗಡಗಳ ಮಾತೇ ಮಾತು ರಾಮಮೋಹನರ ತತ್ತ್ವಗಳನ್ನು ಹಾಸ್ಯಕ್ಕೆ ಈಡುಮಾಡುವ ವಿಕಟ ಕವನಗಳು ರಚಿತವಾಗಿ ಎಲ್ಲರ ಬಾಯಿಗಳಲ್ಲಿಯೂ ನಲಿಯುತ್ತಿದ್ದುವು, ಇದರಿಂದ ಬೀದಿಗಳೇ ವಿಕಟಹಾಸ್ಯ ವಿನೋದಗಳಿಂದ ಪ್ರತಿಧ್ವನಿತವಾಗುತ್ತಿದ್ದುವು ಈ ಚಳುವಳಿಯು ಕಲ್ಕತ್ತೆಯಿಂದ ಹಳ್ಳಿಗಾಡಿಗೂ ಹಬ್ಬಿತು ಈ ಎರಡು ತಂಡಗಳವರ ದ್ವೇಷ ವಿದ್ವೇಷಗಳು ಅತಿ ತೀವ್ರವಾಗಿದ್ದುದರಿಂದ ಬ್ರಹ್ಮ ಸಮಾಜದ ಆರಂಭೋತ್ಸವದ ದಿನ ರಾಮಮೋಹನರಿಂದ ಉಡುಗೊರೆ ಬಹುಮಾನಗಳನ್ನು ಪಡೆದಿದ್ದ ಬ್ರಾಹ್ಮಣರಿಗೆ "ಧರ್ಮಸಭೆ"ಯು ಬಹಿಷ್ಕಾರಹಾಕಿತು. ಆ ನೂರಾರು ಮಂದಿಯನ್ನು ಪೋಷಿಸುವ ಭಾರವು

ರಾಮಮೋಹನರ ಶ್ರೀಮಂತಸ್ನೇಹಿತರ ಕೆಲಸವಾಯಿತು. ಇಷ್ಟೇ ಅಲ್ಲದೆ ದ್ವೇಷೋದ್ದೀಪಿತರಾದ ವಿರೋಧಿಗಳು ರಾಮಮೋಹನರ ಜೀವಕ್ಕೂ ಹಾನಿಯನ್ನು ಒಡ್ಡಲು ಹವಣಿಸುತ್ತಿದ್ದರು. ಎರಡು ಪ್ರಯತ್ನಗಳೂ ನಡೆದುವು. ಇವರಿಂದ ರಾಮಮೋಹನರು ಆತ್ಮರಕ್ಷಣೆಗಾಗಿ ಮನೆಯಲ್ಲಿ ಮದ್ದು, ತುಪಾಕಿಗಳನ್ನೂ ಭರ್ಜಿ ಮೊದಲಾದ ಆಯುಧಗಳನ್ನೂ ಶೇಖರಿಸ ಬೇಕಾಯಿತು. ಪೇಟೆಯೊಳಗೆ ಹೊರಟಾಗ ಮಾಂಟಗಾಮರಿ ಮಾರ್ಟಿನ್ನನ ಮತ್ತು ನೇವಕರ ಜೊತೆಯಲ್ಲಿ ಕತ್ತಿ, ಪಿಸ್ತೂಲು, ಭರ್ಜಿ ಮೊದಲಾದ ಆಯುಧಗಳ ಸಮೇತ ಹೋಗುತ್ತಿದ್ದರು. ಅವರು ಮಾತ್ರವಲ್ಲದೆ ಅವರ ಕುಟುಂಬವೂ ಈ ಭಯಕ್ಕೆ ಸಿಕ್ಕಿ ಸರ್ವದಾ ರಕ್ಷಣೆಯಲ್ಲಿಯೇ ಇರಬೇಕಾಗಿತ್ತು. ಅವರನ್ನು ಜಾತಿಯಿಂದ ಹೊರಗೆ ಹಾಕುವುದಕ್ಕೆ ಸಹಾಯವಾಗುವ ಕೃತ್ಯವನ್ನೇನಾದರೂ ಅವರು ನಡೆಸುವರೋ ಎಂದು ತಿಳಿಯಲು ವಿರೋಧಿಗಳು ಅವರ ಮನೆಗೋಡೆಗಳಲ್ಲಿ ರಂಧ್ರ ಕೊರೆದು ಅವರ ರಹಸ್ಯ ಕೃತ್ಯಗಳನ್ನೂ ಪರೀಕ್ಷಿಸುತ್ತಿದ್ದರು. ಮಾಂಟಗಾಮರಿ ಮಾರ್ಟಿನ್ನನು ಆ ಕಾಲದಲ್ಲಿ ರಾಮಮೋಹನರ ಜೊತೆಯಲ್ಲಿಯೇ ಇರುತ್ತಿದ್ದನು. ರಾಮಮೋಹನರ ವಿವೇಚನಾಯುಕ್ತವಾದ ವಿಶ್ವ ಮತದ ಬಿರುಹೊನಲಿನಲ್ಲಿ "ಧರ್ಮಸಭೆ"ಯ ಕಾರ್ಯೋದ್ಯಮಗಳು ಕೊಚ್ಚಿ ಹೋದುವು.

ರಾಮಮೋಹನರ ಸಹಗಮನ ನಿರೋಧ ಚಳುವಳಿಯಿಂದಲೂ, ಬ್ರಹ್ಮ ಸಮಾಜ ಸ್ಥಾಪನೆಯಿಂದಲೂ, ಅವರ ಆಧ್ಯಾತ್ಮಿಕ, ಸಾಮಾಜಿಕ ವಿಚಾರಗಳ ಲೇಖನ ಮತ್ತು ಪುಸ್ತಕಗಳಿಂದಲೂ, ಮುಖ್ಯವಾಗಿ ಕಲ್ಕತ್ತೆಯಲ್ಲಿಯೂ, ಒಟ್ಟಿನಲ್ಲಿ ಬಂಗಾಳದಲ್ಲಿಯೂ, ಜನರ ಮನಸ್ಸು ಕಲಕಿತ್ತು. ಎಲ್ಲ ವಿಚಾರಗಳಲ್ಲಿಯೂ ಸಾಂಪ್ರದಾಯಿಕವಾಗಿ ಬಂದ ಆಚಾರ ವ್ಯವಹಾರಗಳಲ್ಲಿ ಶ್ರದ್ಧೆ, ನಂಬಿಕೆಗಳು ತಪ್ಪಿ ಒಂದು ಸ್ವತಂತ್ರ ವಿಚಾರವಾಹಿನಿಯು ಹೊರಟಿತ್ತು. ಅದೇ ಸಂದರ್ಭದಲ್ಲಿ ಸಮಾಜದ ಶಾಂತಿಭಾವವನ್ನು ನೀಗಿ ಅಲ್ಲಕಲ್ಲೋಲ ಉಂಟುಮಾಡುವ ಮತ್ತೊಂದು ಸಂದರ್ಭ ಪ್ರೊದಗಿತು. ಇಂಗ್ಲಿಷ್ ವಿದ್ಯಾಪ್ರಚಾರಕ್ಕಾಗಿ ೧೮೧೭ರಲ್ಲಿ ಕಲ್ಕತ್ತೆಯಲ್ಲಿ ಹಿಂದೂ ಕಾಲೇಜು ಸ್ಥಾಪಿತವಾಗಿತ್ತಷ್ಟೆ. ಅದರ ಸ್ಥಾಪನೆಗೆ ರಾಮಮೋಹನರೂ ನೆರವಾಗಿದ್ದುದನ್ನು ಹಿಂದೆ ನೋಡಿದ್ದೇವೆ. ಇಂಗ್ಲಿಷ್ ವಿದ್ಯಾಭ್ಯಾಸವು ಮೊದಮೊದಲು ವಂಗಯುವಕರಿಗೆ ಹಿತಕರವಾಗಿತ್ತೆಂಬ ಸೂಚನೆಯು

ಕಂಡುಬರಲಿಲ್ಲ  ಅಲ್ಲಿ ವ್ಯಾಸಂಗಹೊಂದಿದ ಯುವಕರು ನಿರೀಶ್ವರವಾದವನ್ನು ಘಂಟಾಘೋಷವಾಗಿ ಸಾರಿದರು. ಇದು ಅವರ ಪೋಷಕರಲ್ಲಿ ಭಯೋತ್ಪಾದನೆ ಮಾಡಿತು  ಹಿಂದೂ ಕಾಲೇಜಿನ ಅಧ್ಯಾಪಕವರ್ಗದಲ್ಲಿ ಡರೋಜಿಯೋ ಎಂಬ ಆಂಗ್ಲ ಯುವಕನಿದ್ದನು  ಅವನು ತನ್ನ ಗುರುವಿನಿಂದ ಫ್ರಾನ್ಸಿನ ಕ್ರಾಂತಿ ತತ್ತ್ವಗಳನ್ನು ಪೂರ್ತಿಯಾಗಿ ತಿಳಿದಿದ್ದನು  ಅವನು ಸಂಪ್ರದಾಯಮಾರ್ಗವನ್ನು ಧಿಕ್ಕರಿಸಿ ಸ್ವತಂತ್ರಮಾರ್ಗದ ಬೋಧನೆಯಿಂದಲೂ, ಉದ್ರೇಕಗೊಳಿಸುವ ವಾಕ್ಚಾತುರಿಯಿಂದಲೂ, ವಿದ್ಯಾರ್ಥಿಗಳ ಮನಸ್ಸನ್ನು ಸಂಪೂರ್ಣವಾಗಿ ಆಕರ್ಷಿಸಿದ್ದನು  ಯಾವ ಅಧ್ಯಾಪಕನಿಗೂ ಸಾಧ್ಯವಲ್ಲದಷ್ಟು ಪ್ರಭಾವವನ್ನು ಅವನು ಅವರ ಮನಸ್ಸುಗಳ ಮೇಲೆ ಬೀರಿದ್ದನು  ಅವನು ೧೮೨೮ರಲ್ಲಿ ಕಾಲೇಜಿನ ಮೇಲ್ತರಗತಿಯ ಯುವಕರೊಂದಿಗೆ ಒಂದು ಚರ್ಚಾಸಂಘವನ್ನು ಹೂಡಿದನು  ಅಲ್ಲಿ ಯುವಕರಿಗೆ ಸಂಪೂರ್ಣ ಭಾಷಣ ಸ್ವಾತಂತ್ರ್ಯವಿತ್ತು , ಪೂಜ್ಯವಾದುದಾಗಲಿ, ಹೇಯವಾದುದಾಗಲಿ ಅಲ್ಲಿ ವಿಮರ್ಶೆಗೆ ಬರದ ವಿಚಾರವಿರಲಿಲ್ಲ  ಇದರ ಫಲವಾಗಿ ಸಮಾಜವನ್ನೇ ಕ್ರಾಂತಿಗೊಳಿಸುವ ಅಗ್ನಿಕಣಗಳು ಪ್ರಚಲಿತವಾದುವು. ಅದನ್ನು ತಡೆಗಟ್ಟುವುದು ಯಾರಿಗೂ ಸಾಧ್ಯವಾಗಲಿಲ್ಲ  ಡೆರೋಜಿಯೋವು ತನ್ನ ಅನುಯಾಯಿಗಳಿಗೆ ಮಾತಿನಲ್ಲಿಯೂ ನಡತೆಯಲ್ಲಿಯೂ ಪ್ರಾಮಾಣಿಕತೆಯನ್ನೂ, ಸ್ವತಂತ್ರ ವಿಚಾರಪರತೆಯನ್ನೂ ತಮ್ಮ ಅಭಿಪ್ರಾಯದಲ್ಲಿ ನಂಬಿಕೆಯ ಆವಶ್ಯಕತೆಗಳನ್ನೂ, ಉಪದೇಶಿಸಿದನು  ಅವನ ಈ ಸ್ವತಂತ್ರ ವಿಚಾರಮತವು ಎಲ್ಲೆಲ್ಲಿಯೂ, ಅವನನ್ನು ಕಾಣದ, ಅವನ ಶಿಷ್ಯರಲ್ಲದವರಲ್ಲಿಯೂ, ಹರಡಿತು  ಗುರುವಿನ ಮಾತನ್ನು ಸರಿಯಾಗಿ ಅರ್ಥಮಾಡಿ ಜೀರ್ಣಿಸಿಕೊಳ್ಳಲಾರದ ಹಿಂದೂ ಯುವಕರಿಗೆ ಸ್ವಾತಂತ್ರ್ಯವೆಂದರೆ ಹಿರಿಯರ ಸಂಪ್ರದಾಯಗಳನ್ನು ವಿರೋಧಿಸುವುದೂ, ಸ್ವಾಭಿಮತ ನಂಬಿಕೆ ಎಂದರೆ ಪ್ರಚಾರದಲ್ಲಿದ್ದ ಮತಾಚಾರಗಳ ದೂಷಣೆಯೂ ನಿರೀಶ್ವರತೆಯ ಅಂಗೀಕಾರವೂ, ಆಗಿತ್ತು  ಡೆರೋಜಿಯೋವಿನ ಕ್ರಾಂತಿಕಾರಕ ಅಭಿಪ್ರಾಯಗಳನ್ನು ಚಿಕ್ಕವರೂ ದೊಡ್ಡವರೂ ಎಲ್ಲರೂ ಕಲಿತರು  ದಡವನ್ನು ಮೀರದೆ ಶಾಂತವಾಗಿ ಹರಿಯಬೇಕಾಗಿದ್ದ ಸ್ವತಂತ್ರ ವಿಚಾರವಾಹಿನಿಯು

ಹುಚ್ಚುಹೊಳೆಯಾಗಿ ಅಲ್ಲಕಲ್ಲೋಲವಾಗಿ ಪರಿಣಮಿಸಿತು. ಹಿಂದೂ, ಮಹಮ್ಮದೀಯ, ಕ್ರೈಸ್ತ ಎಲ್ಲ ಮತಗಳೂ ತಿರಸ್ಕೃತವಾಗಿ ನಿರೀಶ್ವರ ಮತ ಒಂದು ಮಾತ್ರ ಉಳಿಯಿತು. ಈ ಕಲ್ಲೋಲಕ್ಕೆ ಬೀಜ ಪ್ರಾಯವಾಗಿದ್ದ ಹಿಂದೂ ಕಾಲೇಜಿನ ವ್ಯವಸ್ಥಾಪಕರು ಅವನ ನಡತೆಯನ್ನು ಸರಿಪಡಿಸಿ ಕೊಳ್ಳಬೇಕೆಂದು ೧೮೩೯-೩೦ರಲ್ಲಿ ಪದೇ ಪದೇ ಎಚ್ಚರಿಸಿದರು. ಕೊನೆಗೆ ಕಲ್ಕತ್ತೆಯ ಹಿಂದೂ ವೈದಿಕಪಕ್ಷದವರು ಭೀತಿಗೊಂಡು ಬಾಬು ರಾಮ ಕಮಲ ಸೆನ್ನನ (ಕೇಶವ ಚಂದ್ರಸೇನನ ತಾತ) ಮುಖಂಡತೆಯಲ್ಲಿ ಡಿರೋಜಿಯೋವನ್ನು ಕೆಲಸದಿಂದ ನಿವೃತ್ತಿಗೊಳಿಸಿದರು.

ವಿಗ್ರಹಾರಾಧನೆಯು ದೂಷ್ಯವೆಂದು ನಿಂದಿಸಿದರೂ ರಾಮಮೋಹನರು ನಿರೀಶ್ವರವಾದಿಯಾದ ನಾಸ್ತಿಕರಾಗಿರಲಿಲ್ಲ. ವಿಗ್ರಹಾರಾಧನೆಗಿಂತಲೂ ಹೆಚ್ಚಾಗಿ ನಾಸ್ತಿಕ್ಯವನ್ನು ನಿಂದಿಸಿ ಖಂಡಿಸಿದರು. ಯಾರೋ ಆಸ್ತಿಕನಾಗಿ ದ್ದವನು ನಾಸ್ತಿಕನಾದನೆಂಬುದನ್ನು ಅವರು ಕೇಳಿ "ಕೊನೆಗೆ ಮೃಗವಾಗು ವನು'' ಎಂದರಂತೆ. ನಾಸ್ತಿಕ್ಯವು ಮನುಷ್ಯನ ಸ್ವಭಾವಕ್ಕೆ ವಿರುದ್ಧವಾದು ದೆಂದೂ ವಿಗ್ರಹಾರಾಧನೆಗಿಂತಲೂ ಹೆಚ್ಚು ಅಸಹಜವಾದುದೆಂದೂ ಭಾವಿಸಿ ದ್ದರು. ಆಸ್ತಿಕ್ಯವೇ ಎಲ್ಲ ಭಾವನೆಗಳಿಗೂ ಆಧಾರವೆಂದು ತಿಳಿದಿದ್ದರು. ಈ ಭಾವನೆಯನ್ನು ಅಭಿವೃದ್ಧಿಗೊಳಿಸುವುದೇ ವಿದ್ಯೆಯ ಪರಮೋದ್ದೇಶವೆಂದು ಭಾವಿಸಿದ್ದರು. ಬ್ರಹ್ಮಜ್ಞಾನವೇ ಇತರ ಎಲ್ಲವುಗಳಿಗಿಂತಲೂ ಮೇಲಾದು ದೆಂದು ತಿಳಿದಿದ್ದರು. ಬ್ರಹ್ಮಜ್ಞಾನದ ಎದುರಿನಲ್ಲಿ ಉಳಿದೆಲ್ಲವೂ ಲುಪ್ತವಾ ಗುವುದು. ಈ ಜ್ಞಾನವೇ ಮನುಷ್ಯನ ಏಳಿಗೆಗೆ ಕಾರಣವಾಗಿರುವುದು ಮತ್ತು ಅವನ ಏಳಿಗೆಯ ಒರೆಗಲ್ಲಾಗಿರುವುದು. ಈ ಜ್ಞಾನವೇ ಮನುಷ್ಯನ ಐಹಿಕ ಮತ್ತು ಪಾರಲೌಕಿಕ ಸುಖಕ್ಕೆ ತಳಹದಿಯಾಗಿರುವುದು. ಇಂಥ ಜ್ಞಾನವನ್ನು ತಮ್ಮ ದೇಶಬಾಂಧವರಲ್ಲಿ ಹರಡುವುದು ತಮ್ಮ ಪೂಜ್ಯ ಕರ್ತವ್ಯವೆಂದು ಭಾವಿಸಿದ್ದರು. ನಾಸ್ತಿಕ ಜನರು ಶ್ರೇಷ್ಠ ಜನಾಂಗದವ ರಾಗಲಾರರೆಂಬುದನ್ನು ಚರಿತ್ರೆಯಿಂದ ತಿಳಿದಿದ್ದರು. ದೇವರು, ಪುನರ್ಜನ್ಮ, ಧರ್ಮಶ್ರದ್ಧೆ—ಇವು ಎಲ್ಲರ ಮನಸ್ಸಿನಿಂದ ತೊಡೆದುಹೋದರೆ ಸಮಾಜದ

ಕಟ್ಟು ಸಡಿಲವಾಗಿ ಪುಡಿಪುಡಿಯಾಗುವುದು. ದೈವ ವಿಚಾರವು ನಮ್ಮ ಸ್ವಭಾವದಿಂದ ನಿರ್ಮೂಲ ಮಾಡಲಾಗದ ಒಂದು ನಿಯಮ; ಮತ್ತು ಮಾನವ ವರ್ಗದ ಏಳಿಗೆಗೆ ಅತ್ಯಗತ್ಯವಾದುದು. ದೇವರಿಲ್ಲವೆಂದೂ, ಮಾನವನ ಮಾನಸಿಕ ಮತ್ತು ದೈಹಿಕ ವ್ಯಾಪಾರಗಳೆಲ್ಲ ಅದೃಷ್ಟಜನ್ಯವೆಂದೂ, ಸೂರ್ಯ ಚಂದ್ರ ನಕ್ಷತ್ರಾದಿಗಳು ಆಕಸ್ಮಿಕವಾಗಿ ಉದ್ಭವಿಸಿದುವೆಂದೂ, ನಿಶಿಯಲ್ಲಿ ಮಾಡುವ ಪಾಪಕರ್ಮಗಳು ಯಾರ ಗೋಚರಕ್ಕೂ ಬಾರವೆಂದೂ, ಮಾನವನು ನಂಬಿದೇ ಆದರೆ ಅವನು ನಾಸ್ತಿಕದ ಪಂಕ ಕೂಪದಲ್ಲಿ ಮುಳುಗಿ ಶುದ್ಧ ಅಸಭ್ಯನಾಗುವನು. ರಾಮಮೋಹನರ ವಯಸ್ಸು ಹೆಚ್ಚಿದಂತೆಲ್ಲ ಜನಾಂಗಕ್ಕೆ ದೇವರಲ್ಲಿ ನಂಬಿಕೆ ಮತ್ತು ಮತಾಚಾರಗಳಲ್ಲಿ ಶ್ರದ್ಧೆ ಇವುಗಳ ಆವಶ್ಯಕತೆಯನ್ನೂ, ನಾಸ್ತಿಕ್ಯದ ಅನರ್ಥಗಳನ್ನೂ, ಹೆಚ್ಚು ಹೆಚ್ಚಾಗಿ ತಿಳಿದರು. ಅವರು ಚಿಕ್ಕ ವಯಸ್ಸಿನಲ್ಲಿ ಅಂಧಶ್ರದ್ಧೆಯ ಅನರ್ಥಗಳನ್ನು ಮನಗಂಡು ಅದನ್ನು ಹೋಗಲಾಡಿಸುವುದರಲ್ಲಿ ಉದ್ಯುಕ್ತರಾದರು; ಕೊನೆಗಾಲದಲ್ಲಿ, ನಾಸ್ತಿಕ್ಯದಿಂದಾಗುವ ಅನರ್ಥಗಳು ಅಂಧಶ್ರದ್ಧೆಯದಕ್ಕಿಂತಲೂ ಹೆಚ್ಚೆಂದು ತಿಳಿದು ಅದನ್ನು ತಪ್ಪಿಸಲು ಶ್ರಮಿಸಿದರು. ಕಲ್ಕತ್ತೆಯಲ್ಲಿ ಬುದ್ಧಿವಂತರಾದ ಯುವಕರು ಸಂಪೂರ್ಣ ನಾಸ್ತಿಕರೆಂದು ಹೇಳಿಕೊಳ್ಳುತ್ತಿದ್ದುದನ್ನು ನೋಡಿ ರಾಮಮೋಹನರು ವಿಷಾದಿಸಿದರು. ಈ ಅವಿವೇಕ ಯುವಕರ ತಂಡದಲ್ಲಿ ಕ್ರೈಸ್ತರೂ ಹಿಂದೂಗಳೂ ಸೇರಿದ್ದರು. ಹಿಂದೂ ಯುವಕರು ಅವರು ಪಡೆದ ವಿದ್ಯೆಯಿಂದ ತಮ್ಮ ಮತಾಚಾರಗಳು ದೂಷ್ಯವೆಂದು ತಿಳಿದು ಅವನ್ನು ನಿರಾಕರಿಸಿದರು; ಆದರೆ ಅದಕ್ಕಿಂತ ಉತ್ತಮವಾದುದನ್ನು ಗ್ರಹಿಸಲಿಲ್ಲ. ಇಂಥವರು ತೀವ್ರ ಸ್ವಮತಾಂಧರಾದ ಹಿಂದೂಗಳಿಗಿಂತಲೂ ಹೆಚ್ಚು ಅಧಮರೆಂದೂ, ಇಂಥವರ ತತ್ತ್ವಗಳು ಸಮಾಜದ ನೀತಿಧರ್ಮಗಳಿಗೆ ಅನರ್ಥಕಾರಿಯೆಂದೂ, ರಾಮಮೋಹನರು ತಿಳಿಸಿದರು. ಹೀಗೆ ಅವರು ತಮ್ಮ ಕಾಲದಲ್ಲಿಯೇ ಒಂದು ಕಡೆ ಕೇವಲ ಮೌಢ್ಯಯುಕ್ತವಾದ ವಿಗ್ರಹಾರಾಧನೆ ಮೊದಲಾದ ರೂಢಮೂಲವಾದ ಆಚಾರಗಳ ಹೊಡೆತವನ್ನು ಎದುರಿಸಬೇಕಾಯಿತು;

ಮತ್ತೊಂದುಕಡೆ, ನಾಸ್ತಿಕ್ಯದ ಪ್ರವಾಹವನ್ನು ತಡೆಗಟ್ಟಬೇಕಾಯಿತು. ಒಂದನ್ನು ನಿರ್ಮೂಲ ಮಾಡಬೇಕಾಯಿತು; ಮತ್ತೊಂದನ್ನು ಹದ್ದಿನಲ್ಲಿಡಬೇಕಾಯಿತು. ಎರಡು ರಂಗಗಳಲ್ಲಿ ದುಸ್ತರ ಹೋರಾಟವನ್ನು ನಡೆಸಲು ರಾಮಮೋಹನರು ಸರ್ವಸಮರ್ಥರಾಗಿದ್ದರೆಂದು ಬೇರೆ ಹೇಳಬೇಕಾಗಿಲ್ಲ.

ಇಂಡಿಯಾ ಸರ್ಕಾರದವರು ಸಹಗಮನವನ್ನು ಕಾನೂನು ಮೂಲಕ ನಿಲ್ಲಿಸುವುದಕ್ಕೆ ಮೊದಲು ರಾಜಕೀಯಕ್ಕೆ ಸಂಬಂಧಿಸಿದ ಒಂದು ಸಮಸ್ಯೆ ತಲೆದೋರಿತು. ಅದು ದೇಶದ ರಾಷ್ಟ್ರೀಯ ಭಾವನೆಗೆ ಕುಂದಕ ತರುವಂಥದು. ನ್ಯಾಯಸ್ಥಾನದ ಕಾನೂನೊಂದು ೧೮೨೭ ರ ಮೊದಲಿನಲ್ಲಿ ಏರ್ಪಟ್ಟಿತು. ಅದನ್ನು ಏರ್ಪಡಿಸಿದಾತನು ವಿನ್ ಎಂಬವನು. ಆ ಕಾನೂನಿನಿಂದ ಹಿಂದೂಗಳನ್ನಾಗಲಿ ಮುಹಮ್ಮದೀಯರನ್ನಾಗಲಿ ನ್ಯಾಯಸ್ಥಾನದಲ್ಲಿ ಕ್ರೈಸ್ತರೂ, ವಿದೇಶೀಯ ಅಥವಾ ಇಲ್ಲಿ ನೆಲಸಿದ್ದ ಬ್ರಿಟಿಷರೂ, ವಿಚಾರಣೆ ಮಾಡಬಹುದಾಗಿತ್ತು. ಆದರೆ ಯಾವ ದೇಶೀಯನೂ, ಅವನು ಎಷ್ಟೇ ಮಾನ್ಯನಾಗಿದ್ದರೂ, ಕ್ರೈಸ್ತರನ್ನು ವಿಚಾರಣೆ ಮಾಡಲು ಅರ್ಹನಾಗಿರಲಿಲ್ಲ. ಇದರಿಂದ ದೇಶದಲ್ಲಿ ಮತಭೇದಗಳು ಹುಟ್ಟಿ, ಅಂತಃಕಲಹಗಳು ಒದಗುವುದರಲ್ಲಿ ಸಂಶಯವಿರಲಿಲ್ಲ. ಆಳರಸರ ದೇಶೀಯರನ್ನು ತಮ್ಮ ಇಷ್ಟದಂತೆ ನಡೆಸಿಕೊಳ್ಳಬಹುದೆಂದು ತಿಳಿದಿದ್ದವರಲ್ಲಿ ವಿನ್ ಒಬ್ಬ. ರಾಮಮೋಹನರು ಈ ಕಾನೂನಿನಿಂದ ದೇಶದಲ್ಲಿ ಐಕಮತ್ಯ ನಾಶವಾಗುವುದೆಂಬುದನ್ನು ಅರಿತರು; ಕಾನೂನನ್ನು ತಡೆಗಟ್ಟಲು ಪ್ರಯತ್ನ ಹೂಡಿದರು. ಅದಕ್ಕಾಗಿ ಸ್ನೇಹಿತರ ಮೂಲಕವೂ ಭಾರತ ಹಿತಚಿಂತಕರ ಮೂಲಕವೂ ಇಂಗ್ಲೆಂಡಿನಲ್ಲಿ ಚಳುವಳಿ ಹೂಡಿದರು. ಇಂಗ್ಲೆಂಡಿನಲ್ಲಿ ದೇಶೀಯರ ಪ್ರತಿನಿಧಿಯಾಗಿದ್ದ ಜೆ. ಕ್ರಾಫರ್ಡ್ ಎಂಬಾತನಿಗೆ ೧೮೨೮ ನೆಯ ಆಗಸ್ಟು ೧೮ರಲ್ಲಿ ಪತ್ರ ಬರೆದುದಲ್ಲದೆ ಬ್ರಿಟಿಷ್ ಪಾರ್ಲಿಮೆಂಟಿನ ಮುಂದೆ ಇರಿಸಲು ಹಿಂದೂಗಳಿಂಗಲೂ ಮುಹಮ್ಮದೀಯರಿಂದಲೂ ಸಹಿಯಾದ ಒಂದು ಅರ್ಜಿಯನ್ನು ಕಳುಹಿಸಿದರು. ಈ ಕಾನೂನಿನ ವಿರೋಧ ಚಳುವಳಿಯು

ಲಂಡನ್ನಿನಲ್ಲಿಯೇ ನಡೆಯಬೇಕಾಗಿತ್ತು. ಆ ಪತ್ರದಲ್ಲಿ ರಾಮಮೋಹನರು ಕಾನೂನಿನ ಮೇಲಿನ ಆಕ್ಷೇಪವನ್ನು ಸಂಗ್ರಹವಾಗಿ ಹೀಗೆ ತಿಳಿಸಿರುವರು :—

"ಬೋರ್ಡ್ ಆಫ್ ಕನ್ಟ್ರೋಲಿನ ಅಧ್ಯಕ್ಷರಾಗಿದ್ದ ವಿನ್ ಅವರು ಅವರ ಪ್ರಸಿದ್ಧ ನ್ಯಾಯವಿಚಾರಣಾ ಕಾನೂನಿನಲ್ಲಿ, ಮತಸಂಬಂಧವಾದ ಭಿನ್ನಭಾವಗಳಿಗೆ ಆಸ್ಪದ ಕೊಟ್ಟಿರುವುದರಿಂದ, ದೇಶೀಯರಲ್ಲೆಲ್ಲ ಅತೃಪ್ತಿಯುಂಟಾಗಲು ಸಾಕಾದಷ್ಟು ಕಾರಣ ಒದಗಿರುವುದಲ್ಲದೆ ರಾಜಶಾಸ್ತ್ರಜ್ಞರ ಹೃದಯದಲ್ಲೆಲ್ಲ ಹೆಚ್ಚಿನ ಭಯವುಂಟಾಗಿದೆ. ಈ ಕಾನೂನಿನಿಂದ ದೇಶೀಯರೆಲ್ಲ—ಹಿಂದೂಗಳಾಗಲಿ ಮಹಮ್ಮದೀಯರಾಗಲಿ—ದೇಶೀಯ ಅಥವಾ ಪಾಶ್ಚಾತ್ಯ ಕ್ರೈಸ್ತರ ನ್ಯಾಯ ವಿಮರ್ಶೆಗೆ ಒಳಗಾಗಬೇಕಾಗಿತ್ತು. ಆದರೆ ಕ್ರೈಸ್ತ ಮತೀಯರು—ಕ್ರೈಸ್ತ ಮತವನ್ನು ಕೈಕೊಂಡ ಈ ದೇಶೀಯರೂ ಸೇರಿ—ಹಿಂದೂಗಳ ಅಥವಾ ಮಹಮ್ಮದೀಯರ, ಅವರು ಸಾಮಾಜಿಕ ಅಂತಸ್ತಿನಲ್ಲಿ ಎಷ್ಟು ಮೇಲಿದ್ದರೂ, ನ್ಯಾಯತೀರ್ಪಿಗೆ ಒಳಪಡಬೇಕಾದ್ದಿಲ್ಲ. ಈ ಕಾನೂನು ತಮ್ಮ ಸ್ವಮತೀಯರನ್ನು ವಿಚಾರಣೆ ಮಾಡುವಾಗಲೂ ಹಿಂದೂಗಳಿಗೂ ಮಹಮ್ಮದೀಯರಿಗೂ ನ್ಯಾಯಾಧಿಕಾರ ಪೀಠದಲ್ಲಿ ಒಂದು ಸ್ಥಾನವನ್ನೂ ಕೂಡ ತಪ್ಪಿಸಿದೆ. ಇದೇ ವಿನ್ ಅವರ ನ್ಯಾಯ ವಿಚಾರಣಾ ಕಾನೂನಿನ ಮುಖ್ಯ ತತ್ತ್ವ; ಈ ಕಾನೂನನ್ನು ನಾವೆಲ್ಲರೂ ಉಗ್ರವಾಗಿ ಆಕ್ಷೇಪಿಸುತ್ತೇವೆ."

ಈ ಕಾನೂನಿನಲ್ಲಿ ಸೂಚಿತವಾಗಿರುವ ದೇಶೀಯರ ವಿಷಯದಲ್ಲಿನ ನೈಚ್ಯಾರೋಪವನ್ನು ಯಾವ ಗೌರವಸ್ಥ ದೇಶೀಯನೂ ಒಪ್ಪುವಂತಿಲ್ಲ. ರಾಮಮೋಹನರ ಪತ್ರದಿಂದ ಅವರಿಗೆ ದೇಶೀಯರ ಸ್ವಾಭಿಮಾನದ ರಕ್ಷಣೆಯ ವಿಚಾರದಲ್ಲಿನ ಅಭಿಮಾನವೂ, ರಾಜನೀತಿಯಲ್ಲಿನ ಜ್ಞಾನವೂ, ಸೂಕ್ಷ್ಮ ವಿವೇಚನೆಯೂ ವ್ಯಕ್ತವಾಗುವುವು ; ಅಲ್ಲದೆ ಅವರ [illegible]ತಿಯೂ ದೂರದರ್ಶಿತೆಯೂ ಹೊರಪಡುವುವು. ರಾಮಮೋಹನರ ಅಭಿಪ್ರಾಯವು ಒಂದು ನೂರು ವರ್ಷಕ್ಕೆ ಮೇಲ್ಪಟ್ಟಿದ್ದರೂ, ಈಗಲೂ ಅವರ ಆ ಮಾತು

ಗಳನ್ನು ಸ್ಮರಿಸಬೇಕಾದ ಸಂದರ್ಭಗಳು ಇದ್ದೇ ಇರುವುವು. ಮೇಲೆ ತಿಳಿಸಿದ ಪತ್ರವನ್ನು ಮುಂದುವರಿಸುತ್ತ ರಾಮಮೋಹನರು ಹೀಗೆ ಬರೆದಿರುವರು :—

"ಒಂದು ನೂರು ವರ್ಷಗಳನಂತರ ಐರೋಪ್ಯರ ಸಹವಾಸದಿಂದಲೂ, ಅವರ ರಾಜಕೀಯ, ಸಾಮಾಜಿಕ ಮತ್ತು ನವೀನ ವಿಜ್ಞಾನ ಮತ್ತು ಕಲೆಗಳ ಅಭ್ಯಾಸದಿಂದಲೂ, ದೇಶೀಯರ ಶೀಲ ಸ್ವಭಾವಗಳು ಉನ್ನತಿಗೇರಿದಾಗ ತಮ್ಮ ಯೋಗ್ಯತೆಯನ್ನು ಅಲಗಣಿಸುವ ಅನ್ಯಾಯವಾದ ಮತ್ತು ಹಿಂಸಾಕರವಾದ ಕಾನೂನುಗಳನ್ನು ವಿರೋಧಿಸಲು ಅವರಿಗೆ ಸಾಮರ್ಥ್ಯವೂ ಇಚ್ಛೆಯೂ ಇಲ್ಲದಿರುವುದು ಸಾಧ್ಯವೆ? ಇಂಡಿಯಾದ ಸ್ಥಿತಿಯು ಐರ್ಲೆಂಡು ದೇಶದ ಸ್ಥಿತಿಗಿಂತ ವ್ಯತ್ಯಾಸವಾದುದೆಂಬುದನ್ನು ಮರೆಯಬಾರದು. ಐರ್ಲೆಂಡು ದೇಶವು ಇಂಗ್ಲೆಂಡಿಗೆ ಬಹು ಸಮೀಪದಲ್ಲಿರುವುದರಿಂದ ಬ್ರಿಟಿಷ್ ಸೈನ್ಯವು, ಆವಶ್ಯವಿದ್ದರೆ ಅಲ್ಲಿಗೆ ಹೋಗಿ, ಅವರ ವಿರೋಧ ಚಳುವಳಿಯನ್ನು ತಡೆಯಬಹುದು. ಇಂಡಿಯಾ ದೇಶೀಯರಿಗೆ ಐರ್ಲೆಂಡಿನವರಿಗಿರುವ ವಿದ್ಯೆ ಸಾಮರ್ಥ್ಯಗಳಲ್ಲಿ ನಾಲ್ಕರ ಒಂದು ಪಾಲಿದ್ದರೂ, ಐರ್ಲೆಂಡಿಗೂ ಇಂಗ್ಲೆಂಡಿಗೂ ಇರುವ ಅಂತರಕ್ಕಿಂತ ಈ ದೇಶಕ್ಕೆ ಹೆಚ್ಚು ಅಂತರವಿದ್ದರೂ, ಈ ದೇಶದ ಸಂಪತ್ತಿನಿಂದಲೂ ಈ ದೇಶದಲ್ಲಿರುವ ಹೆಚ್ಚಿನ ಪ್ರಜಾಸಂಖ್ಯೆಯಿಂದಲೂ, ಈ ದೇಶವು ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ಸ್ನೇಹಭಾವದಿಂದ ಇದ್ದು ಅವರಿಗೆ ಸಹಾಯಕವಾಗಿರಬಹುದು ಅಥವಾ ಅನೇಕ ಕಾರಣಗಳಿಂದ ಅವರಿಗೆ ಸ್ಥಿರ ಶತ್ರುವಾಗಿ ತೊಂದರೆಕೊಡಬಹುದು.

"ಬ್ರಿಟಿಷರ ಸಹವಾಸದಿಂದ ಇಂಡಿಯಾ ದೇಶಕ್ಕೆ ಉತ್ತರೋತ್ತರ ಲಾಭವುಂಟೆಂದು ಬ್ರಿಟಿಷ್ ಸರ್ಕಾರದ ವಿಷಯದಲ್ಲಿ ಪಕ್ಷಪಾತದಿಂದ ಇರುವವರ ಜೊತೆಯಲ್ಲಿ ನನಗೂ, ಸರ್ಕಾರದವರು ದೇಶೀಯರ ಸಲಹೆಯನ್ನು ಕೇಳದೆಯೇ ಮತ್ತು ಅವರ ಮನೋಭಾವವನ್ನು ಅರಿತುಕೊಳ್ಳದೆಯೇ ಕಾನೂನುಗಳನ್ನು ವಿಧಿಸುವುದಕ್ಕಾಗಿ, ಬಹು ವ್ಯಥೆಯಾಗಿದೆ."

ಈ ವಾಕ್ಯಗಳಿಂದ ರಾಮಮೋಹನನ ರಾಜಕೀಯ ಅಭಿಮತಗಳು ವ್ಯಕ್ತವಾಗುವುವು. ಅವನಿಗೆ ಬ್ರಿಟಿಷರ ಆಳಿಕೆಯಲ್ಲಿ ವಿಶೇಷ ಅಭಿಮಾನವೂ ನಂಬಿಕೆಯೂ ಇದ್ದುವು. ಈ ಅಭಿಪ್ರಾಯವು ಅವರು ಇಂಗ್ಲಿಷನ್ನು ಕಲಿತು ಅವರ ಕಾರ್ಯರೀತಿಗಳನ್ನೂ ಅವರ ಮನೋಭಾವಗಳನ್ನೂ ತಿಳಿದಮೇಲೆ ಉಂಟಾಯಿತು. ತಮ್ಮ ಸಣ್ಣ ಆತ್ಮ ಕಥೆಯಲ್ಲಿ ರಾಮಮೋಹನರೇ ಹೀಗೆ ಹೇಳಿರುವರು:—

"—— ಇಂಡಿಯಾದಲ್ಲಿ ಬ್ರಿಟಿಷರು ರಾಜ್ಯಸ್ಥಾಪನೆ ಮಾಡುವುದನ್ನು ಸಹಿಸದೆ, ನಾನು ದೇಶಸಂಚಾರಕ್ಕೆ ತೊಡಗಿ, ಹೆಚ್ಚಾಗಿ ಇಂಡಿಯಾದಲ್ಲಿಯೂ ಸ್ವಲ್ಪ ಮಟ್ಟಿಗೆ ಹೊರದೇಶಗಳಲ್ಲಿಯೂ ಸಂಚಾರ ಮಾಡಿದೆನು. ನನಗೆ ಇಪ್ಪತ್ತು ವರ್ಷ ವಯಸ್ಸಾದಾಗ ನನ್ನ ತಂದೆಯು ನನ್ನನ್ನು ಬರಮಾಡಿಕೊಂಡು ಮೊದಲಿನಂತೆ ಪ್ರೀತಿಸತೊಡಗಿದನು. ಇದಾದಮೇಲೆ ನಾನು ಐರೋಪ್ಯರ ಸಹವಾಸವಲ್ಲರಲು ಮೊದಲು ಮಾಡಿದೆನು; ಸ್ವಲ್ಪದರಲ್ಲೇ ಅವರ ಕಾನೂನುಗಳನ್ನೂ ರಾಜನೀತಿ ತತ್ತ್ವಗಳನ್ನೂ ತಕ್ಕ ಮಟ್ಟಿಗೆ ತಿಳಿದುಕೊಂಡೆನು. ಅವರು ಸಾಮಾನ್ಯವಾಗಿ ಹೆಚ್ಚು ಬುದ್ಧಿವಂತರೂ, ನಡತೆಯಲ್ಲಿ ಕ್ರಮವರ್ತಿಗಳೂ ಮಿತಮಾರ್ಗಿಗಳೂ, ಆಗಿರುವುದನ್ನು ನೋಡಿದನು. ಅವರ ಮೇಲೆ ನನ್ನ ಮನಸ್ಸಿನಲ್ಲಿದ್ದ ದುರಾಗ್ರಹವನ್ನು ಕಳದು, ಅವರ ಅಧಿಕಾರವು, ಇಷ್ಟವಿಲ್ಲದ ಹೇರಿನಂತೆ ಇದ್ದರೂ, ದೇಶೀಯರನ್ನು ಜಾಗ್ರತಯಾಗಿಯೂ ಖಂಡಿತವಾಗಿಯೂ ಉದ್ಧರಿಸುವುದೆಂದು ಅದರಲ್ಲಿ ಅಭಿಮಾನವುಳ್ಳವನಾದೆನು."

ಬ್ರಿಟಿಷರ ಸಹವಾಸ ಸಂಯೋಗಗಳಿಂದ ದೇಶವು ವಿದ್ಯೆ, ವ್ಯವಹಾರ ಮತ್ತು ಸ್ವಾತಂತ್ರ್ಯ ಭಾವನೆಗಳಲ್ಲಿ ಏಳಿಗೆ ಹೊಂದುವುದೆಂದೇ ರಾಮಮೋಹನರು ನಂಬಿದ್ದರು. ಆದರೆ ಬ್ರಿಟಿಷರ ಎಲ್ಲ ಕಾರ್ಯಗಳನ್ನೂ ಒಪ್ಪುವಷ್ಟು ಮೋಹಾಂಧರಾಗಿರಲಿಲ್ಲ. ಅವರ ಆಳಿಕೆಯು ಎಷ್ಟು ಉತ್ತಮವಾಗಿದ್ದರೂ, ಅವರು ಮಾಡತಕ್ಕ ಕೆಲಸಗಳಿಗೂ ವಿಧಿಸತಕ್ಕ

ಆಜ್ಞೆಗಳಿಗೂ, ದೇಶೀಯರ ಒಪ್ಪಿಗೆಯು ಆವಶ್ಯಕವೆಂದೇ ಸಾರಿದರು. ಯೂರೋಪಿನ ರಾಷ್ಟ್ರಗಳಿಗಿದ್ದ ಸ್ವಾತಂತ್ರ್ಯಕ್ಕಾಗಿ ಸಂತೋಷಿಸಿದರೂ ತಮ್ಮ ದೇಶವು ಪೂರ್ಣ ಸ್ವಾತಂತ್ರ್ಯಕ್ಕೆ ಸಿದ್ಧವಾಗಿಲ್ಲವೆಂದು ಭಾವಿಸಿದ್ದರು. ರಾಜಕೀಯ ದೃಷ್ಟಿಯಲ್ಲಿ ಇಂಡಿಯಾದ ಸ್ಥಾನಗೌರವಗಳನ್ನು ಇತರ ಅಧೀನ ರಾಷ್ಟ್ರಗಳ ಮಟ್ಟಕ್ಕೆ ಏರಿಸಬೇಕೆಂಬುದು ರಾಮಮೋಹನರಿಗಿದ್ದ ಮಹತ್ತರವಾದ ಆಶಯ. ಇದಕ್ಕಾಗಿ ಕೆನಡಾ ದೇಶದ ಉದಾಹರಣೆಯನ್ನೆತ್ತಿ ಅದಕ್ಕೆ ಬ್ರಿಟಿಷರು ಕೊಟ್ಟಿದ್ದ ಹಕ್ಕು ಬಾಧ್ಯತೆಗಳು ಇಂಡಿಯಾಕ್ಕೂ ಸಲ್ಲಬೇಕೆಂದು ಒತ್ತಿಹೇಳಿದರು. ಕೆಲವು ವರ್ಷಗಳ ಒಳಗೆ ದೇಶೀಯರ ರಾಜಕೀಯ ಲಕ್ಷ್ಯವೂ ಕೂಡ ಅಧೀನ ರಾಷ್ಟ್ರಗಳಿಗಿರುವ ಹಕ್ಕು ಇಂಡಿಯಾಕ್ಕೆ ಬರಬೇಕೆಂಬುದಾಗಿತ್ತು. ರಾಮಮೋಹನರು ಒಂದು ಶತಮಾನದ ಹಿಂದೆಯೇ ಅದನ್ನು ಖಂಡಿತವಾಗಿಯೂ ಸ್ಪಷ್ಟವಾಗಿಯೂ ವ್ಯಕ್ತಗೊಳಿಸಿದ್ದರು. ಬ್ರಿಟಿಷರು ಇಂಡಿಯಾವನ್ನು ಸ್ವಂತ ಲಾಭದ ಸಾಧನವನ್ನಾಗಿ ಮಾತ್ರ ಮಾಡಿಕೊಳ್ಳದೆ ಅವರ ದೇಶಕ್ಕೂ ಈ ದೇಶಕ್ಕೂ ಅನ್ಯೋನ್ಯ ಸಂಬಂಧವನ್ನು ಸದಾಕಾಲವೂ ಬೆಳೆಸಬೇಕೆಂದು ಬ್ರಿಟಿಷರಿಗೆ ನಿರ್ದಾಕ್ಷಿಣ್ಯವಾಗಿ ತಿಳಿಸಿದರು. ಭಾರತದ ಆಡಳಿತ ಸಮಸ್ಯೆಯಲ್ಲಿ ದೇಶೀಯರಿಗೆ ಇನ್ನೂ ಸಂಪೂರ್ಣ ಸ್ವಾತಂತ್ರ್ಯ ದೊರೆತಿಲ್ಲ, ಅದಕ್ಕಾಗಿ ಸಂಗ್ರಾಮವು ಇದುವರೆಗೂ ನಡೆಯುತ್ತಲೇ ಇದೆ. ಈ ಸ್ವಾತಂತ್ರ್ಯ ಸಂಗ್ರಾಮವು ರಾಮಮೋಹನರಿಂದ ಅಂಕುರಿಸಿ; ಉಜ್ವಲ ದೇಶಭಕ್ತರಿಂದ ಕಾಲಕ್ರಮದಲ್ಲಿ ಪೋಷಿತವಾಗಿ, ಈಗಿನ ಸ್ಥಿರವಾದ ಅಪ್ರತಿಹತ ರೂಪವನ್ನು ತಾಳಿದೆ. ರಾಮಮೋಹನರು ತಮ್ಮ ಜೀವಮಾನದ ಕೊನೆಯ ವರ್ಷಗಳಲ್ಲಿ ಕಂಪೆನಿಯ ರಾಜ್ಯಭಾರವನ್ನು ಉಗ್ರವಾಗಿ ಖಂಡಿಸುತ್ತಿದ್ದರು.

ಪ್ರಪಂಚದ ರಾಜಕೀಯ ವಿಚಾರದಲ್ಲಿ ರಾಮಮೋಹನರಿಗೆ ಹೊಳೆದಿದ್ದ ಆದರ್ಶವು ಅತ್ಯದ್ಭುತವಾಗಿದೆ. ಅವರು ಆ ಕಾಲದಲ್ಲೇ ಅಂತರ ರಾಷ್ಟ್ರಗಳ ಸಂಸ್ಥೆಯ ಆವಶ್ಯಕತೆಯನ್ನು ಮನಗಂಡಿದ್ದರು. ಪ್ರಪಂಚದ ರಾಷ್ಟ್ರಗಳಲ್ಲಿ

ಒದಗುವ ರಾಜಕೀಯ ಮತ್ತು ಆರ್ಥಿಕ ಕಲಹಗಳನ್ನು ಶಾಂತರೀತಿಯಲ್ಲಿ ಪರಿಹರಿಸಿಕೊಳ್ಳಲು ಇಂಥ ಸಂಸ್ಥೆಯೊಂದೇ ಸಾಧನವೆಂದು ತಿಳಿಸಿದರು. ಆ ಸಂಸ್ಥೆಯಲ್ಲಿ ಪ್ರತಿ ರಾಷ್ಟ್ರದಿಂದಲೂ ಚುನಾಯಿಸಿದ ಪ್ರತಿನಿಧಿಗಳು ಇರಬೇಕು. ರಾಷ್ಟ್ರಗಳಲ್ಲಿ ಹುಟ್ಟುವ ಕಲಹಗಳನ್ನು ಈ ಸಂಸ್ಥೆಯ ಮುಂದಿರಿಸಿ ಅದು ಕೊಡುವ ತೀರ್ಮಾನವನ್ನು ಎರಡು ಪಕ್ಷದವರೂ ಸಮಾಧಾನದಿಂದ ಒಪ್ಪಿಕೊಳ್ಳಬೇಕು ಹೀಗೆ ಮಾಡಿದಲ್ಲಿ ಯುದ್ಧಪ್ರಸಕ್ತಿಯೇ ಇಲ್ಲದೆ ರಾಷ್ಟ್ರಗಳು ತಲೆಮಾರಿಯಿಂದ ತಲೆಮಾರಿಗೆ ಸೌಹಾರ್ದಭಾವದಿಂದಲೇ ಮುಂದುವರಿಯಬಹುದು. ಒಟ್ಟು ಮಾನವವರ್ಗದ ಸುಖ ಪ್ರಯೋಜನಗಳೇ ರಾಮಮೋಹನರ ಈ ಸಲಹೆಗೆ ಸ್ಫೂರ್ತಿಕೊಟ್ಟಿದ್ದುದು ಲೋಕಕಲ್ಯಾಣವನ್ನೇ ಬಯಸುವ ಈ ಉದಾತ್ತಭಾವವೂ ರಾಜನೀತಿ ನೈಪುಣ್ಯವೂ ಅಸಾಧಾರಣವಾದುದು, ಗೌರವಯೋಗ್ಯವಾದುದು. ಕಳೆದ ಯುದ್ಧಾನಂತರ ಸ್ಥಾಪಿತವಾದ ಅಂತರರಾಷ್ಟ್ರಗಳ ಸಂಸ್ಥೆಗೆ ರಾಮಮೋಹನರ ಸಲಹೆಯು ಬೀಜದಂತಿದೆ

ವ್ಯಾಪಾರ ಮತ್ತು ವ್ಯವಸಾಯದ ಉದ್ದೇಶಗಳಿಂದ ಈ ದೇಶದಲ್ಲಿ ನೆಲಸುವ ಐರೋಪ್ಯರಿಗೆ ಇಂಡಿಯಾ ಸರ್ಕಾರವು ಕೆಲವು ಕಾನೂನುಗಳಿಗೆ ಒಳಪಟ್ಟು ಭೂಸ್ಥಿತಿಗಳನ್ನು ಒದಗಿಸಿತ್ತು ಇದರಿಂದ ಕಾಫಿ, ನೀಲಿ ಮತ್ತು ಇತರ ಬೆಳೆಗಳಿಡುವ ಐರೋಪ್ಯ ವ್ಯವಸಾಯಗಾರರು ಈ ದೇಶದಲ್ಲಿ ಭೂಸ್ಥಿತಿಗಳನ್ನು ಮಾಡಿಕೊಂಡಿದ್ದರು ಸುಮಾರು ೧೮೨೪ ರಲ್ಲಿ ಅವರಿಗೆ ಹಿಂದೆ ಕೊಟ್ಟಿದ್ದ ಕೆಲವು ರಿಯಾಯತಿಗಳು ರದ್ದಾದುವು ಸರ್ಕಾರದ ಕಾನೂನನ್ನು ವಿರೋಧಿಸಲು ೧೮೨೯ ನೆಯ ಡಿಸೆಂಬರ್ ೧೫ ರಲ್ಲಿ ಒಂದು ಸಭೆ ಸೇರಿತು ಪ್ರಜಾಹಿತಕ್ಕೆ ಬದ್ಧಕಂಕಣರಾಗಿದ್ದ ರಾಮಮೋಹನರು ಐರೋಪ್ಯ ನೀಲಿ ವ್ಯವಸಾಯಗಾರರಪರವಾಗಿ ನಿಂತರು, ಅವರ ಪರವಾಗಿ "ಸಂವಾದ ಕೌಮುದಿ" ಯಲ್ಲಿ ಲೇಖನಗಳನ್ನು ಬರೆದರು ಐರೋಪ್ಯ ವ್ಯಾಪಾರಗಾರರೂ ವ್ಯವಸಾಯಗಾರರೂ ಇಲ್ಲಿ ನೆಲಸುವುದು ದೇಶದ ಸಂಪದಭಿವೃದ್ಧಿಯ ದೃಷ್ಟಿಯಿಂದ ಉತ್ತಮವಾದುದೆಂದು ಭಾವಿಸಿದ್ದರು.

ಈ ಅಭಿಪ್ರಾಯದಿಂದಲೇ ವಿದೇಶೀಯ ವ್ಯಾಪಾರ ಸಂಘಗಳಲ್ಲಿಯೂ ಸಹಾನುಭೂತಿಯುಳ್ಳವರಾಗಿದ್ದರು. ಹೊರದೇಶದ ವ್ಯಾಪಾರಸ್ಥರು ನಮ್ಮ ದೇಶದಲ್ಲಿ ನೆಲಸುವುದರಿಂದ ದೇಶದೊಳಕ್ಕೆ ಸಂಪತ್ತು ಹರಿದು ರೈತರ ಮತ್ತು ಕೂಲಿ ಜನರ ಸ್ಥಿತಿಯು ಉತ್ತಮವಾಗುವುದೆಂದೂ, ವಿದೇಶೀಯರ ಸಂಪರ್ಕದಿಂದ ದೇಶೀಯರ ಕೃಷಿ ಕೈಗಾರಿಕೆಗಳ ವಿಧಾನದಲ್ಲಿ ವೈಜ್ಞಾನಿಕ ಸಂಬಂಧವಾದ ಮಾರ್ಪಾಟುಗಳು ಉಂಟಾಗುವುವೆಂದೂ ನಂಬಿದ್ದರು. ಅವರ ದೇಶಾಭಿಮಾನವು ಐರೋಪ್ಯರ ಸಹವಾಸದಿಂದ ಆಗಬಹುದಾದ ಉಪಕಾರಗಳಿಗೆ ಕಣ್ಣನ್ನು ಮುಚ್ಚಿಸಲಿಲ್ಲ. ದೇಶದ ಹಿತವನ್ನೇ ಬಯಸುವ ವಿಶಾಲಮತಿಯನ್ನು ಜಾತಿ ಜನಾಂಗಗಳ ಸಂಕುಚಿತ ಭಾವಗಳು ಹೇಗೆ ತಡೆಗಟ್ಟಿಯಾವು ?

ಲಾರ್ಡ್ ವಿಲಿಯಂ ಬೆಂಟಿಂಕನ 'ಸತಿ' ನಿರೋಧ ಆಜ್ಞೆಯನ್ನು ವಿರೋಧಿಸಿ 'ಧರ್ಮಸಭೆ' ಯವರು ಇಂಗ್ಲೆಂಡಿನಲ್ಲಿ ನಾಲ್ಕನೆಯ ಜಾರ್ಜರ ಮುಂದೆ ಅಪೀಲು ತಂದರು. ಅದಕ್ಕಾಗಿ ಅವರು ಒಬ್ಬ ಪ್ರತಿನಿಧಿಯನ್ನು ಗೊತ್ತುಮಾಡಿದ್ದರು. ಅವನು ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿನಲ್ಲಿ 'ಧರ್ಮಸಭೆ' ಯವರ ಪಕ್ಷವನ್ನು ಹಿಡಿದು ವಾದಿಸುವುದಕ್ಕಾಗಿ ಅವನಿಗೆ ೫೦,೦೦೦ ರೂಪಾಯಿಗಳಷ್ಟು ವೇತನ ಕೊಡುವುದಾಗಿ ಗೊತ್ತಾಗಿತ್ತು. ರಾಮಮೋಹನರು 'ಧರ್ಮಸಭೆ' ಯವರ ಪ್ರಯತ್ನಗಳನ್ನು ತಡೆಯುವುದು ಅವಶ್ಯಕವಾಗಿತ್ತು. ಇದಕ್ಕಾಗಿ ಅವರು ಇಂಗ್ಲೆಂಡಿಗೆ ಹೊರಡಬೇಕಾಯಿತು. ರಾಮಮೋಹನರಿಗೆ ವಿದೇಶಕ್ಕೆ ಹೋಗಬೇಕೆಂಬ ಅಭಿಲಾಷೆಯು ಅವರು ಕಲ್ಕತ್ತೆಗೆ ಬಂದಾಗಿನಿಂದ, ಸುಮಾರು ೧೮೧೭ ರಿಂದ, ಇತ್ತು. ಆಗ ಅವರಿಗೆ ಪಾಶ್ಚಾತ್ಯ ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡಬೇಕೆಂಬ ಉದ್ದೇಶವಿತ್ತೆಂದು ತಿಳಿದುಬರುತ್ತದೆ. ಆದರೆ ಆ ಉದ್ದೇಶವು ಕೈಗೂಡಿರಲಿಲ್ಲ. ಸಹಗಮನ ನಿರೋಧವು ಅವರ ಜೀವನದ ಪರಮೋದ್ಯಮಗಳಲ್ಲಿ ಒಂದಾದುದರಿಂದ ಅದಕ್ಕೆ ಒದಗಬಹುದಾದ ಎಲ್ಲಾ ಅಡ್ಡಿಗಳನ್ನೂ ತಡೆಗಟ್ಟುವುದು ಅವಶ್ಯಕವಾಗಿತ್ತು. ಸತಿಪಕ್ಷದವರು ಕಳುಹಿಸಿದ್ದ ಪ್ರಾರ್ಥನೆಗಳಿಗೆ ಬದ

ಲಾಗಿ ರಾಮಮೋಹನರೂ ಅವರ ಪಕ್ಷದವರೂ ಬಿನ್ನವತ್ತಳೆಯನ್ನು ಸಿದ್ಧಪಡಿಸಿ ಅದನ್ನು ತಾವೇ ಜೊತೆಯಲ್ಲಿ ತೆಗೆದುಕೊಂಡು ಹೊರಟರು. ಉದಾರಿಗಳಾದ ಸ್ನೇಹಿತರು ಅವರ ಪ್ರಯಾಣಕ್ಕಾಗಿ ೫,೦೦೦ ರೂಪಾಯಿಗಳನ್ನು ಕೊಡುವುದಾಗಿ ಹೇಳಿದರು. ಆದರೆ ಅವರು ಆ ಹಣವನ್ನು ಸ್ವೀಕರಿಸಲಿಲ್ಲ. ತಮ್ಮ ಜೀವನದ ಪರಮೋದ್ದೇಶದ ಸಾಧನೆಗಾಗಿ ಸ್ವಂತ ಹಣವನ್ನು ವೆಚ್ಚ ಮಾಡುವುದರಲ್ಲಿ ಅವರ ಔದಾರ್ಯವು ಹಿಂದಾಗಲಿಲ್ಲ.

ಇಂಗ್ಲೆಂಡಿಗೆ ಹೋಗುವುದರಲ್ಲಿ ರಾಮಮೋಹನರಿಗೆ ಮತ್ತೂ ಒಂದು ಉದ್ದೇಶವಿತ್ತು. ಈಸ್ಟ್ ಇಂಡಿಯಾ ಕಂಪೆನಿಯ ಸನ್ನದನ್ನು ಪುನಃ ಆಚರಣೆಗೆ ತರುವ ವಿಚಾರವು ಇಂಗ್ಲೆಂಡಿನ ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ಚರ್ಚೆಗೆ ಬರುವುದಾಗಿತ್ತು. ಮುಂದಿನ ಇಂಡಿಯಾ ಸರ್ಕಾರದ ಹಿತಾಹಿತಗಳು ಆಗ ಜಾರಿಗೆ ಬರುವ ಕಾನೂನನ್ನು ಅವಲಂಬಿಸತಕ್ಕದ್ದಾಗಿತ್ತು. ಆದುದರಿಂದ ದೇಶದ ರಾಜ್ಯವ್ಯವಸ್ಥೆಗೆ ಸಂಬಂಧಿಸಿದ ವಿಚಾರಗಳನ್ನು ಕುರಿತ ಚರ್ಚೆಯ ಸಮಯದಲ್ಲಿ ರಾಮಮೋಹನರು ಇಂಗ್ಲೆಂಡಿನಲ್ಲಿರಲು ಬಯಸಿದರು.

ರಾಮಮೋಹನರ ವಿದೇಶಪ್ರಯಾಣವನ್ನು ತ್ವರೆಗೊಳಿಸುವ ಮತ್ತೊಂದು ಸಂದರ್ಭವೂ ಒದಗಿತು. ಆ ಕಾಲದಲ್ಲಿ ಮುಯಿನ್ ಉದ್ದೀನ್ ಅಕ್ಬರನು ಡೆಲ್ಲಿಯಲ್ಲಿ ಚಕ್ರವರ್ತಿಯಾಗಿದ್ದನು. ಅವನು ಹೆಸರಿಗೆ ಮಾತ್ರ ಚಕ್ರವರ್ತಿಯಾಗಿದ್ದು ಗವರ್ನರ್ ಜನರಲ್ಲನ ಅಧಿಕಾರಕ್ಕೆ ಒಳಪಟ್ಟಿದ್ದನು. ಬ್ರಿಟಿಷರು ಚಕ್ರವರ್ತಿಗೆ ವರ್ಷಾಶನವನ್ನು ಗೊತ್ತುಮಾಡಿ ರಾಜ್ಯವನ್ನು ತಾವೇ ವಹಿಸಿಕೊಂಡಿದ್ದರು. ಚಕ್ರವರ್ತಿಯು ಈ ವರ್ಷಾಶನವು ಬಹು ಸ್ವಲ್ಪವೆಂದೂ ಅದನ್ನು ಹೆಚ್ಚಿಸಬೇಕೆಂದೂ ಕೇಳಿಕೊಳ್ಳುತ್ತಿದ್ದನು. ತನ್ನ ಈ ಪ್ರಾರ್ಥನೆಯನ್ನು ಇಂಗ್ಲೆಂಡಿನಲ್ಲಿ ಪ್ರಭುಗಳ ಮುಂಬಿಟ್ಟು ಅಲ್ಲಿ ಪ್ರಯತ್ನ ನಡೆಸಬೇಕೆಂದು ನಿಶ್ಚಯಿಸಿದನು. ರಾಮಮೋಹನರ ತೀಕ್ಷ್ಣ ಬುದ್ಧಿ ಪ್ರಭಾವಗಳನ್ನೂ ಕೀರ್ತಿಯನ್ನೂ ಕೇಳಿ, ಅವರ ವಿದೇಶ ಪ್ರಯಾಣವನ್ನು

ತಿಳಿದು, ತನ್ನ ಪ್ರತಿನಿಧಿಯಾಗಿ ಪ್ರಯತ್ನ ನಡೆಸಲು ಡೆಲ್ಲಿಯ ಚಕ್ರವರ್ತಿಯು ಅವರನ್ನು ಪ್ರಾರ್ಥಿಸಿದನು. ರಾಮಮೋಹನರು ಒಪ್ಪಿದರು. ಇಂಗ್ಲೆಂಡಿನ ಚಕ್ರವರ್ತಿಗೆ ಒಂದು ಬಿನ್ನವತ್ತಳೆಯನ್ನು ಬರೆಯುವ ಕೆಲಸವನ್ನು ಡೆಲ್ಲಿಯ ಚಕ್ರವರ್ತಿಯು ಅವರಿಗೇ ಒಪ್ಪಿಸಿದನು. ಅವರು ಪಾರ್ಸಿಯಲ್ಲಿಯೂ ಇಂಗ್ಲಿಷಿನಲ್ಲಿಯೂ ಬಿನ್ನಹಗಳನ್ನು ಸಿದ್ಧಪಡಿಸಿದರು. ಅದರಲ್ಲಿನ ವಾದ ಸರಣಿಯು ಸಕಾರಣವಾಗಿಯೂ, ಗಂಭೀರವಾಗಿಯೂ, ಸ್ಪಷ್ಟವಾಗಿಯೂ ಇದ್ದಿತು. ತನ್ನ ಪ್ರತಿನಿಧಿಯಾಗಿ ಇಂಗ್ಲೆಂಡಿನ ಚಕ್ರವರ್ತಿಯಲ್ಲಿಗೆ ಹೋಗ ತಕ್ಕವನಿಗೆ ತಕ್ಕ ಮಾನ್ಯತೆ ಗೌರವಗಳು ಇರುವುದು ಅವಶ್ಯಕವಾದುದರಿಂದ ಡೆಲ್ಲಿಯ ಚಕ್ರವರ್ತಿಯು ರಾಮಮೋಹನರಿಗೆ "ರಾಜ" ಎಂಬ ಪ್ರಶಸ್ತಿಯನ್ನು ೧೮೨೯ರಲ್ಲಿ ದಯಪಾಲಿಸಿದನು. ಡೆಲ್ಲಿಯ ಚಕ್ರವರ್ತಿಯು ದಯಪಾಲಿಸಿದ ಪ್ರಶಸ್ತಿಯನ್ನು ತಾವು ಅಂಗೀಕರಿಸಲು ರಾಮಮೋಹನರು ೧೮೩೦ನೆಯ ಜನವರಿ ೮ನೆಯ ತೇದಿಯಲ್ಲಿ ಗವರ್ನರ್ ಜನರಲ್ಲಿನ ಅಪ್ಪಣೆ ಬೇಡಿದರು. ಅವರನ್ನು ಡೆಲ್ಲಿ ಚಕ್ರವರ್ತಿಯು ತನ್ನ ಪ್ರತಿನಿಧಿಯಾಗಿ ನೇಮಿಸಿರುವುದನ್ನಾಗಲಿ ಅಥವಾ ಅವರಿಗೆ "ರಾಜ" ಎಂಬ ಪ್ರಶಸ್ತಿಯನ್ನು ಸಲ್ಲಿಸಿರುವುದನ್ನಾಗಲಿ ಇಂಡಿಯಾ ಸರ್ಕಾರವು ಒಪ್ಪಲಾರದೆಂದು ಗವರ್ನರ್ ಜನರಲ್ಲನು ತಿಳಿಸಿದನು. ಈ ಪತ್ರವು ಬಂದ ಮಾರನೆಯ ದಿನವೇ ಸತಿಪದ್ಧತಿಯನ್ನು ನಿರೋಧಿಸುವ ಕಾನೂನನ್ನು ಲಾರ್ಡ್ ವಿಲಿಯಂ ಬೆಂಟಿಂಕನು ಜಾರಿಗೆ ತಂದುದಕ್ಕಾಗಿ ಆತನನ್ನು ಅಭಿನಂದಿಸುವುದರಲ್ಲಿ ರಾಮಮೋಹನರು ಮುಖ್ಯಭಾಗ ವಹಿಸಿದರು. ಇದರಿಂದ ರಾಮಮೋಹನರ ಭಾವ ವೈಶಾಲ್ಯವು ವ್ಯಕ್ತವಾಗುವುದು. ತಾವು ಡೆಲ್ಲಿಯ ಚಕ್ರವರ್ತಿಯ ಪ್ರತಿನಿಧಿಯಾಗಿ ಹೋಗುವುದು ಇಂಡಿಯಾ ಸರ್ಕಾರಕ್ಕೆ ಸಮ್ಮತಿ ಇಲ್ಲದುದರಿಂದ ತಮ್ಮ ಪ್ರಯಾಣಕ್ಕೆ ಅವಶ್ಯಕವಾದ ಅಪ್ಪಣೆಯನ್ನು ಇಂಡಿಯಾ ಸರ್ಕಾರವು ಕೊಡಲಾರದೆಂದು ಊಹಿಸಿದರು. ಸರ್ಕಾರದ ಅಪ್ಪಣೆಯನ್ನು ಪಡೆಯುವುದಕ್ಕಾಗಿ ತಾವು ಯಾರಪಕ್ಷಕ್ಕಾಗಿಯೂ ವಿಶೇಷಕ್ಕೆ

ಹೋಗುವುದಿಲ್ಲವೆಂದೂ, ತಮ್ಮ ಆಶೆಗಾಗಿಯೇ ಹೋಗುವುದೆಂದೂ, ಗವರ್ನರ್ ಜನರಲ್ಲಿಗೆ ೧೮೩೦ನೆಯ ಸೆಪ್ಟೆಂಬರ್ ೨೯ರಲ್ಲಿ ಬರೆದರು

ರಾಮಮೋಹನರು ಡೆಲ್ಲಿ ಚಕ್ರವರ್ತಿಯ ಪ್ರತಿನಿಧಿಯಾಗಿದ್ದುದಕ್ಕಾಗಿ ೭೦,೦೦೦ ರೂಪಾಯಿಗಳನ್ನು ಪಡೆದರು ತಮ್ಮ ಪ್ರಯತ್ನದಿಂದ ಚಕ್ರವರ್ತಿಯ ವರ್ಷಾಶನವನ್ನು ಹೆಚ್ಚಿಸುವುದಾದರೆ ಹಾಗೆ ಹೆಚ್ಚಿದ ಹಣದಲ್ಲಿ ಅರ್ಧವನ್ನೂ, ೫,೦೦೦ ರೂಪಾಯಿಗಳ ತಿಂಗಳ ವೇತನವನ್ನೂ, ಕೊಡುವುದಾಗಿ ಡೆಲ್ಲಿ ಚಕ್ರವರ್ತಿಯು ವಾಗ್ದಾನ ಮಾಡಿದನು ಆದರೆ ಈ ಸಂಪತ್ತನ್ನು ಹೊಂದುವ ಭಾಗ್ಯವು ರಾಮಮೋಹನರಿಗೆ ಇರಲಿಲ್ಲ

ರಾಮಮೋಹನರು ೧೮೩೦ ನೆಯ ನವೆಂಬರ್ ೧೫ ನೆಯ ತಾರೀಖಿನಲ್ಲಿ ವಿದೇಶ ಪ್ರಯಾಣಕ್ಕಾಗಿ "ಆಲ್ಬಿಯನ್" ಎಂಬ ಜಹಜಿನಲ್ಲಿ ಕಲ್ಕತ್ತೆಯಿಂದ ಹೊರಟರು ಇಂಡಿಯದಿಂದ ಸಮುದ್ರಯಾನ ಮಾಡಿದವರಲ್ಲಿ ಇವರೇ ಮೊದಲನೆಯ ವಂಗ ಬ್ರಾಹ್ಮಣರು ರಾಮಮೋಹನರ ಜೊತೆಯಲ್ಲಿ ಅವರ ಹನ್ನೆರಡು ವರ್ಷದ ಪಾಲಕ ಪುತ್ರ ರಾಜರಾಮನೂ, ರಾಮ ಹರಿದಾಸ ಮತ್ತು ರಾಮರತ್ನ ಮುಖರ್ಜಿ ಎಂಬಿಬ್ಬರು ಸೇವಕರೂ ಹೊರಟರು ತಮ್ಮ ಸಂಸಾರದ ಅಗಲಿಕೆಯ ದುಃಖವು ಅವರಿಗೆ ಆಗಲಿಲ್ಲವಂತೆ ಮಗ ರಾಮಪ್ರಸಾದನು ಹಡಗು ಹೊರಡುವ ಸಮಯದಲ್ಲಿ ಅಳುತ್ತಿರುವುದನ್ನು ನೋಡಿ ರಾಮಮೋಹನರು "ಏಕೆ ಅಳುವೆ, ನೀನು ಪುರುಷನ ಮಗನಲ್ಲವೆ?" ಎಂದರಂತೆ ಅವರು ಕಲ್ಕತ್ತೆಯಿಂದ ಹೊರಡುವ ಸಮಯದಲ್ಲಿ ಫ್ರಾನ್ಸಿನ ಮಹಾಕ್ರಾಂತಿಯ ಸಮಾಚಾರವು ಬಂತಂತೆ ಆ ಸ್ವಾತಂತ್ರ್ಯ ಸಂಗ್ರಾಮವನ್ನು ಕೇಳಿ ಸ್ವಾತಂತ್ರ್ಯ ಪ್ರಿಯ ರಾಮಮೋಹನರು ಕ್ರಾಂತಿಯ ವಿಚಾರವಾಗಿ ವಿಶೇಷವಾಗಿಯೂ ಉತ್ಸಾಹದಿಂದಲೂ ಮಾತನಾಡುತ್ತಿದ್ದರಂತೆ ಅವರ ಎದೆಯು ವಿಶ್ವವಿಶಾಲವಾದುದು ದಾಸ್ಯದಲ್ಲಿರುವ ಯಾರಿಗಾದರೂ ಅವರ ಹೃದಯವು ಸಹಾನುಭೂತಿಯನ್ನು ನೀಡುತ್ತಿತ್ತು

ಹೀಗೆ ರಾಮಮೋಹನರು ತಮ್ಮ ತವರೂರಿನಲ್ಲಿ ಅದರ ಏಳಿಗೆಗಾಗಿ ವಿಶ್ರಾಂತಿಯಿಲ್ಲದೆ ದುಡಿದರು. ತಮ್ಮ ದೇಶವಾತಿಯ ಹಿತವನ್ನು ಮತ್ತಷ್ಟು ಸಾಧಿಸುವುದಕ್ಕಾಗಿಯೇ ವಿದೇಶ ಪ್ರಯಾಣವನ್ನು ಕೈಕೊಂಡಿದ್ದರು. ಅವರ ಕಾಲದಲ್ಲಿ ವಿದೇಶ ಪ್ರಯಾಣವು ಈಗಿನಷ್ಟು ಸುಲಭವೂ ಸುಗಮವೂ ಆಗಿರಲಿಲ್ಲ. ಆಗ ಪ್ರಯಾಣದ ಕಾಲವೇ ಸುಮಾರು ನಾಲ್ಕು ತಿಂಗಳು ಆಗುತ್ತಿತ್ತು; ಹಡಗಿನ ಪ್ರಯಾಣವಲ್ಲಿ ಈಗಿನಂತೆ ಸೌಕರ್ಯಗಳಿರಲಿಲ್ಲ. ಹಡಗು ಒಂದು ತೀರವನ್ನು ಬಿಟ್ಟು ಮತ್ತೊಂದು ತೀರವನ್ನು ಸುರಕ್ಷಿತವಾಗಿ ಸೇರುವುದೆ, ಒಂದು ಪುಣ್ಯವಾಗಿತ್ತು. ಇಂಥ ಸಂದರ್ಭಗಳಲ್ಲಿ ರಾಮಮೋಹನರು ವಿದೇಶ ಪ್ರಯಾಣದಲ್ಲಿ ತೊಡಗಿದ್ದುದು ಅವರ ದೇಶಪ್ರೇಮಕ್ಕೂ, ಸ್ವಾರ್ಥತ್ಯಾಗಕ್ಕೂ, ಧೈರ್ಯಕ್ಕೂ ಪ್ರಮಾಣವಾಗಿದೆ.

---

# ಪ್ರಕರಣ ೯

## ಸಾಹಿತ್ಯಸೇವೆ

ರಾಮಮೋಹನರ ಕಾಲಕ್ಕೆ ಹಿಂದೆಯೇ ವಂಗ ಸಾಹಿತ್ಯವು ಬೆಳೆದಿತ್ತು ಆ ಸಾಹಿತ್ಯವೆಲ್ಲವೂ ಪದ್ಯ ರೂಪದಲ್ಲಿಯೇ ಇತ್ತು ಸಾಮಾನ್ಯ ಕಾಗದಪತ್ರಗಳಲ್ಲಿ ಮಾತ್ರ ಗದ್ಯ ಉಪಯೋಗವಾಗುತ್ತಿತ್ತು ಅಂತಹ ಗದ್ಯದ ಮಾದರಿ ಮೊದಲು ದೊರೆತದ್ದು ೧೫೫೫ರಲ್ಲಿ ಅಲ್ಲಿಂದೀಚೆಗೆ ಗದ್ಯ ಹೆಚ್ಚು ಬಳಕೆಗೆ ಬಂದಿದ್ದರೂ ಆ ಗದ್ಯದ ರೀತಿಯೇ ಬೇರೆಯಾಗಿತ್ತು ಅದು ವಾಕ್ಯರಚನೆಯ ಸಾಮಾನ್ಯ ನಿಯಮಗಳಿಗೆ ಕೂಡ ಅನುಸಾರವಾಗಿರಲಿಲ್ಲ ವಾಕ್ಯದ ಬೇರೆಬೇರೆ ಭಾಗಗಳನ್ನು ಸೂಚಿಸುವ ವಿರಾಮ ಚಿಹ್ನೆಗಳೇ ಇರಲಿಲ್ಲ ಇದರಿಂದ ವಾಕ್ಯದ ಮೊದಲು ಕೊನೆ ತಿಳಿಯುವುದೇ ಕಷ್ಟವಾಗಿತ್ತು , ಜೊತೆಗೆ, ಒಂದೇ ವಾಕ್ಯದಲ್ಲಿ ಅನೇಕ ಕರ್ತೃ ಪದಗಳೂ ವಾಕ್ಯಸಮುಚ್ಚಯ ಪದಗಳೂ ಬಂದು ಅರ್ಥವೇ ಆಗುತ್ತಿರಲಿಲ್ಲ

ಬಂಗಾಳಿಯಲ್ಲಿ ಸಾಹಿತ್ಯವೆನಿಸಿಕೊಳ್ಳಬಹುದಾದ ಗದ್ಯರಚನೆಯ ಪ್ರಯತ್ನ ಹತ್ತೊಂಬತ್ತನೆಯ ಶತಮಾನದ ಮೊದಲ ಭಾಗದಲ್ಲಿ ಸೆರಂಪುರದ ಕ್ರೈಸ್ತ ಮಿಷನರಿಗಳಿಂದ ಆಯಿತು ಮಿಷನರಿಗಳು ತಮ್ಮ ಮತಗ್ರಂಥವಾದ ಬೈಬಲ್ಲನ್ನು ಜನರಲ್ಲಿ ಪ್ರಚಾರ ಮಾಡಲು ವಂಗ ಭಾಷೆಯಲ್ಲಿ ಬರೆಯುತ್ತಿದ್ದರು , ಕೆಲವು ಸರ್ಕಾರಿ ಕಾನೂನು ನಿಬಂಧನೆಗಳನ್ನೂ ವಂಗಭಾಷೆಯಲ್ಲಿ ರಚಿಸುತ್ತಿದ್ದರು ಅಲ್ಲದೆ, ಅವರು ವ್ಯಾಕರಣವನ್ನೂ ನಿಘಂಟುಗಳನ್ನೂ ಸಿದ್ಧಗೊಳಿಸುತ್ತಿದ್ದರು ಹೀಗೆ ಇತರ ದೇಶಭಾಷೆಗಳಲ್ಲಿನಂತೆಯೇ ಬಂಗಾಳಿಯಲ್ಲಿಯೂ ಯೂರೋಪ್ ದೇಶದ ಮತಪ್ರಚಾರಕರಿಂದಲೂ ವಿದ್ಯಾಭಿ

ಮಾನಿಗಳಿಂದಲೂ ಗದ್ಯ ಸಾಹಿತ್ಯಕ್ಕೆ ಹೊಸ ರೂಪ ಬಂತು. ಐರೋಪ್ಯರು ಮತಪ್ರಚಾರಕ್ಕಲ್ಲದೆ ಬಂಗಾಳಿಯಲ್ಲಿ ರಚಿಸಿದ ಕಾವ್ಯಗಳು ಬಹುಮಟ್ಟಿಗೆ ಭಾಷಾಂತರಗಳಾಗಿದ್ದುವು. ಅವು ಸಾಹಿತ್ಯದಲ್ಲಿ ಉತ್ತಮಸ್ಥಾನವನ್ನು ಪಡೆಯಲಾರವಾದರೂ ವಂಗಸಾಹಿತ್ಯಾಭಿಮಾನಿಗಳಾದ ಪರದೇಶೀಯರನ್ನು ಮಾರ್ಗದರ್ಶಕರೆಂದು ಭಾವಿಸಿ ಗೌರವಿಸಬೇಕಾಗಿದೆ. ಅವರು ದೇಶ ಭಾಷೆಯ ರೀತಿ ಮರ್ಯಾದೆಗಳನ್ನು ಅರಿಯದವರಾದುದರಿಂದ ಅವರು ರಚಿಸಿದ ಕಾವ್ಯಗಳು ಸಾಹಿತ್ಯಪ್ರಪಂಚದಲ್ಲಿ ಹೆಚ್ಚು ಮನ್ನಣೆಯನ್ನು ಪಡೆಯತಕ್ಕವುಗಳಲ್ಲ. ಅವರ ಕಾವ್ಯಗಳು ಹೇಗಾದರೂ ಇರಲಿ ಅವರಿಂದ ದೇಶೀಯರ ಮನಸ್ಸು ಜಾಗ್ರತವಾಯಿತೆಂಬುದರಲ್ಲಿ ಸಂದೇಹವಿಲ್ಲ. ದೇಶ ಭಾಷೆಗಳಿಗೆಲ್ಲ ಇಂಗ್ಲಿಷರಿಂದ ನವಚೈತನ್ಯವೂ ನೂತನಮಾರ್ಗವೂ ಬಂದು ವೆಂದು ಹೇಳಿದರೆ ತಪ್ಪಲ್ಲ.

ಸೀಮೆಯಿಂದ ಈ ದೇಶಕ್ಕೆ ಬಂದ ಬ್ರಿಟಿಷ್ ಅಧಿಕಾರಿಗಳಿಗೆ ಈ ದೇಶದ ಭಾಷೆಗಳ ಪರಿಚಯಮಾಡಿಕೊಡುವುದು ಅವಶ್ಯವಾಗಿತ್ತು. ಅದು ದರಿಂದ ವಂಗ ಗದ್ಯದಲ್ಲಿ ಶಾಲಾಪಠ್ಯಪುಸ್ತಕಗಳು ಹುಟ್ಟಿದುವು. ಹೀಗೆ ಹುಟ್ಟಿದವುಗಳಲ್ಲಿ ೧೮೦೧ರಲ್ಲಿ ಪ್ರಕಟವಾದ ರಾಮರಾಮ ವಸುವಿನ "ರಾಜಾ ಪ್ರತಾಪಾದಿತ್ಯನ ಚರಿತ್ರೆ"ಯೇ ಮೊದಲನೆಯದು. ಅದರಲ್ಲಿ ಬಂಗಾಳಿ ಪದಗಳಿಗಿಂತಲೂ ಅರಬ್ಬೀ ಮತ್ತು ಪಾರ್ಸಿ ಭಾಷೆಗಳ ಪದಗಳು ಹೆಚ್ಚಾಗಿದ್ದುವು. ಮೃತ್ಯುಂಜಯ ವಿದ್ಯಾಲಂಕಾರನೆಂಬವನು ಆಗಿನ ಪ್ರಸಿದ್ಧ ಗದ್ಯಲೇಖಕನು. ಆತನ ಭಾಷೆ ಬಹುಮಟ್ಟಿಗೆ ಪರಿಷ್ಕಾರ ವಾಗಿತ್ತು. ವಾಕ್ಯದಲ್ಲಿ ಪದಗಳು ಕ್ರಮಬದ್ಧವಾಗಿದ್ದುವು; ವಾಕ್ಯಗಳಲ್ಲಿ ಮೊದಲಿನ ತೊಡಕು ಬಹುಮಟ್ಟಿಗೆ ಕಡಿಮೆಯಾಗಿತ್ತು.

ಹೀಗೆ ಬಂಗಾಳಿ ಗದ್ಯ ಸಾಹಿತ್ಯವು ನೀರಸವೂ ಅವ್ಯವಸ್ಥಿತವೂ ಆಗಿ ದ್ದಾಗ ಅದನ್ನು ವ್ಯವಸ್ಥೆಗೊಳಿಸಿ ರಸಮಯವನ್ನಾಗಿ ಮಾಡುವ ಕೆಲಸ ರಾಮಮೋಹನರದಾಯಿತು. ಅವರಿಂದ ಸಾಹಿತ್ಯಮಾರ್ಗವೇ ಬದ ಲಾಯಿತು. ಅವರು ತಮ್ಮ ವಾದ ವಿವಾದಗಳನ್ನು ಪ್ರಚಾರಮಾಡಲು

ವಂಗಭಾಷೆಯಲ್ಲಿ ಕೆಲವು ಪತ್ರಿಕೆಗಳನ್ನು ಸ್ಥಾಪಿಸಿದ್ದನ್ನು ನೋಡಿದ್ದೇವೆ ದೇಶೀಯ ವೃತ್ತ ಪತ್ರಿಕೆಗಳ ಸ್ಥಾಪನೆಗೆ ರಾಮಮೋಹನರು ಮೂಲಪುರುಷ ರೆಂದು ಹೇಗೆ ಹೇಳಬಹುದೋ ಹಾಗೆಯೇ ಬಂಗಾಳಿ ಗದ್ಯ ಸಾಹಿತ್ಯ ರಚನೆಗೂ ನಾಯಕರೆಂದು ಹೇಳಬಹುದಾಗಿದೆ ಅವರಿಗೆ ಹಿಂದೆ ಗದ್ಯದಲ್ಲಿ ಪುಸ್ತಕ ಬರೆದವರೆಲ್ಲರೂ ಪ್ರಾಯಶಃ ಪದ್ಯ ಪುಸ್ತಕಗಳನ್ನೇ ಬರೆದಿದ್ದರು ಗಹನ ತತ್ತ್ವ ವಿಚಾರ ಪ್ರತಿಪಾದನೆಗೂ ಬಂಗಾಳಿ ಗದ್ಯವನ್ನು ಉಪ ಯೋಗಿಸಿ ಅದನ್ನು ಕಾವ್ಯೋಚಿತವಾದ ರೀತಿಯಲ್ಲಿ ಬರೆದ ಗೌರವ ರಾಮ ಮೋಹನರಿಗೇ ಸಲ್ಲತಕ್ಕದ್ದಾಗಿದೆ ದೇಶೀಯರಿಗೆ ತಮ್ಮ ಅಭಿಪ್ರಾಯ ಗಳನ್ನೂ ತತ್ತ್ವಗಳನ್ನೂ ನಿರೂಪಿಸಲು ದೇಶಭಾಷೆಯಾದ ಬಂಗಾಳಿಯೇ ಯೋಗ್ಯಸಾಧನವೆಂದೂ, ಎಲ್ಲ ವಂಗದೇಶದ ಜನರಿಗೂ ತಮ್ಮ ಉಪದೇಶ ಅರ್ಥವಾಗಬೇಕಾಗಿದ್ದಲ್ಲಿ ಗದ್ಯವೇ ಸರಿಯಾದ ವಾಹಿನಿಯೆಂದೂ, ನಿಶ್ಚಯಿ ಸಿದರು ಅವರು ಸಾರಬೇಕಾಗಿದ್ದ ತತ್ತ್ವಗಳು ಸಮಾಜ ಸುಧಾರಣೆಗೂ ಧರ್ಮವಿಚಾರಕ್ಕೂ ಸಂಬಂಧಿಸಿದ್ದುವು ಅವನ್ನು ಸಾಮಾನ್ಯ ಜನರ ವ್ಯವಹಾರ ಭಾಷೆಯಲ್ಲಿ ಉತ್ತಮರೀತಿಯಲ್ಲಿ, ಅದರಲ್ಲಿಯೂ ಆಗಿನ ಬಂಗಾಳಿ ವಚನವಿದ್ದ ಸ್ಥಿತಿಯಲ್ಲಿ, ಬರೆದುದು ಒಂದು ಮಹತ್ಸಾಧನೆಯೇ ಸರಿ

"ವೇದಾಂತ ಗ್ರಂಥ"ದ ಪೀಠಿಕೆಯಲ್ಲಿ ರಾಮಮೋಹನರು ಆಗಿನ ವಂಗ ಗದ್ಯದ ಲೋಪದೋಷಗಳ ವಿಚಾರವಾಗಿ ಹೀಗೆ ಬರೆದಿರುವರು —

'ಬಂಗಾಳಿಯಲ್ಲಿ ಬಹು ಕಡಿಮೆ ಸಂಖ್ಯೆಯ ಪದಗಳಿರುವುವು, ಎಂದರೆ ಪ್ರತಿದಿನದ ಉಪಯೋಗಕ್ಕೆ ಅವಶ್ಯವಾಗಿರುವಷ್ಟು ಮಾತ್ರ ಇರುವುವು ಸಂಸ್ಕೃತವನ್ನು ಬಂಗಾಳಿ ಎಷ್ಟರಮಟ್ಟಿಗೆ ಆಶ್ರಯಿಸಿದೆ ಎಂಬುದು ಪರಭಾಷೆ ಯಿಂದ ಈ ಭಾಷೆಗೆ ಪರಿವರ್ತನೆಗೆ ತೊಡಗಿದಾಗ ತಿಳಿದುಬರುವುದು ಈ ಭಾಷೆಯಲ್ಲಿ ಇದುವರೆಗೆ ಶಾಸ್ತ್ರ ಗ್ರಂಥಗಳಾಗಲಿ ಸಾಹಿತ್ಯ ಗ್ರಂಥಗಳಾ ಗಲಿ ನಿರ್ಮಾಣವಾಗಿಲ್ಲ ಇದರ ಪರಿಣಾಮವಾಗಿ ಅನೇಕರು ಬಂಗಾಳಿಯ ಗದ್ಯವನ್ನು ಸುಲಭವಾಗಿ ಅರ್ಥಮಾಡಿಕೊಳ್ಳದವರಾಗಿದ್ದಾರೆ ಬಂಗಾಳಿಗೆ ಭಾಷಾಂತರವಾಗಿರುವ ಸರ್ಕಾರಿ ನಿಬಂಧನೆಗಳನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದಾಗ ಇದರ ನಿಜಾಂಶ ವ್ಯಕ್ತವಾಗುವುದು'

ಇದೇ ಸಂದರ್ಭದಲ್ಲಿ ಬಂಗಾಳಿ ವಚನವನ್ನು ಓದಿ ಅರ್ಥಮಾಡಿ ಕೊಳ್ಳುವಬಗ್ಗೆ ಕೆಲವು ಸಾಮಾನ್ಯ ಸೂಚನೆಗಳನ್ನು ಕೊಟ್ಟಿರುವರು.

ರಾಮಮೋಹನರು ತಮ್ಮ ಪ್ರತಿಭೆಯಿಂದಲೂ, ಇತರ ಭಾಷಾ ಸಾಹಿತ್ಯಗಳ ರೀತಿ ಮಾರ್ಗಗಳ ಪರಿಚಯದಿಂದಲೂ, ಬಂಗಾಳಿ ಗದ್ಯ ಸಾಹಿತ್ಯ ರಚನೆಯಲ್ಲಿ ಬಹು ಉಪಯುಕ್ತವಾದ ಮತ್ತು ಭಾಷೆಯ ಬೆಳೆ ವಣಿಗೆಗೆ ಸಹಾಯವಾಗುವ ಮಾರ್ಪಾಡುಗಳನ್ನು ಮಾಡಿದರು. ಬಂಗಾಳಿ ಗದ್ಯ ಹತ್ತಾರು ವರ್ಷಗಳಿಂದ ಸಂಸ್ಕೃತ ವಿದ್ವಾಂಸರ .ವಶವಾಗಿದ್ದುದರಿಂದ ಭಾಷೆ ಸಂಪೂರ್ಣವಾಗಿ ಸಂಸ್ಕೃತದ ಪ್ರಾಬಲ್ಯಕ್ಕೆ ಸಿಕ್ಕಿದ್ದುದಲ್ಲದೆ ವಾಕ್ಯ ಗಳಲ್ಲಿ ಪರಸ್ಪರ ಹೊಂದಿಕೆ ಇರಲಿಲ್ಲ. ಸಂಸ್ಕೃತ ವಿದ್ವಾಂಸರು ಸಂಸ್ಕೃತ ವನ್ನೇ ಆದರ್ಶಮಾಡಿಕೊಂಡು ಆ ಭಾಷೆಯಂತೆಯೇ ಬಂಗಾಳಿಯಲ್ಲಿಯೂ ಬರೆಯತೊಡಗಿದರು. ಇದರಿಂದ ಬಂಗಾಳಿಯೂ ಒಂದು ಬಗೆಯ ಸಂಸ್ಕೃತ ವಾಗಿ ಪರಿಣಮಿಸಿತು; ಸಂಸ್ಕೃತದ ಉಪಸರ್ಗಗಳಿಗೆ ಬದಲು ಬಂಗಾಳಿಯ ಉಪಸರ್ಗಗಳು ಮಾತ್ರ ಇರುತ್ತಿದ್ದುವು. ಅಲ್ಲದೆ ಬಂಗಾಳಿಯನ್ನು ಓದು ವವನು ಸಂಸ್ಕೃತದ ಕ್ಲಿಷ್ಟ ಪದಗಳನ್ನು ಅರ್ಥಮಾಡಿಕೊಳ್ಳಬೇಕಾಗಿತ್ತು. ವಿದ್ವಾಂಸರು ವ್ಯವಹಾರಸರಣಿಯಲ್ಲಿ ಬರೆಯುವಾಗ ಅವರ ಭಾಷೆ ಅರ್ಥ ವಾಗುವಂತಿತ್ತು. ಆದರೆ ಆ ಸರಣಿಯಲ್ಲಿ ಕಾವ್ಯರಚನೆ ಮಾಡುವುದು ಗ್ರಾಮ್ಯವೆಂದೂ ಅಶ್ಲೀಲವೆಂದೂ ಎಣಿಕೆಯಿತ್ತು. ಸಂಸ್ಕೃತ ವಿದ್ವಾಂಸ ರಲ್ಲದವರು ಬರೆದ ಕಾವ್ಯಗಳು ಈ ಅಂಶದಲ್ಲಿ ಹೆಚ್ಚಿನ ದೋಷಕ್ಕೆ ಪಾತ್ರ ವಾಗಿದ್ದುವಲ್ಲದೆ ಆ ಕಾವ್ಯಗಳು ಅರ್ಥವೂ ಆಗುತ್ತಿರಲಿಲ್ಲ. ರಾಮ ಮೋಹನರು ತಮ್ಮ ಪುಸ್ತಕಗಳಲ್ಲಿ ಅವಶ್ಯವಿದ್ದಷ್ಟು ಮಾತ್ರ ಸಂಸ್ಕೃತವನ್ನು ಉಪಯೋಗಿಸಿದರು. ಗಹನವಾದ ವೇದಾಂತ ವಿಷಯ ನಿರೂಪಣೆಗೂ ಎಲ್ಲರಿಗೂ ಅರ್ಥವಾಗುವ ದೇಶಭಾಷೆಯಾದ ಬಂಗಾಳಿಯನ್ನೇ ಉಪ ಯೋಗಿಸಿದರು; ಅವರು ಸಂಸ್ಕೃತದಲ್ಲಿ ಪಾಂಡಿತ್ಯ ಪಡೆದಿದ್ದಂತೆಯೇ ಇಂಗ್ಲಿಷ್, ಪಾರ್ಸಿ ಮತ್ತು ಅರಬ್ಬೀ ಭಾಷೆಗಳಲ್ಲಿಯೂ ಪಾಂಡಿತ್ಯ ಪಡೆದಿ ದ್ದರು. ಅವರ ಬಂಗಾಳಿ ಭಾಷೆ ಪಾಂಡಿತ್ಯ ಪ್ರದರ್ಶನಕ್ಕೆ ಇಳಿಯಲಿಲ್ಲ. ಅವರಿಗೆ ಸಂಸ್ಕೃತದ ವಿನಾ ಇತರ ಭಾಷೆಗಳಲ್ಲಿ ಪಾಂಡಿತ್ಯವಿಲ್ಲದಿದ್ದರೆ ಅವರ ಶೈಲಿಯೂ ಇತರ ಸಂಸ್ಕೃತ ಪಂಡಿತರಂತೆಯೇ ಆಗುತ್ತಿತ್ತು. ಅವರು

ಬಂಗಾಳಿ ಪದಗಳನ್ನೇ ಆರಿಸಿ ಉಪಯೋಗಿಸುತ್ತಿದ್ದರು ಸಂಸ್ಕೃತ ಶಬ್ದಗಳ ತದ್ಭವಗಳನ್ನೂ ಧಾರಾಳವಾಗಿ ಉಪಯೋಗಿಸುತ್ತಿದ್ದರು ಈ ತದ್ಭವಗಳ ಪ್ರಾಮುಖ್ಯತೆಯನ್ನು ಗ್ರಹಿಸುವಷ್ಟು ದೂರದರ್ಶಿತೆಯು ಅವರಲ್ಲಿತ್ತು ಅವರು ಉಪಯೋಗಿಸಿರುವ ಸಂಸ್ಕೃತ ತದ್ಭವಗಳು ಸರಳವಾಗಿಯೂ ಸುಲಭವಾಗಿಯೂ ಇದ್ದು ಎಲ್ಲರಿಗೂ ಅರ್ಥವಾಗುವಂತಿವೆ

ವಾಕ್ಯಕ್ಕೆ ಸಂಬಂಧಿಸದ ವಾಕ್ಯ ಭಾಗಗಳನ್ನು ವಾಕ್ಯದಲ್ಲಿ ಸೇರಿಸುವ ಆ ಕಾಲದ ಪದ್ಧತಿ ಅವರಿಗೆ ಸರಿಬೀಳಲಿಲ್ಲ ಆ ಪದ್ಧತಿಯನ್ನು ಸಂಪೂರ್ಣವಾಗಿ ಬಿಡುವುದು ಸಾಧ್ಯವಿಲ್ಲದಿದ್ದರೂ ಬಹು ಮಿತವಾಗಿ ಉಪಯೋಗಿಸಿದರು ಇದರಿಂದ ಅವರ ಭಾಷೆ ಇತರರ ಭಾಷೆಗಿಂತ ಸರಳವೂ ಸುಲಭವೂ ಆಯಿತು

ರಾಮಮೋಹನರು ಬಂಗಾಳಿ ಭಾಷೆಗೆ ಮಾಡಿದ ಮತ್ತೊಂದು ಸೇವೆ ವಿರಾಮ ಚಿಹ್ನೆಗಳನ್ನು ಉಪಯೋಗಕ್ಕೆ ತಂದುದು ವಾಕ್ಯಗಳು ಬೇರೆ ಬೇರೆ ಎಂದು ಸೂಚಿಸಿ ಅವು ಸುಲಭವಾಗಿ ಅರ್ಥವಾಗಲು ಅನುಕೂಲಿಸುವಂತೆ ವಾಕ್ಯಗಳ ಕೊನೆಯಲ್ಲಿ ಪೂರ್ಣ ವಿರಾಮ ಚಿಹ್ನೆಗಳನ್ನೂ ವಾಕ್ಯಭಾಗಗಳ ಮಧ್ಯದಲ್ಲಿ ಅರ್ಧವಿರಾಮ ಚಿಹ್ನೆಗಳನ್ನೂ ಉಪಯೋಗಿಸಿದರು ಆದರೂ ಪ್ರಶ್ನಾರ್ಥಕ ಚಿಹ್ನೆಗಳನ್ನಾಗಲಿ ಅಥವಾ ಇಂಗ್ಲಿಷ್ ಭಾಷೆಯಲ್ಲಿನ ಇತರ ಚಿಹ್ನೆಗಳನ್ನಾಗಲಿ ಉಪಯೋಗಕ್ಕೆ ತರಲಿಲ್ಲ

ಇದಲ್ಲದೆ ಕೆಲವು ಹೊಸಬಗೆಯ ಪ್ರಯೋಗಗಳನ್ನೂ ರೂಢಿಗೆ ತಂದರು ಉದಾಹರಣೆಗೆ ನಿಷೇಧಾರ್ಥ ಸೂಚಕವಾದ "ನ" ಪ್ರತ್ಯಯ ಪೂರ್ಣಕ್ರಿಯೆಗೆ ಪೂರ್ವದಲ್ಲಿ ಬರುತ್ತಿತ್ತು ರಾಮಮೋಹನರು ಪೂರ್ಣ ಕ್ರಿಯೆಯನಂತರ ಆ ಪ್ರತ್ಯಯವನ್ನು ಉಪಯೋಗಿಸಿದ್ದಾರೆ ಮತ್ತೊಂದು ಭಾವವಾಚಕ ಕ್ರಿಯಾಪದದ ಉಪಯೋಗ, ಇವಲ್ಲದೆ ಇದೇ ಬಗೆಯ ಇತರ ಹೊಸ ಭಾಷಾಪ್ರಯೋಗಗಳನ್ನು ರೂಢಿಗೆ ತಂದರು ಅವುಗಳಲ್ಲಿ ಕೆಲವು ಮಹರ್ಷಿ ದೇವೇಂದ್ರನಾಥ ಠಾಕೂರರ ಮತ್ತು ರವೀಂದ್ರನಾಥ ಠಾಕೂರರ ಬರೆವಣಿಗೆಯ ವಿಶೇಷ ಲಕ್ಷಣಗಳಾಗಿವೆ ರಾಮಮೋಹನರು

ಉಪಯೋಗಕ್ಕೆ ತಂದ ವಾಕ್ಯರಚನಾನಿಯಮಗಳೂ ಭಾಷಾ ಪ್ರಯೋಗಗಳೂ ಇಂಗ್ಲಿಷ್ ಭಾಷೆಯ ಪ್ರಭಾವದಿಂದ ಆದುವೆಂದು ಹೇಳಬಹುದು.

ರಾಮಮೋಹನರು ಬಂಗಾಳಿಯಲ್ಲಿ ಸುಮಾರು ೨೭ ಪುಸ್ತಕಗಳನ್ನು ಬರೆದರು. ಅವುಗಳಲ್ಲಿ ಕೆಲವು ಕಿರಿಯವು. ಅವೆಲ್ಲವುಗಳಿಂದ ಅವರ ಅದ್ಭುತ ಪಾಂಡಿತ್ಯ ವ್ಯಕ್ತವಾಗುವುದು. ಅಲ್ಲದೆ ಅವುಗಳಲ್ಲಿ ತೋರಿಬರುವ ಅವರ ತೀವ್ರ ಸತ್ಯಾನ್ವೇಷಣ ಬುದ್ಧಿಯೂ, ಅವರ ವಾದ ರೀತಿಯೂ, ಅವರ ಪುಸ್ತಕಗಳಿಗೆ ಸಾಹಿತ್ಯದಲ್ಲಿ ಸ್ಥಾನಕೊಟ್ಟಿವೆ. ಶಂಕರಾಚಾರ್ಯರ ವೇದಾಂತ ಮಾರ್ಗವನ್ನು ಅನುಸರಿಸಿ ಸರಳವಾದ ಬಂಗಾಳಿವಚನದಲ್ಲಿ ಬರೆದಿರುವ ಅವರ "ವೇದಾಂತ ಸೂತ್ರ"ವು ಇತರರಿಂದ ಬರೆಯಲಾಗದಂಥದು. ವೇದಾಂತದ ಗಹನವಾದ ತತ್ತ್ವಗಳು ಸಾಮಾನ್ಯ ಮನುಷ್ಯನಿಗೂ ಅರ್ಥವಾಗುವ ರೀತಿಯಲ್ಲಿ, ಅದರಲ್ಲಿಯೂ ಗದ್ಯಶೈಲಿಯು ಇನ್ನೂ ಪ್ರಾರಂಭದೆಶೆಯಲ್ಲಿದ್ದಾಗ, ರಚಿಸುವುದು ಸುಲಭವಾದುದಲ್ಲ. ಅವರ ವಾದಗಳಲ್ಲಿಯೂ ಲೇಖನಗಳಲ್ಲಿಯೂ ವಿಚಾರಪರತೆಗೆ ಅಗ್ರಸ್ಥಾನವಿದೆ.

ಅವರ ಪುಸ್ತಕಗಳಲ್ಲಿಯೂ ಲೇಖನಗಳಲ್ಲಿಯೂ ನಾವು ಗಮನಿಸಬೇಕಾದ ಮತ್ತೊಂದಂಶವು ಮನಸ್ಸಿನ ಆವೇಶಕ್ಕೆ ಒಳಗಾಗದಿರುವುದು. ತಮ್ಮ ಸುತ್ತಮುತ್ತಲಿನ ಅನಾಚಾರ ಅಜ್ಞಾನಗಳನ್ನು ನೋಡಿ ಸುಧಾರಣೆಗೆ ತೊಡಗಿರತಕ್ಕವರು ತಮ್ಮ ಲೇಖನಗಳನ್ನು ಕಟುವಾಗಿಯೂ ತೀಕ್ಷ್ಣವಾಗಿಯೂ ಬರೆಯಬಹುದಾಗಿತ್ತು. ಆದರೆ ಅವರ ತೀಕ್ಷ್ಣ ಬುದ್ಧಿಯೂ ಶಾಸ್ತ್ರಗಳಲ್ಲಿನ ನಂಬಿಕೆಯೂ ವಾದದಲ್ಲಿ ಶಾಂತತೆಯನ್ನವಲಂಬಿಸಲು ಸಹಾಯಮಾಡಿದುವು. ಅವರ ಲೇಖನಗಳಲ್ಲಿನ ಈ ಗಾಂಭೀರ್ಯವನ್ನು ಪಾಶ್ಚಾತ್ಯರೂ ಶ್ಲಾಘಿಸಿದ್ದಾರೆ.

ಇಂಡಿಯಾದಲ್ಲಿ ಬುದ್ಧನೂ, ಇಂಗ್ಲೆಂಡಿನಲ್ಲಿ ವಿಕ್ಲಿಫ್ಫನೂ, ಜರ್ಮನಿಯಲ್ಲಿ ಲೂದರನೂ ದೇಶಭಾಷೆಗಳಲ್ಲಿಯೇ ತಮ್ಮ ಉಪದೇಶಗಳನ್ನು ಜನರಲ್ಲಿ ಹರಡಿದಂತೆ ರಾಮಮೋಹನರೂ ಜನರ ವ್ಯವಹಾರ ಭಾಷೆಯಾದ ಬಂಗಾಳಿಯಲ್ಲಿಯೇ ತಮ್ಮ ಅಭಿಪ್ರಾಯಗಳನ್ನು ಜನರಲ್ಲಿ ಹರಡುವುದು ಯುಕ್ತವೆಂದು ಭಾವಿಸಿದರು. ಹೀಗೆ ಜನರ ವ್ಯವಹಾರ ಭಾಷೆ ಗಹನ ವೇದಾಂತ ವಿಚಾರಗಳ ಪ್ರತಿಪಾದನೆಗೆ ಉಪಯೋಗವಾದುದರಿಂದ ಆ

ಭಾಷೆಗೆ ಒಂದು ಉನ್ನತಿ ಬಂತು, ದೇಶಭಾಷೆಯಿಂದ ಮತಪರಿಷ್ಕರಣ ಕಾರ್ಯ ಸುಲಭವಾಗಿ ನಡೆಯುವಂತಾಯಿತು. ಅವರ ಕೈಯಲ್ಲಿ ಬಂಗಾಳಿ ಗದ್ಯ ಸತ್ವಯುತವಾದ ಸಾಧನವಾಗಿ ಪರಿಣಮಿಸಿತು. ಆಗತಾನೆ ಜನ್ಮವೆತ್ತಿ ಆಡಂಬರವೂ ಶಕ್ತಿಹೀನವೂ ಆಗಿದ್ದ ಬಂಗಾಳಿ ಗದ್ಯವನ್ನು ಗಂಭೀರವೂ, ಲಲಿತವೂ, ಸತ್ವಯುತವೂ ಆಗಿ ಗಹನವಿಚಾರ ವಿವರಣೆಗೆ ವಾಹನವಾಗಿ ಪರಿಣಮಿಸುವಂತೆಮಾಡಿ ಬಂಗಾಳಿ ಗದ್ಯ ಸಾಹಿತ್ಯಕ್ಕೆ ಹೊಸತನವನ್ನು ತಂದ ಕೀರ್ತಿ ರಾಮಮೋಹನರಿಗೆ ಸಲ್ಲತಕ್ಕದ್ದು. ಅವರ ಪ್ರಯತ್ನ, ಆದರ್ಶಗಳಿಲ್ಲದಿದ್ದರೆ ಬಂಕಿಮಚಂದ್ರ ಚಟರ್ಜಿ ಮತ್ತು ರವೀಂದ್ರನಾಥ ಠಾಕೂರರಂತಹ ಮಹಾ ವ್ಯಕ್ತಿಗಳಿಂದ ರಾರಾಜಿಸುವ ಹೆಮ್ಮೆ ವಂಗಸಾಹಿತ್ಯಕ್ಕೆಲ್ಲಿಯದು!

ರಾಮಮೋಹನರು ವೇದಾಂತ ಮತ್ತು ಧರ್ಮ ವಿಷಯಕವಾದ ಗ್ರಂಥಗಳನ್ನು ಬರೆದುದಲ್ಲದೆ ೧೮೨೬ರಲ್ಲಿ ಒಂದು ಬಂಗಾಳಿ ವ್ಯಾಕರಣವನ್ನು ಬರೆದರು. ಅದನ್ನು ಮೊದಲು ಇಂಗ್ಲಿಷಿನಲ್ಲಿ ಬರೆದು ಅನಂತರ ಬಂಗಾಳಿಗೆ ಭಾಷಾಂತರಿಸಿದರು. ಅದರ ಉದ್ದೇಶ ಯುರೋಪ್ಯರಿಗೂ ದೇಶೀಯರಿಗೂ ವ್ಯವಹಾರ ಸೌಕರ್ಯವನ್ನು ಒದಗಿಸುವುದಾಗಿತ್ತು. ಬಂಗಾಳಿಯಲ್ಲಿ ಈ ವ್ಯಾಕರಣ ೧೮೩೩ರಲ್ಲಿ ಪ್ರಕಟವಾಗಿ ಆಮೇಲೆ ನಾಲಾವರ್ತಿ ಪುನಃ ಮುದ್ರಿತವಾಯಿತು. ಅವರ ವ್ಯಾಕರಣ ಪ್ರಕಟವಾಗುವುದಕ್ಕೆ ಮೊದಲು ಇತರ ವ್ಯಾಕರಣಗಳು ಪ್ರಕಟವಾಗಿದ್ದುವು. ಆದರೆ ಅವುಗಳಿಂದ ಬಂಗಾಳಿ ಭಾಷೆಯ ಉತ್ತಮ ಲಕ್ಷಣಗಳು ಹೊರಪಡುತ್ತಿರಲಿಲ್ಲ. ಅವರು ತಮ್ಮ ವ್ಯಾಕರಣದಲ್ಲಿ ಸಂಸ್ಕೃತ ವ್ಯಾಕರಣ ಸೂತ್ರಗಳನ್ನು ಸಂಪೂರ್ಣವಾಗಿ ಅನುಸರಿಸದೆ ಬಂಗಾಳಿಭಾಷೆಗೆ ಹೊಂದದವುಗಳನ್ನೆಲ್ಲ ಬಿಟ್ಟುಬಿಟ್ಟರು. ಅವರು ತಮ್ಮ ಪ್ರತಿಭೆಯಿಂದ ಭಾಷಾರೀತಿ ಮರ್ಯಾದೆಗಳನ್ನರಿತು ಬಂಗಾಳಿಯು ಸಂಸ್ಕೃತವನ್ನು ಎಲ್ಲಿ ಅನುಸರಿಸಬೇಕು ಮತ್ತು ಎಲ್ಲಿ ಸ್ವತಂತ್ರವಾಗಿರಬೇಕೆಂಬುದನ್ನು ಗ್ರಹಿಸಿದರು. ಹೀಗೆ ಬಂಗಾಳಿ ಭಾಷೆಗೆ ಸಹಜವಾಗಿರುವ ವ್ಯಾಕರಣ ಸೂತ್ರಗಳನ್ನು ಭಾಷಾಶಾಸ್ತ್ರ ದೃಷ್ಟಿಯಿಂದ ಕಲ್ಪಿಸಿದರು. ಅವರ ವ್ಯಾಕರಣ ಬಹಳ ಸಂಗ್ರಹವಾಗಿದ್ದು ಮೂಲ ನಿಯಮಗಳನ್ನು ಮಾತ್ರ ಒಳಗೊಂಡಿತ್ತು. ಅವರು ಸೂಚಿಸಿದ ಮಾರ್ಗವನ್ನು ಹಿಡಿದು ವಿಶದವಾಗಿ ಅವರ ತರುವಾಯ ಯಾರೂ ವ್ಯಾಕರಣವನ್ನು

ರಚಿಸಲಿಲ್ಲ. ಅಲ್ಲಿಂದೀಚೆಗೆ ಬಂಗಾಳಿ ವ್ಯಾಕರಣ ಸಂಸ್ಕೃತ ಪಂಡಿತರ ಕೈಸೇರಿದುದರಿಂದ ಸಂಸ್ಕೃತದಲ್ಲಿನ ಉದ್ದುದ್ದದ ಸಮಾಸಗಳೂ, ಛಂದೋರೀತಿಗಳೂ, ಬಂಗಾಳಿ ಭಾಷೆಗೂ ಬಂದಿರುವುವು.

ರಾಮಮೋಹನರು ಶಾಲಾ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಬಂಗಾಳಿಯಲ್ಲಿ ರೇಖಾಗಣಿತ, ಖಗೋಳ ಮತ್ತು ಭೂಗೋಳ ಶಾಸ್ತ್ರಗಳನ್ನು ಬರೆದರು. ದೇಶೀಯರಿಗೆ ದೇಶಭಾಷೆಯಲ್ಲಿಯೇ ವಿದ್ಯೆ ಕಲಿಸಬೇಕೆಂಬ ತತ್ತ್ವವನ್ನು ಮೊದಲು ನಿರೂಪಿಸಿದವರು ರಾಮಮೋಹನರು. ದೇಶಭಾಷೆಯಲ್ಲಿ ಎಲ್ಲ ವಿಷಯಗಳನ್ನೂ ಕುರಿತ ಪಠ್ಯ ಪುಸ್ತಕಗಳ ಆವಶ್ಯಕತೆಯನ್ನು ಕಂಡುಕೊಂಡರು. ರಾಮಮೋಹನರು ಗತಿಸಿ ಒಂದು ಶತಮಾನಕ್ಕೆ ಮೇಲೆ ಆದರೂ ಅವರ ತತ್ತ್ವವು ಈ ದೇಶದಲ್ಲಿ ಇನ್ನೂ ಪೂರ್ಣವಾಗಿ ಕಾರ್ಯರೂಪಕ್ಕೆ ಬಂದಿಲ್ಲವೆಂಬುದನ್ನು ಗಮನಿಸಬೇಕಾಗಿದೆ. ಇಂಡಿಯಾದ ಅನೇಕ ವಿದ್ಯಾಶಾಲೆಗಳಲ್ಲಿಯೂ ವಿಶ್ವವಿದ್ಯಾಲಯಗಳಲ್ಲಿಯೂ ಇಂಗ್ಲಿಷ್ ಭಾಷೆಯ ಮೂಲಕವೇ ಎಲ್ಲ ವಿಷಯಗಳ ಬೋಧೆ ನಡೆಯುತ್ತಿರುವುದು.

ರಾಮಮೋಹನರಲ್ಲಿ ಉತ್ತಮ ಕವಿತಾ ಶಕ್ತಿಯೂ ಇತ್ತು. ಬಂಗಾಳಿ ಸಾಹಿತ್ಯದಲ್ಲಿ ವಚನ ನಿರ್ಮಾಣದಿಂದ ಅವರು ಎಷ್ಟು ಪ್ರಸಿದ್ಧರೋ ಅವರ ಆಧ್ಯಾತ್ಮಿಕ ಗೀತಗಳಿಂದಲೂ ಅಷ್ಟೇ ಪ್ರಸಿದ್ಧರಾಗಿರುವರು. ಅವರ ಗೀತಗಳಲ್ಲಿ ಭಾವೋನ್ನತಿಯನ್ನೂ ನೂತನ ರೀತಿಯನ್ನೂ ಕಾಣಬಹುದು. ಅದಕ್ಕೆ ಮೊದಲು ವೈಷ್ಣವ ಗುರುಗಳ ಗೀತಗಳಿಂದ ಬಂಗಾಳ ಕೊಚ್ಚಿಹೋಗಿದ್ದರೂ ಅವು ಆಧ್ಯಾತ್ಮಿಕ ಗೀತಗಳೆನಿಸಿಕೊಳ್ಳಲಾರವು. ರಾಮಮೋಹನರಿಗೆ ಮೊದಲು ಬಂಗಾಳಿಯಲ್ಲಿ ಆಧ್ಯಾತ್ಮಿಕ ಗೀತಗಳಿರಲಿಲ್ಲವೆಂದೇ ಹೇಳಬಹುದು. ಅವರ ಗೀತಗಳಲ್ಲಿ ಕಠಿಣಚಿತ್ತರ ಮನಸ್ಸನ್ನು ಕರಗಿಸುವ, ನಾಸ್ತಿಕರ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸುವ, ಇಹಲೋಕ ವಿಚಾರಗಳಲ್ಲಿ ಮಗ್ನರಾಗಿರುವವರನ್ನು ವಿರಕ್ತರನ್ನಾಗಿ ಮಾಡುವ ಶಕ್ತಿ ಇತ್ತಂತೆ. ಈ ಗೀತಗಳಲ್ಲಿ ಉಪಯೋಗಿಸಿರುವ ತಾತ್ತ್ವಿಕ ಮತ್ತು ಆಧ್ಯಾತ್ಮಿಕ ಪದಗಳು ಬಂಗಾಳಿ ವಾಙ್ಮಯ ಸಂಪತ್ತನ್ನು ವೃದ್ಧಿಗೊಳಿಸಿರುವುವು. ಈ ಗೀತಗಳು ಬಂಗಾಳಿ ಸಾಹಿತ್ಯದಲ್ಲಿ ಒಂದು ಬಗೆಯ ಸಾಹಿತ್ಯ ಶಾಖೆಗೆ ಮಾರ್ಗದರ್ಶಕವಾದುವು.

"ಇಂಡಿಯಾ ಗೆಜೆಟ್" ಪತ್ರಿಕೆಯ ಸಂಪಾದಕರಿಗೆ ರಾಮಮೋಹನರು ಬರೆದ ಒಂದು ಪತ್ರದಲ್ಲಿ ಇಂಡಿಯಾದಲ್ಲಿನ ಬ್ರಿಟಿಷರೂ ಬಂಗಾಳಿಯನ್ನೇ ಉಪಯೋಗಿಸಬೇಕೆಂದು ಸೂಚಿಸಿದರಂತೆ ವಿದೇಶೀಯರ ದೃಷ್ಟಿಯಲ್ಲಿ ದೇಶಭಾಷೆಗೆ ಉತ್ತಮ ಸ್ಥಾನ ದೊರಕಿಸುವುದೇ ಅವರ ಉದ್ದೇಶವಾಗಿತ್ತೆಂದು ಭಾವಿಸಬಹುದು

ರಾಮಮೋಹನರ ಕೃಷಿಯಿಂದ ಬಂಗಾಳಿ ಭಾಷಾ ಸಾಹಿತ್ಯಗಳು ಬಹುಮಟ್ಟಿಗೆ ಬೆಳೆದುವು

---

## ಪ್ರಕರಣ ೧೦

### ವಿದೇಶದಲ್ಲಿ ವಾಸ—ಇಂಡಿಯಾ ರಾಜ್ಯಾಂಗ ಸುಧಾರಣೆಗಳು —ಅವಸಾನ

ರಾಮಮೋಹನರ ವಿದೇಶ ಸಂಚಾರವು ಇಂಡಿಯಾ ದೇಶದ ಚರಿತ್ರೆಯಲ್ಲಿ ಗಮನಾರ್ಹವಾದ ಸಂಗತಿ. ವಿದೇಶ ಸಂಚಾರಕ್ಕೆ ಹೊರಟಿರುವ ಅನೇಕಾನೇಕ ಭಾರತೀಯರಿಗೆ ಅವರು ಮಾರ್ಗದರ್ಶಿಯಾದರು. ಇದರಿಂದಲೇ ಅವರು ಭಾರತೀಯರ ಶಾಶ್ವತವಾದ ಸ್ಮರಣೆ ಪ್ರಶಂಸೆಗಳಿಗೆ ಪಾತ್ರರು. ಇಂಗ್ಲಿಷ್ ಜನರಿಗೂ ತಮ್ಮ ಆಳಿಕೆಗೆ ಸೇರಿದ ಭಾರತೀಯರ ಪ್ರತಿಷ್ಠೆ ಸಂಸ್ಕೃತಿಗಳೇನೆಂಬುವು ತಿಳಿಯುವಂತಾಯಿತು. ವಿದೇಶದಲ್ಲಿ ರಾಮಮೋಹನರು ಸರ್ಕಾರದ ಸಭೆಗಳಲ್ಲಿ, ಚಕ್ರವರ್ತಿಯ ಆಸ್ಥಾನದಲ್ಲಿ, ಶ್ರೀಮಂತರ ಮಂಡಲಿಗಳಲ್ಲಿ, ವಿದ್ಯಾವಂತರ ತತ್ತ್ವಜ್ಞರ ಗೋಷ್ಠಿಗಳಲ್ಲಿ, ಧಾರ್ಮಿಕ ಸಂಸ್ಥೆಗಳಲ್ಲಿ, ಪೌರ್ವಾತ್ಯ ಪ್ರಪಂಚದ ಪ್ರತಿನಿಧಿಯಾಗಿ ನಿಂತರು. ಅವರು ತಮ್ಮ ದೇಶೀಯರಿಗೆ ಇಂಗ್ಲೆಂಡಿನ, ಪಾಶ್ಚಾತ್ಯರ, ಮೇಲ್ಮೆ ಸಂಸ್ಕೃತಿಗಳನ್ನು ವಿವರಿಸಿದ್ದಂತೆಯೇ ಇಂಗ್ಲೆಂಡ್ ದೇಶೀಯರಿಗೆ ಭಾರತದ, ಭಾರತೀಯರ ಪರಿಚಯ ಮಾಡಿಕೊಡಲು ಹೊರಟಿದ್ದರು.

ಹಡಗಿನ ಪ್ರಯಾಣದಲ್ಲಿ ಸಾಮಾನ್ಯವಾಗಿ ಬರುವ ಕಾಯಿಲೆಯು ರಾಮಮೋಹನರಿಗೆ ಬರಲಿಲ್ಲ; ಆದರೆ ಆ ಕಾಯಿಲೆಯು ಅವರ ಪರಿವಾರದವರಿಗೆ ಬಂತು. ಅವರು ದಿವದಲ್ಲಿ ಬಹುಭಾಗವನ್ನು ಮುಖ್ಯವಾಗಿ ಸಂಸ್ಕೃತ, ಹೀಬ್ರೂ ಪುಸ್ತಕಗಳನ್ನು ಓದುವುದರಲ್ಲಿಯೇ ಕಳೆಯುತ್ತಿದ್ದರಂತೆ; ಮಧ್ಯಾಹ್ನದವೇಳೆಯಲ್ಲಿಯೂ ಸಂಜೆಯಲ್ಲಿಯೂ ಗಾಳಿಸೇವನೆ ಮಾಡುತ್ತಿದ್ದರು. ಊಟವಾದಮೇಲೆ ಮಾತು ಕತೆಗಳಲ್ಲಿ ಭಾಗವಹಿಸುತ್ತಿದ್ದರು; ಒಂದು ಬಟ್ಟಲು ದ್ರಾಕ್ಷಾರಸವನ್ನು ತೆಗೆದುಕೊಳ್ಳುತ್ತಿದ್ದರು. ಯಾವಾಗಲೂ ವಾದದಲ್ಲಿ ಬಹಳ ಉತ್ಸಾಹದಿಂದ ಮಗ್ನರಾಗುತ್ತಿದ್ದರು. ಯಾವಾಗಲೂ ಹರ್ಷಚಿತ್ತರಾಗಿದ್ದುದರಿಂದ ಜಹಜಿನಲ್ಲಿ ಎಲ್ಲರೂ

ಅವರನ್ನು ಗೌರವಿಸುತ್ತಿದ್ದರು. ಅವರ ವಿಚಾರದಲ್ಲಿ ಯಾರು ಹೆಚ್ಚಿನ ಶ್ರದ್ಧೆ ಪ್ರೀತಿಗಳನ್ನು ತೋರಿಸಬೇಕೆಂಬುವರಲ್ಲಿ ಪೋಟಾಪೋಟಿ ನಡೆಯುತ್ತಿತ್ತು. ಅವರ ಸಹನೆಯು ಆಶ್ಚರ್ಯಕರವಾಗಿತ್ತು. ಹಡಗಿನಲ್ಲಿ ಅನೇಕಾವರ್ತಿ ಅವರ ಕೊಟಡಿಗೆ ನೀರು ನುಗ್ಗುತ್ತಿತ್ತು. ಆದರೂ ಅವರಿಗೆ ಮನಶ್ಶಾಂತಿ ತಪ್ಪುತ್ತಿರಲಿಲ್ಲ. ಒಂದುವೇಳೆ ಮನಶ್ಶಾಂತಿ ತಪ್ಪುತ್ತಿದ್ದರೆ ಅದು ಹಡಗಿನ ಪ್ರಯಾಣವನ್ನು ತಡಗಟ್ಟುತ್ತಿದ್ದ ಪ್ರತಿಕೂಲ ಮಾರುತಗಳಿಂದ ಆಗುತ್ತಿತ್ತು. ತಾವು ಇಂಗ್ಲೆಂಡನ್ನು ತಲಪುವುದಕ್ಕೆ ಮುಂಚೆಯೇ ಕಂಪನಿಯ ಅಧಿಕಾರ ಪತ್ರದ ಚರ್ಚೆಯು ಹೌಸ್ ಆಫ್ ಕಾಮನ್ಸಿನಲ್ಲಿ ಎಲ್ಲಿ ಬಂದುಬಿಡುವುದೋ ಎಂದು ತಮ್ಮ ಪ್ರಯಾಣವನ್ನು ಮುಂದುವರಿಸುವುದರಲ್ಲಿ ಆತುರರಾಗಿದ್ದರು.

ರಾಮಮೋಹನರು ಹೊರಟ ಜಹಜು ಗುಡ್ ಹೋಪ್ ಭೂಶಿರವನ್ನು ಸುತ್ತಿಕೊಂಡು ಹೋಗಬೇಕಾಗಿತ್ತು. ಅಲ್ಲಿ ಒಂದು ದುರ್ಘಟನೆ ಒದಗಿತು. ಜಹಜಿನ ಏಣಿಯನ್ನು ಭದ್ರವಾಗಿ ಬಿಗಿದಿರಲಿಲ್ಲ. ಅದನ್ನು ಹತ್ತುವಾಗ ರಾಮಮೋಹನರು ಬಿದ್ದು ಅವರ ಕಾಲು ಕುಂಟಾಯಿತು. ಇದರ ಬಾಧೆಯು ಜೀವಾವಧಿ ನಿಂತಿತ. ಆದರೆ ಶಾರೀರಕ ಬಾಧೆಯು ಅವರ ಮಾನಸಿಕ ಉತ್ಸಾಹವನ್ನು ಕುಗ್ಗಿಸಲಿಲ್ಲ. ಫ್ರಾನ್ಸಿನ ಕ್ರಾಂತಿ ಪಕ್ಷಕ್ಕನರಿಂದ, ಕ್ರಾಂತಿ ಸೂಚಕಬಾವುಟವನ್ನುಳ್ಳ, ಎರಡು ದೋಣಿಗಳು ಟೇಬಲ್‌ಕೊಲ್ಲಿಯಲ್ಲಿ ನಿಂತಿದ್ದುವು. ರಾಮಮೋಹನರ ಕಾಲು ಕುಂಟಾಗಿದ್ದರೂ ಅವನ್ನು ನೋಡುವುದಕ್ಕೆ ತವಕಪಡುತ್ತಿದ್ದರು. ಅವುಗಳ ನೋಟವು ಅವರಲ್ಲಿ ಉತ್ಸಾಹವನ್ನು ಉಕ್ಕಿಸಿ ಅವರ ಕಾಲಿನ ನೋವನ್ನು ಮರೆಸಿತಂತೆ. ಅವರು ಆ ದೋಣಿಗಳೊಳಕ್ಕೆ ಹೋಗಿ ಫ್ರಾನ್ಸಿನ ಸ್ವಾತಂತ್ರ್ಯ ವಿಜಯಕ್ಕಾಗಿ ತಮ್ಮ ಸಂತೋಷವನ್ನು ಫ್ರಾನ್ಸ್ ದೇಶೀಯರಿಗೆ ತಿಳಿಸಿದರಂತೆ. ಗುಡ್ ಹೋಪಿನ ವಸತಿಗೃಹದಲ್ಲಿದ್ದಾಗ ಅಲ್ಲಿನ ಗಣ್ಯಪ್ರಜೆಗಳು ರಾಮಮೋಹನರನ್ನು ನೋಡಲು ಬಂದಿದ್ದರಂತೆ.

ಇಂಗ್ಲೆಂಡನ್ನು ಸಮೀಪಿಸಿದಂತೆಲ್ಲ ಅಲ್ಲಿನ ನಡವಳಿಕೆಗಳನ್ನು ತಿಳಿದುಕೊಳ್ಳುವುದರಲ್ಲಿ ಅತಿಕುತೂಹಲವುಳ್ಳವರಾಗಿದ್ದರು. ಇಂಗ್ಲೆಂಡಿನಿಂದ ಬರುವ ಹಡಗುಗಳಿಂದ ಸಮಾಚಾರವನ್ನು ತಿಳಿದುಕೊಳ್ಳುವ ಅವಕಾಶವನ್ನು ಬಿಡಕೂಡದೆಂದು ನೌಕಾನಾಯಕನಲ್ಲಿ ಪ್ರಾರ್ಥಿಸಿದ್ದರು. ರಾಮಮೋಹನರ ಹಡಗು ಭೂಮಧ್ಯ ರೇಖೆಯನ್ನು ಸಮೀಪಿಸುವವೇಳೆಗೆ

ಇಂಗ್ಲೆಂಡಿನಿಂದ ಹೊರಟಿದ್ದ ಹಡಗಿನಿಂದ ಇಂಗ್ಲೆಂಡಿನ ಮಂತ್ರಿಮಂಡಲದಲ್ಲಿ ಬದಲಾವಣೆಯಾಗಿದ್ದಿತೆಂದು ತಿಳಿಯಿತು. ಅದನ್ನು ಕೇಳಿ ರಾಮ ಮೋಹನರಿಗೆ ಅತಿಸಂತೋಷವಾಯಿತು. ಆಮೇಲೆ ಕೆಲವು ದಿನಗಳವರೆಗೆ ಆ ವಿಚಾರದ ಮಾತೇ. ಮಂತ್ರಿಮಂಡಲದ ಬದಲಾವಣೆಯಿಂದ ಇಂಡಿಯಕ್ಕೆ ಪ್ರಯೋಜನವಾದೀತೆಂಬ ಊಹೆಯೇ ಅವರ ಸಂತೋಷಕ್ಕೆ ಕಾರಣ. ರಾಮಮೋಹನರಿದ್ದ ಹಡಗು ಇಂಗ್ಲಿಷ್ ಕಡಲ್ಗಾಲುವೆಯ ಹತ್ತಿರಕ್ಕೆ ಬರುವ ವೇಳೆಗೆ ನಾಲ್ಕುದಿನಗಳ ಹಿಂದೆ ಇಂಗ್ಲೆಂಡಿನಿಂದ ಹೊರಟಿದ್ದ ಹಡಗಿನಿಂದ ರಾಜ್ಯಸುಧಾರಣಾಕಾನೂನು ಎರಡನೆಯಸಲ ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ಅಂಗೀಕೃತವಾಯಿತೆಂದು ತಿಳಿಯಿತು. ಇಂಗ್ಲೆಂಡಿನ ರಾಜಕೀಯ ವ್ಯವಸ್ಥೆಯ ಬದಲಾವಣೆಯಿಂದ ಜನಾಂಗಕ್ಕೇ ಉಂಟಾದ ಸಂತೋಷವು ರಾಮಮೋಹನರಲ್ಲಿಯೂ ವಿದ್ಯುತ್ ಚಲನವಾದಂತೆ ಮಾಡಿತು.

ರಾಮಮೋಹನರ ಪತ್ರ ಪ್ರಸಂಗಗಳಿಂದ, ಲೇಖನಗಳಿಂದ, ಅವರು ಆ ಮೊದಲೇ ಇಂಗ್ಲೆಂಡ್ ಫ್ರಾನ್ಸ್ ದೇಶಗಳಲ್ಲಿ ಅನೇಕ ಮಾನ್ಯರಿಗೆ ತಿಳಿದವರಾಗಿದ್ದರು. ಅವರ ಕೀರ್ತಿಯು ಅವರಿಗಿಂತಲೂ ಮೊದಲೇ ವಿದೇಶವನ್ನು ಮುಟ್ಟಿತ್ತು. ಅವರು ಲಿವರ್‌ಪೂಲನ್ನು ೧೮೩೧ನೆಯ ಏಪ್ರಿಲ್ ೮ನೆಯ ತಾರೀಖು ಮುಟ್ಟಿದರು. ಅವರ ಆಗಮನದ ಸುದ್ದಿಯು ಪಟ್ಟಣದಲ್ಲಿ ಹರಡಿದ ಕೂಡಲೆ ಪ್ರಮುಖರೆಲ್ಲರೂ ಅವರನ್ನು ಎದುರುಗೊಳ್ಳಲು ಸೇರಿದ್ದರು. ತ್ರಿಕಾಲಗಳಲ್ಲಿಯೂ ಜನರನ್ನು ಭೇಟಿಮಾಡುವುದೇ ರಾಮಮೋಹನರ ಮುಖ್ಯ ಕೆಲಸವಾಗಿತ್ತು ; ಕೊನೆಗೆ ಊಟತಿಂಡಿಗಳ ಕಾಲದಲ್ಲಿಯೂ ಜನರು ನೆರೆಯುತ್ತಿದ್ದರು. ಅವರಲ್ಲೆಲ್ಲ ಮತ ಮತ್ತು ರಾಜಕೀಯ ಸಂಬಂಧವಾಗಿ ಚರ್ಚೆ ನಡೆಸುತ್ತಿದ್ದರು. ಲಿವರ್‌ಪೂಲಿನಲ್ಲಿ ಅವರು ಮೊದಲು ಭೇಟಿ ಮಾಡಿದ್ದು ಒಂದು ಏಕಮೂರ್ತಿ ಪಕ್ಷದ ಕ್ರೈಸ್ತ ದೇವಾಲಯ. ಅಲ್ಲಿ ಸೇವೆ ಮುಗಿದು ಹೊರಗೆ ಬರುವಾಗ ಅನೇಕರು ಅವರಿಗೆ ಹಸ್ತಲಾಘವ ಕೊಟ್ಟರು ; ಹೆಚ್ಚುಮಂದಿ ಇದಕ್ಕಾಗಿಯೇ ಕಾದುಕೊಂಡಿದ್ದರು. ಪ್ರಸಿದ್ಧ ಚರಿತ್ರಕಾರನಾದ ವಿಲಿಯಂ ರಾಸ್ಕೋ ಎಂಬವನು ಲಿವರ್‌ಪೂಲಿನಲ್ಲಿದ್ದನು. ಆತನು ಹಾಸಿಗೆ ಹಿಡಿದಿದ್ದುದರಿಂದ ತಾನೇ ರಾಮಮೋಹನರನ್ನು ಕಾಣಲು ಬರಲಾರದೆ ಅವರನ್ನೇ ತನ್ನಲ್ಲಿಗೆ ಬರಮಾಡಿ

ಕೊಳ್ಳಲು ತನ್ನ ಇಬ್ಬರು ಮಕ್ಕಳನ್ನು ಕಳುಹಿಸಿದನು. ಭಾರತೀಯ ಸುಧಾರಕನ ಮತ್ತು ಬ್ರಿಟಿಶ್ ಚರಿತ್ರಕಾರನ ಭೇಟಿಯು ಮನೋರಂಜಕವಾದುದು. "ಯೂರೋಪಿನಲ್ಲಿ ಮಾತ್ರವಲ್ಲದೆ ಪ್ರಪಂಚದಲ್ಲೆಲ್ಲ ಪ್ರಸಿದ್ಧರಾಗಿರುವ ತಮ್ಮನ್ನು ಸಂದರ್ಶಿಸಿದುದಕ್ಕಾಗಿ ನನಗೆ ಸಂತೋಷವೂ ಹೆಮ್ಮೆಯೂ ಆಗಿದೆ" ಎಂದರು ರಾಮಮೋಹನರು. "ಈ ದಿನದ ವರೆಗೂ ನನಗೆ ಪ್ರಾಣ ಕೊಟ್ಟುದಕ್ಕಾಗಿ ನಾನು ದೇವರಿಗೆ ಕೃತಜ್ಞನಾಗಿದ್ದೇನೆ" ಎಂದರು ರಾಸ್ಕೋ. ಇಂಗ್ಲೆಂಡಿನ ರಾಜನೀತಿಯ ಮತ್ತು ವಾಣಿಜ್ಯ ವಿಚಾರಗಳಲ್ಲಿ ರಾಮಮೋಹನರಿಗೆ ಎಷ್ಟು ಜ್ಞಾನ ತಿಳುವಳಿಕೆಯಿತ್ತೆಂಬುದು ಅವರ ಸಂಭಾಷಣೆಯಿಂದ ಹೊರಪಟ್ಟಿತು. ಅವರಿಗೆ ಕ್ರೈಸ್ತ ಮತ ಗ್ರಂಥಗಳಲ್ಲಿದ್ದ ಪರಿಷ್ಕಾರವಾದ ಜ್ಞಾನಕ್ಕೂ, ಆ ಗ್ರಂಥಗಳಿಂದ ಸುಲಭವಾಗಿಯೂ ತಡವಿಲ್ಲದೆಯೂ ವಾಕ್ಯಗಳನ್ನು ಉದ್ಧರಿಸುತ್ತಿದ್ದುದಕ್ಕೂ, ಅವರ ಸ್ವಾತಂತ್ರ್ಯ ಪ್ರೇಮಕ್ಕೂ, ಲಿವರ್‌ಪೂಲಿನ ಪ್ರಮುಖರೆಲ್ಲರೂ ಆಶ್ಚರ್ಯಚಕಿತರಾದರು.

ಲಿವರ್‌ಪೂಲಿನಲ್ಲಿ ಕೆಲವು ದಿನಗಳಿದ್ದ ಮೇಲೆ ರಾಮಮೋಹನರು ಮಾನ್‌ಚೆಸ್ಟರಿನ ಮಾರ್ಗವಾಗಿ ಲಂಡನ್ನಿಗೆ ಬಂದರು. ಬರುವಾಗ ಮಾನ್‌ಚೆಸ್ಟರಿನಲ್ಲಿ ಕೂಲಿಯವರೂ ಕೂಡಾ ತಮ್ಮ ಕೆಲಸವನ್ನು ಬಿಟ್ಟು ಅವರನ್ನು ನೋಡಲು ಬಂದರು. ಅಲ್ಲದೆ ಹೆಂಗಸರೂ, ಮಕ್ಕಳೂ, ಮುದುಕರೂ, ಅವರನ್ನು ನೋಡಲು ತಂಡತಂಡವಾಗಿ ಸೇರಿದರು. ಅನೇಕರು ಹಸ್ತಲಾಘವವನ್ನು ಕೊಟ್ಟರು. ಕೆಲವು ಸ್ತ್ರೀಯರು ಅವರನ್ನು ಆಲಿಂಗಿಸಿಕೊಳ್ಳಲು ಕೂಡ ಇಚ್ಛಿಸಿದರಂತೆ. ಅಲ್ಲಿನ ಜನಸಂದಣಿಯು ಸಾಂದ್ರವಾಗಿದ್ದುದರಿಂದ ಗಲಭೆ ತಪ್ಪಿಸಲು ಪೋಲೀಸರ ಸಹಾಯವನ್ನು ಕೋರಲಾಯಿತು.

ಲಂಡನ್ನಿನಲ್ಲಿ ಬಂದಿಳಿದ ದಿನವೇ ಪ್ರಸಿದ್ಧ ತತ್ತ್ವಜ್ಞನಾದ ಜೆರಮಿ ಬೆಂಥಮನು ರಾಮಮೋಹನರನ್ನು ನೋಡಲು ಬಂದನು. ಆತನು ಅನೇಕ ವರ್ಷಗಳಿಂದ ತನ್ನ ಮನೆಯಿಂದ ಹೊರಗೆ ಬಾರದೆಯೂ ಯಾರನ್ನೂ ನೋಡದೆಯೂ ಇದ್ದನಂತೆ. ಬೆಂಥಮನಿಗೂ ರಾಮಮೋಹನರಿಗೂ ಗಾಢವಾದ ಪ್ರೇಮ ಬೆಳೆಯಿತು. ಆತನು ರಾಮಮೋಹನರಿಗೆ ಬ್ರಿಟಿಷ್ ಪಾರ್ಲಿಮೆಂಟ್ ಸಭೆಯಲ್ಲಿ ಒಂದು ಸ್ಥಾನ ದೊರಕಿಸಲು ಪ್ರಯತ್ನ ಮಾಡಿದನು. ರಾಮಮೋಹನರು ಲಂಡನ್ನಿಗೆ ಬಂದಿರುವುದನ್ನು

ಕೇಳಿ ಪ್ರಮುಖರೆಲ್ಲರೂ ಅವರನ್ನು ನೋಡಲು ಗುಂಪುಗುಂಪಾಗಿ ಬರತೊಡಗಿದರು. ಬೆಳಗಿನಿಂದ ರಾತ್ರಿಯವರೆಗೂ ಅವರು ಇಳಿದಿದ್ದ ಮನೆಯಮುಂದೆ ಬಂಡಿಗಳು ಕಿಕ್ಕಿರಿದಿರುತ್ತಿದ್ದುವು. ಹೀಗೆ ಸಂತತವಾಗಿ ಜನರೊಡನೆ ಮಾತನಾಡುತ್ತ, ರಾಜಕೀಯ ವಿಚಾರಗಳನ್ನು ತೀವ್ರವಾಗಿ ಚರ್ಚಿಸುತ್ತ, ಉದ್ವೇಗಗೊಂಡ ರಾಮಮೋಹನರು ಅಸ್ವಸ್ಥರಾದರು. ಆಗ ವೈದ್ಯರು ಬಂದು ಸಾಲಿಟ್ಟು ಬರುತ್ತಿದ್ದ ಜನರನ್ನು ತಡೆಯಬೇಕೆಂದು ಹೇಳಿದರು. ಚಕ್ರವರ್ತಿಗಳ ಸಹೋದರರಾದ ಡ್ಯೂಕ್ ಆಫ್ ಕಂಬರ್ ಲ್ಯಾಂಡರು ರಾಮಮೋಹನರನ್ನು ಶ್ರೀಮಂತರ ಸಭೆಗೆ (ಹೌಸ್ ಆಫ್ ಲಾರ್ಡ್ಸ್) ಪರಿಚಯ ಮಾಡಿಕೊಟ್ಟರು. ವಿಲಿಯಂ ರಾಸ್ಕೋವು ರಾಮಮೋಹನರನ್ನು ಲಾರ್ಡ್ ಬ್ರೊಹಾಂ ಅವರಿಗೆ ಪರಿಚಯ ಮಾಡಿಸಲು ಒಂದು ಪತ್ರವನ್ನು ಬರೆದು ಕಳುಹಿಸಿದನು. ಅದರಲ್ಲಿ ರಾಮಮೋಹನರ ಮಹದ್ಗುಣಗಳನ್ನು ವರ್ಣಿಸಿ ಅವರು ಇಂಗ್ಲೆಂಡಿಗೆ ಬಂದಿರುವ ಉದ್ದೇಶವನ್ನು ವಿವರಿಸಿ ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ನಡೆಯುವ ಚರ್ಚೆಗಳನ್ನು—ಮುಖ್ಯವಾಗಿ ಇಂಡಿಯ ವಿಚಾರದ ಚರ್ಚೆಗಳನ್ನು—ಕೇಳಲು ಅವರಿಗೆ ಅವಕಾಶ ಕಲ್ಪಿಸಬೇಕೆಂದು ಪ್ರಾರ್ಥಿಸಿದನು. ಹೀಗೆ ರಾಮಮೋಹನರಿಗೆ ಅನೇಕ ಶ್ರೀಮಂತರಲ್ಲಿ ಗಾಢ ಮೈತ್ರಿ ಬೆಳೆಯಿತು. ಇಂಡಿಯದ ಸಮಾಚಾರಗಳನ್ನು ತಿಳಿಯಲು ಶ್ರೀಮಂತರನೇಕರು ರಾಮಮೋಹನರ ಸಹವಾಸವನ್ನು ಬಯಸುತ್ತಿದ್ದರು. ಶ್ರೀಮಂತರು ಅವರ ಪ್ರೇರಣೆಯಿಂದ ಇಂಡಿಯದ ನ್ಯಾಯಸಂಬಂಧದ ಕಾನೂನನ್ನು ವಿರೋಧಿಸಿದರು. ಚಕ್ರವರ್ತಿಗಳ ಸಹೋದರರಾದ ಡ್ಯೂಕ್ ಆಫ್ ಸಸ್ಸೆಕ್ಸ್ ಅವರಲ್ಲಿ ಅಂತರವಾದ ಪ್ರೀತಿಯಿಟ್ಟಿದ್ದರು; ರಾಯರು ಡ್ಯೂಕ್ ಆಫ್ ಡೆವನ್‌ಷೈರ್ ಅವರ ಅತಿಥಿಯಾಗಿ ಪದೇ ಪದೇ ಹೋಗುತ್ತಿದ್ದರಲ್ಲದೆ ಅವರ ಜೊತೆಯಲ್ಲಿ ಲಂಡನ್ನಿನ ನಾಟಕಶಾಲೆಗಳಿಗೂ ಭೇಟಿಕೊಡುತ್ತಿದ್ದರು. ಒಂದಾವರ್ತಿ ಫ್ಯಾನ್ನಿ ಕೆಂಬಲ್ ಎಂಬ ಪ್ರಸಿದ್ಧ ನಟಿಯ ಪ್ರಾರ್ಥನೆಯಂತೆ ಅವಳು ಪಾತ್ರವಹಿಸಿದ್ದ "ಇಸಬೆಲ್ಲ" ಎಂಬ ನಾಟಕವನ್ನು ನೋಡಲು ಹೋದರು. ನಾಟಕದ ಮಧ್ಯದಲ್ಲಿ ಎಷ್ಟೋ ಸಲ ಕಣ್ಣೀರು ಸುರಿಸಿದರಂತೆ. ಇದರಿಂದ ಸುಧಾರಕರಲ್ಲಿ ಕಲಾಪ್ರೇಮವೂ ಇತ್ತೆಂದು ಸ್ಪಷ್ಟವಾಗುವುದು. ಅವರು ಆಕೆಗೆ ಇಂಗ್ಲಿಷ್ ಭಾಷಾಂತರವಿರುವ ಕಾಳಿದಾಸ ಕವಿಯ "ಶಾಕುಂತಲಾ" ನಾಟಕವನ್ನು ತಮ್ಮ ಜ್ಞಾಪಕಾರ್ಥವಾಗಿ ಕೊಟ್ಟರು.

ಲಂಡನ್ನಿನಲ್ಲಿ ಅನೇಕ ಸಂಸ್ಥೆಗಳು ತಮ್ಮ ಸಭಾಕಲಾಪಗಳಿಗ ರಾಮ ಮೋಹನರನ್ನು ಬರಮಾಡಿಕೊಂಡವು. ಅವರ ವಿದ್ಯಾಪ್ರಾಪ್ತಿಗೂ, ಅವರ ನಯ, ವಿನಯ, ಗಾಂಭೀರ್ಯ, ಸರಳತೆ ಸೌಜನ್ಯ, ಸ್ತ್ರೀಮಾನ್ಯತೆ ಇವುಗಳಿಗೂ ಎಲ್ಲರೂ ಅವರನ್ನು ಬಹುವಾಗಿ ಶ್ಲಾಘಿಸಿ ಮನ್ನಿಸುತ್ತಿದ್ದರು. ಅವರ ಗುಣಗಳಿಗೆ ಮೋಹಿತನಾಗಿ ಡಾಕ್ಟರ್ ಎ ಬವನ, ತನ್ನ ಮಗುವಿಗ ರಾಮಮೋಹನ ಎಂದು ಹೆಸರಿಟ್ಟನು. ತನ್ನ ಹೆಸರನ್ನು ಧರಿಸಿದ್ದ ಮಗುವಿನಲ್ಲಿ ರಾಯರಿಗೆ ಹೆಚ್ಚಾದ ಮಮತೆ. ಆ ಮಗುವನ್ನು ನೋಡಲು ಪದೇ ಪದೇ ಹೋಗುತ್ತಿದ್ದರು. ತಾವು ವಿಶ್ರಮಿಸಿಕೊಳ್ಳುತ್ತಿದ್ದಾಗ ಆ ಮಗುವು ತಮ್ಮ ಎದೆಯನ್ನು ಹತ್ತಿ ತುಳಿಯುತ್ತಿದ್ದರೂ ಅವರು ಬೇಸರಿಕೆಪಟ್ಟು ಕೊಳ್ಳುತ್ತಿರಲಿಲ್ಲವಂತೆ. ಅವರ ಸೌಜನ್ಯ ಸರಳತೆಗಳಿಗೆ ಇದೇ ಸಾಕ್ಷಿ.

ರಾಮಮೋಹನರು ಇಂಗ್ಲೆಂಡ್ ದೇಶದ ಬಹು ಜನರ ಗೌರವ ಆದರಣೆಗಳಿಗೆ ಪಾತ್ರರಾದರೂ ಅವರನ್ನು ತಿರಸ್ಕಾರದಿಂದ ಕಂಡ ಜನರೂ ಇದ್ದರೆಂಬುದು ಒಂದು ಸಂದರ್ಭದಿಂದ ವ್ಯಕ್ತವಾಗುವುದು. ಲಂಡನ್ ಪಟ್ಟಣದಲ್ಲಿ ಒಬ್ಬ ಸೈನ್ಯದ ಅಧಿಕಾರಿಯು ಏರ್ಪಡಿಸಿದ್ದ ಒಂದು ಸಂತೋಷ ಕೂಟದಲ್ಲಿ, ಇಂಡಿಯ ದಲ್ಲಿ ಸೈನ್ಯದ ಅಧಿಕಾರದಲ್ಲಿದ್ದ ಒಬ್ಬನು ನುತ್ತೊಬ್ಬನನ್ನು ಕುರಿತು ಅಗೌರವದಿಂದ 'ಈ ಕರಿ ಮನುಷ್ಯ ಇಲ್ಲಿ ಏನು ಮಾಡುತ್ತಿದ್ದಾನೆ" ಎಂದು ಕೇಳಿದನಂತೆ. ರಾಮಮೋಹನರನ್ನು ಪ್ರೀತಿಸಿ ಗೌರವಿಸುತ್ತಿದ್ದವರೆಲ್ಲರಿಗೂ ಇದು ಕರ್ಣಕಠೋರವಾಗಿತ್ತು. ರಾಮಮೋಹನರು ಅನೇಕ ಉನ್ನತ ಬ್ರಿಟಿಷ್ ಅಧಿಕಾರಿಗಳ ಸ್ನೇಹಿತರಾಗಿದ್ದುದಲ್ಲದೆ ಅವರಿಗಿಂತ ಉತ್ತಮರೆನಿಸಿಕೊಂಡಿದ್ದರು. ಆದರೂ ಸೈನ್ಯಾಧಿಕಾರಿಯ ದೃಷ್ಟಿಯಲ್ಲಿ ಅವರು ಕೇವಲ "ಕರಿಯ ಮನುಷ್ಯ"ರು. ವರ್ಣಭೇದದ ತಾರತಮ್ಯದ ಕಣ್ಣು ಕುರುಡಲ್ಲವೆ?

ಮೊಗಲ್ ಚಕ್ರವರ್ತಿಯು ರಾಮಮೋಹನರಿಗ ರಾಜಾ' ಎಂಬ ಬಿರುದನ್ನು ಕೊಟ್ಟಿದ್ದನ್ನಾಗಲಿ, ಚಕ್ರವರ್ತಿಯ ಪ್ರತಿನಿಧಿಯಾಗಿ ಅವರು ವಿದೇಶ ಪ್ರಯಾಣ ಬೆಳೆಸಿದುದನ್ನಾಗಲಿ, ಈಸ್ಟ್ ಇಂಡಿಯ ಕಂಪನಿಯ ಅಧಿಕಾರಿಗಳು ಅಂಗೀಕರಿಸಲಿಲ್ಲ. ಆದರೂ ೧೮೩೧ನೆಯ ಜುಲೈ ೬ರಲ್ಲಿ

ಅಧಿಕಾರಿಗಳು ರಾಯರ ಗೌರವಾರ್ಥವಾಗಿ ಒಂದು ಭೋಜನವನ್ನು ಏರ್ಪಡಿಸಿದರು. ಸಂಸ್ಥೆಯ ಅಧ್ಯಕ್ಷನಾದ ಸರ್ ಚಾರ್ಲ್ಸ್ ಗ್ರ್ಯಾಂಟ್ ಎಂಬಾತನು ರಾಮಮೋಹನರು ಭಾರತ ಜನಾಂಗಕ್ಕೆ ಮಾಡಿದ್ದ ಮಹೋಪಕಾರಗಳನ್ನು ಕುರಿತು ಬಹುವಾಗಿ ಪ್ರಶಂಸಿಸಿದನು. "ತೋಟದ ಹೂಗಳಲ್ಲಿನ ಉತ್ತಮ ಮಧುವನ್ನು ದುಂಬಿಯು ಸಂಗ್ರಹಿಸುವಂತೆ ಈ ಬ್ರಾಹ್ಮಣನು ಮುಗಿಯದ ಜ್ಞಾನ ಭಂಡಾರದಿಂದ ಅಮೂಲ್ಯ ಜ್ಞಾನವನ್ನು ಶೇಖರಿಸಿರುವನು" ಎಂದನು. ಇದಕ್ಕೆ ಉತ್ತರವಾಗಿ ರಾಮಮೋಹನರು ಈಸ್ಟ್ ಇಂಡಿಯ ಕಂಪೆನಿಯ ಪ್ರಭುತ್ವದಲ್ಲಿ ದೇಶೀಯರ ಪ್ರಾಣಧನಗಳಿಗಿದ್ದ ಭದ್ರತೆಯನ್ನು ಶ್ಲಾಘಿಸಿ ವಿಲಿಯಂ ಬೆಂಟಿಂಕನು ದೇಶೀಯರ ಪ್ರೀತಿ ಸಂಪಾದಿಸಲು ಮಾಡಿದ್ದ ಮಹೋಪಕಾರಗಳನ್ನು ಕುರಿತು ಹೆಚ್ಚಾಗಿ ಪ್ರಶಂಸೆಮಾಡಿದರು. ಈ ಭೋಜನದಲ್ಲಿ ಎಲ್ಲರೂ ಸ್ವೇಚ್ಛೆಯಿಂದ ತಿಂದು ತೇಗುತ್ತಿದ್ದರೂ ರಾಯರು ಅನ್ನ ನೀರನ್ನು ಮಾತ್ರ ತೆಗೆದುಕೊಂಡರಂತೆ.

ಚಕ್ರವರ್ತಿಯ ಮಂತ್ರಿವರ್ಗವು ರಾಮಮೋಹನರು ಡೆಲ್ಲಿ ಬಾದಷಹನ ಪ್ರತಿನಿಧಿ ಎಂಬುದನ್ನೂ ಅವರಿಗೆ ಸಂದಿದ್ದ ಬಿರುದನ್ನೂ ಒಪ್ಪಿಕೊಂಡಿತು. ಇವಕ್ಕಿಂತಲೂ ಮುಖ್ಯವಾಗಿ, ಇಂಗ್ಲೆಂಡ್ ದೇಶದ ಪ್ರಜೆಗಳು ಆತ್ಮಾನಂದದಿಂದ ರಾಯರನ್ನು ಭಾರತೀಯರ ಪ್ರತಿನಿಧಿಯೆಂದು ಭಾವಿಸಿದರು.

ಸರ್. ಜೆ. ಡಬ್ಲ್ಯು. ಹಾಬ್‌ಹೌಸ್ ಅವರು ೧೮೩೧ರ ಸೆಪ್ಟಂಬರಿನಲ್ಲಿ ರಾಮಮೋಹನರನ್ನು ಚಕ್ರವರ್ತಿಯವರಿಗೆ ಪರಿಚಯಮಾಡಿಸಿದರು. ಇಂಥ ಮಾನ್ಯತೆಯನ್ನು ಪಡೆದ ಭಾರತೀಯರಲ್ಲಿ ಅವರೇ ಮೊದಲನೆಯವರು. ಆ ಕಾಲದಲ್ಲಿ ಅವರು ಅನೇಕ ದೊಡ್ಡ ಮನುಷ್ಯರ ಸಹವಾಸದಲ್ಲಿರಬೇಕಾದುದರಿಂದ ತಮಗೆ ಇಷ್ಟವಿಲ್ಲದಿದ್ದರೂ ಬಹಳ ಉತ್ತಮ ದರ್ಜೆಯ ಜೀವನ ಕ್ರಮವನ್ನು ಅನುಸರಿಸಬೇಕಾಗಿತ್ತು.

ಕಂಪೆನಿಯ ಶಾಸನದ ಪುನಾರಚನೆಯು ೧೮೩೧ರಲ್ಲಿ ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ವಿಚಾರಕ್ಕೆ ಬಂತು. ರಾಯರನ್ನು ಸಾಕ್ಷ್ಯ ಕೊಡಬೇಕೆಂದು ಕೇಳಿದಾಗಿಯೂ ಅವರು ಹಾಗೆ ಮಾಡಲಿಲ್ಲವೆಂದು ತೋರುತ್ತದೆ. ಆದರೆ ಇಂಡಿಯದ ಆರ್ಥಿಕ ಮತ್ತು ರಾಜಕೀಯಕ್ಕೆ ಸಂಬಂಧಿ

ಸಿದ ಅನೇಕ ವಿಚಾರಗಳನ್ನೊಳಗೊಂಡ ಕೆಲವು ಲೇಖನಗಳನ್ನು ಪ್ರಚುರ ಪಡಿಸಿದರು. ಅವುಗಳಲ್ಲಿ ಭೂಕಂದಾಯದ ವಿಚಾರವನ್ನು ಕುರಿತುದು ಮೊದಲನೆಯದು. ಅದರಲ್ಲಿ ಸೂಚಿಸಿನ ವಿಷಯಗಳು ಖಂಡನಾತ್ಮಕ ವಾಗಿಯೇ ಇರದೆ ರಚನಾತ್ಮಕವಾಗಿಯೂ ಇದ್ದುವು. ಇಂಡಿಯದಲ್ಲಿ ರೈತನ ಸ್ಥಿತಿಯು ಎಷ್ಟು ಶೋಚನೀಯ ಎಂಬುದನ್ನು ವ್ಯಕ್ತಪಡಿಸಿದರು. ಇದಕ್ಕೆ ಮುಖ್ಯ ಕಾರಣವು ಅವನು ತೆರಬೇಕಾಗಿದ್ದ ಹೆಚ್ಚಿನ ಭೂಕಂದಾಯ. ಭೂಕಂದಾಯವನ್ನು ತಗ್ಗಿಸಬೇಕೆಂದು ರಾಯರು ಸೂಚಿಸಿಸಿದರು. ಹೀಗೆ ಭೂಕಂದಾಯದಲ್ಲಿ ಕಡಿಮೆಯಾದ ಉತ್ಪತ್ತಿಯನ್ನು ಭೋಗ್ಯವಸ್ತುಗಳ ಮೇಲೆ ತೆರಿಗೆ ಹಾಕುವುದರಿಂದಲೂ ಹೆಚ್ಚು ಸಂಬಳದ ಇಂಗ್ಲಿಷ್ ಅಧಿಕಾರಿಗಳಿಗೆ ಬದಲು ಕಡಿಮೆ ಸಂಬಳದ ದೇಶೀಯರನ್ನು ನಿಯಮಿಸುವುದರಿಂದಲೂ ಸರಿಪಡಿಸಬಹುದೆಂದು ಸೂಚಿಸಿದರು. ಕೃಷಿ ವಿಧಾನಗಳನ್ನೂ ರೈತನ ಸ್ಥಿತಿಯನ್ನೂ ಉತ್ತಮಗೊಳಿಸುವುದರಿಂದಲೂ ದೇಶದ ಸಂಪತ್ತನ್ನು ಹೆಚ್ಚಿಸಬೇಕೆಂದು ತಿಳಿಸಿದರು. ದೇಶದ ಸಂಪತ್ತು ಹೊರದೇಶಗಳಿಗೆ ಹರಿಯುತ್ತಿರುವುದರಿಂದ ದೇಶವು ದಾರಿದ್ರ್ಯ ಸ್ಥಿತಿಗಿಳಿದಿದೆಯೆಂಬುದನ್ನು ಸ್ಪಷ್ಟವಾಗಿ ತಿಳಿಸಿದರು. ಅಲ್ಲಿ ಸೂಚಿತವಾಗಿರುವ ಅಂಶಗಳು ರಾಮಮೋಹನರ ಕಾಲಕ್ಕೆ ಎಷ್ಟು ಅನ್ವಯವಾಗುವುವೋ ಈಗಲೂ ಅಷ್ಟೇ, ಇನ್ನು ಹೆಚ್ಚಲ್ಲದಿದ್ದರೆ, ಅನ್ವಯವಾಗವುವು ಅವರು ದೇಶದ ಆರ್ಥಿಕ ಸ್ಥಿತಿಗತಿಗಳನ್ನು ಎಷ್ಟು ಕೂಲಂಕಷವಾಗಿ ವಿಚಾರಮಾಡಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದು.

ನ್ಯಾಯಾಧಿಕಾರಕ್ಕೆ ಸಂಬಂಧಿಸಿದ ಕೆಲವು ತಿದ್ದುಪಡಿಗಳನ್ನು ಸೂಚಿಸಿ ೧೮೩೧ ರ ಸೆಪ್ಟಂಬರಿನಲ್ಲಿ ಬರೆದರು. ಅದರಲ್ಲಿ ನ್ಯಾಯಾಸ್ಥಾನಗಳಲ್ಲಿ ಇಂಗ್ಲಿಷನ್ನು ಉಪಯೋಗಿಸುವುದರಿಂದ ಆ ಭಾಷೆಯ ಅಭ್ಯಾಸಕ್ಕೆ ಹೆಚ್ಚು ಉತ್ತೇಜನ ದೊರೆಯುವುದೆಂದು ಸೂಚಿಸಿದರು. ಇಂಗ್ಲಿಷ್ ಭಾಷೆ ಮತ್ತು ಇಂಗ್ಲಿಷರ ರಾಜಕೀಯ ಮತ್ತು ವ್ಯವಹಾರ ರೀತಿನೀತಿಗಳ ಅಭ್ಯಾಸದಿಂದ ಇಂಡಿಯ ದೇಶಕ್ಕೆ ಏಳಿಗೆ ದೊರೆಯುವುದೆಂದು ಅವರು ಸತ್ಯವಾಗಿಯೂ ನಂಬಿದ್ದರು. ಆದರೆ ಈಗ ಕಾಲಸ್ಥಿತಿ ವ್ಯತ್ಯಾಸವಾಗಿದೆ. ದೇಶದಲ್ಲೆಲ್ಲ ರಾಷ್ಟ್ರೀಯ ಭಾಷೆಯೊಂದಿರಬೇಕೆಂಬ ಆಶೆಯು ನಾಡಮುಖಂ

ಡರಲ್ಲಿ ಬೇರೂರಿದೆ. ಯಾವ ಭಾಷೆ ಅದಕ್ಕೆ ಯೋಗ್ಯವೆಂಬ ಪರಿಶೀಲನೆಗಳು ನಡೆಯುತ್ತಿವೆ. ನ್ಯಾಯಾಧಿಕಾರದ ಮೇಲ್ತರದ ಹುದ್ದೆಗಳಿಗೆ ಭಾರತೀಯರೂ ಅರ್ಹರೆಂದೂ ಪರದೇಶೀಯರಿಗೆ ದೇಶೀಯರ ಸ್ವಭಾವ ಸ್ಥಿತಿಗಳೂ ಅವರ ಭಾಷೆಯೂ ಬಾರನುದರಿಂದ ಅವರ ತೀರ್ಪು ತೃಪ್ತಿಕರವಾಗಿರದೆಂದೂ ರಾಮಮೋಹನರು ತಿಳಿಸಿದರು. ದೇಶೀಯ ನ್ಯಾಯಾಧಿಕಾರಿಗಳಿಂದ ಕೂಡಿದ ಪಂಚಾಯಿತಿ ಪದ್ಧತಿಯು ಏರ್ಪಾಡಾಗಬೇಕೆಂದು ಸೂಚಿಸಿದರು. ದೇಶೀಯರಲ್ಲಿ ಇಂಥ ಪದವಿಗಳಿಗೆ ಅರ್ಹರಾದವರು ದೊರೆಯುವುದು ದುರ್ಲಭವಲ್ಲವೆಂಬುದು ಅವರ ಅಭಿಪ್ರಾಯವಾಗಿತ್ತು. ರಾಜ್ಯಾಡಳಿತದಲ್ಲಿ ನ್ಯಾಯಶಾಖೆಯನ್ನೂ ಕಾರ್ಯನಿರ್ವಾಹಕ ಶಾಖೆಯನ್ನೂ ಬೇರೆ ಮಾಡುವುದು ಬಹಳ ಅಗತ್ಯವೆಂಬುದನ್ನು ವ್ಯಕ್ತಪಡಿಸಿದರು. ರಾಜ್ಯಶಾಸ್ತ್ರತತ್ತ್ವದಲ್ಲಿ ಇದು ಒಂದು ಮುಖ್ಯ ನಿಯಮ. ಪ್ರಪಂಚದಲ್ಲಿ ಉತ್ತಮ ರಾಜ್ಯಾಂಗ ವ್ಯವಸ್ಥೆಯುಳ್ಳದೆಂದು ಹೆಸರು ಪಡೆದಿರುವ ರಾಷ್ಟ್ರಗಳಲ್ಲೆಲ್ಲ ಈ ನಿಯಮವು ಪರಿಪಾಲಿತವಾಗಿದೆ. ರಾಜನೀತಿಯ ಈ ಮುಖ್ಯನಿಯಮವನ್ನು ಇಂಡಿಯ ರಾಜ್ಯಾಂಗದಲ್ಲಿ ರೂಢಿಗೆ ತರಬೇಕೆಂದು ವಾದಿಸುವುದಕ್ಕೆ ಮೊದಲು ಮಾಡಿದವರು ರಾಮಮೋಹನರು. ಅವರ ತರುವಾಯ ಅನೇಕ ದೇಶಭಕ್ತರು ಈ ವಿಚಾರದಲ್ಲಿ ಪ್ರಯತ್ನ ನಡೆಸಿದ್ದಾಗ್ಯೂ ಪ್ರಯೋಜನವಾಗಿಲ್ಲ. ಜವಾಬ್ದಾರಿಯುತವಾದ ದೊಡ್ಡ ಅಧಿಕಾರಗಳಿಗೆ ಸೀಮೆಯಿಂದಲೇ ಅನುಭವವಿಲ್ಲದ ಚಿಕ್ಕವಯಸ್ಸಿನ ಯುವಕರನ್ನು ತರುವ ಪದ್ಧತಿಯನ್ನು ರಾಮಮೋಹನರು ಖಂಡಿಸಿದರು.

"ಇಂಡಿಯದ ಸ್ಥಿತಿಗೆ ಸಂಬಂಧಿಸಿದ ಕೆಲವು ಪ್ರಶ್ನೆಗಳು" ಎಂಬ ಮತ್ತೊಂದು ಲೇಖನವನ್ನು ಪ್ರಕಟಿಸಿದರು. ಅದರಲ್ಲಿನ ಅಂಶಗಳಿಂದ ರಾಮಮೋಹನರ ರಾಜನೀತಿಯೂ ದೇಶಪ್ರೇಮವೂ ವ್ಯಕ್ತವಾಗುವುವು. ದೇಶದಲ್ಲಿನ ವಿದ್ಯಾವಂತರೂ ಅವಿದ್ಯಾವಂತರೂ ರಾಜ್ಯಾಡಳಿತದಲ್ಲಿ ಭಾಗ ವಹಿಸಬೇಕೆಂದು ಸೂಚಿಸಿದರು. ವಿದ್ಯಾವಂತರಿಗೆ ದೊಡ್ಡ ಅಧಿಕಾರಗಳನ್ನು ಕೊಡಬೇಕು; ಅವಿದ್ಯಾವಂತರನ್ನು ಸೈನಿಕರನ್ನಾಗಿ ನಿಯಮಿಸಬೇಕು. ವಿದ್ಯಾವಂತರನ್ನು ಸರಕಾರಿ ಕೆಲಸಗಳಲ್ಲಿ ಸೇರಿಸಿ ಅವರ ಯೋಗ್ಯತೆಯು ಹೆಚ್ಚಿದಂತೆಲ್ಲ ಅವರನ್ನು ಜವಾಬ್ದಾರಿಯುತವಾದ ಉತ್ತ

ವೋತ್ತಮ ಪದವಿಗಳಿಗೆ ಚುನಾಯಿಸಬೇಕು ಜವಾಬ್ದಾರಿಯ ಉತ್ತಮ ಸ್ಥಾನಗಳಿಗೆಲ್ಲ ವಿದೇಶೀಯರೇ ಅರ್ಹರೆಂಬ ಯೋಗ್ಯತೆಯ ಆರೋಪವನ್ನೂ ಪಕ್ಷಪಾತವನ್ನೂ ನೀಗಬೇಕೆಂದ ಒತ್ತಿಹೇಳಿದರು ಅನಕ್ಷರಸ್ಥರಿಗೆ ಸೈನ್ಯದಲ್ಲಿ ಸ್ಥಾನಕೊಡುವುದರಿಂದ ಸ್ಥಾಯಿಯಾದ ಸೈನ್ಯದ ಒಂದು ಭಾಗವನ್ನೂ ಅದಕ್ಕೆ ತಗಲುವ ವೆಚ್ಚವನ್ನೂ ತಗ್ಗಿಸಬಹುದೆಂದು ಸೂಚಿಸಿದರು "ಇಂಡಿಯ ಸರ್ಕಾರವು ಯುದ್ಧ ಶಾಂತಿ ಈ ವಿಚಾರಗಳಲ್ಲಿ ಸನ್ನಿವೇಶ ಸಂದರ್ಭಗಳಿಗೆ ತಕ್ಕಂತೆ ಕೆಲವುವೇಳೆ ಬ್ರಿಟಿಷ್ ಸರ್ಕಾರದ ಅಭಿಪ್ರಾಯ ಗಳಿಗೆ ವಿರುದ್ಧವಾಗಿ ನಡೆಯುವುದು ಅವಶ್ಯವಾಗಬಹುದು ಆದರೆ ಶಾಸನವಿಧಿ, ನ್ಯಾಯಾಧಿಕಾರ ಮತ್ತು ಭೂಕಂದಾಯದ ವಿಚಾರಗಳಲ್ಲಿ ಇಂಡಿಯದಲ್ಲಿನ ಸರ್ಕಾರವು ಬ್ರಿಟಿಷ್ ಸರ್ಕಾರದ ಆಜ್ಞೆಗಳಿಗೆ ಸಮಯ ವರಿತು ಆಕ್ಷೇಪ ವಿರೋಧಗಳನ್ನೂ ಸೂಚಿಸಬೇಕು ಈ ನೀತಿಯಿಂದ ದೇಶೀಯರಿಗೆ ಹೆಚ್ಚು ರಾಜಕೀಯ ಅಧಿಕಾರವು ಒದಗದಿದ್ದರೂ, ಸರ್ಕಾರ ದಲ್ಲಿ ಅವರಿಗೆ ಆಸಕ್ತಿಹುಟ್ಟುವುದಕ್ಕೂ ರಾಜ್ಯಕ್ಕೂ ಪ್ರಜೆಗಳಿಗೂ ನಿಕಟ ಸಂಬಂಧ ಉಂಟಾಗುವುದಕ್ಕೂ ಅವಕಾಶವಾಗುವುದು"—ಎಂದು ತಿಳಿಸಿ ದರು ರಾಮಮೋಹನರು ಇಲ್ಲಿ ಆಶಿಸಿರುವ ರಾಜಕೀಯ ಸ್ವಾತಂತ್ರ್ಯವು ಅವರ ಹಿಂದೆ ನೂರುವರ್ಷಗಳಮೇಲೆ ಕಳೆದಿದ್ದರೂ, ಅನೇಕ ದೇಶಭಕ್ತರು ತಮ್ಮ ಜೀವಮಾನವೆಲ್ಲ ಅದರ ಸಾಧನೆಗಾಗಿ ಶ್ರಮಿಸಿದ್ದರೂ, ಇನ್ನೂ ಕೈಗೂಡದ ಇದೆ

ರಾಮಮೋಹನರು ವಿದೇಶದಲ್ಲಿ ಪ್ರಕಟಿಸಿದ ಲೇಖನಗಳಿಂದ ರಾಜಕೀಯ ಮತ್ತು ಆರ್ಥಿಕ ವಿಚಾರಗಳಲ್ಲಿ ಅವರಿಗಿದ್ದ ಮಹತ್ತರ ಜ್ಞಾನವೂ ದೂರದೃಷ್ಟಿಯೂ ವ್ಯಕ್ತವಾಗುವುವು ಅವರು ಸಾಧಿಸಲು ಯತ್ನಿಸಿದ ಅನೇಕ ಸುಧಾರಣೆಗಳು ಜನರಿಗೆ ಇನ್ನೂ ಕೈಗೂಡದೆ ಸಂತತ ಪ್ರಯತ್ನವು ಜರುಗುತ್ತಲೇ ಇದೆ ಅವರು ಸಮಾಜಸುಧಾರಣೆಗ ಸಮರ ವನ್ನು ಹೂಡಿದಂತೆಯೇ, ದೇಶದ ಆರ್ಥಿಕ ಮತ್ತು ರಾಜಕೀಯ ಸ್ವಾತಂತ್ರ್ಯಕ್ಕೂ ಸಂಗ್ರಾಮವನ್ನು ಹೂಡಿದರು, ಅವರು ಸಮಾಜ ಸುಧಾರ ಕರೂ ಹೌದು, ರಾಜಕೀಯ ಸುಧಾರಕರೂ ಹೌದು

ಇಂಡಿಯದ ಭಾವಿ ರಾಜ್ಯಾಂಗ ರಚನೆಯನ್ನು ಕುರಿತು ಇಂಗ್ಲೆಂಡಿನಲ್ಲಿ ಅನೇಕರು ಅನೇಕ ಸಲಹೆಗಳನ್ನು ಕೊಡುತ್ತಿದ್ದರು. ಅದರಲ್ಲಿ ಇದು ಒಂದು ಸ್ವಾರಸ್ಯವಾದುದು; "ಇಂಡಿಯ ಸರ್ಕಾರದ ವಿಚಾರದಲ್ಲಿ ಸಲಹೆಗಳು" ಎಂಬ ಪ್ರಹಸನವೊಂದನ್ನು ಒಬ್ಬ ಬರೆದನಂತೆ. ಅದರಲ್ಲಿ ಲೇಖಕನು ಒಂದು ಪಾತ್ರದ ಬಾಯಲ್ಲಿ ಹೀಗೆ ಹೇಳಿಸಿದ್ದನು. "ಮೊದಲನೆಯದಾಗಿ ರಾಜಾ ರಾಮಮೋಹನರಾಯರನ್ನು ಇಂಡಿಯದ ಗವರ್ನರ್ ಜನರಲ್ ಆಗಿ ನಿಯಮಿಸಬೇಕೆಂದು ಸೂಚಿಸುತ್ತೇನೆ. ನ್ಯಾಯಶಾಖೆಯಲ್ಲಿನ ಅಧಿಕಾರಗಳಿಗೆಲ್ಲ ಮುಸಲ್ಮಾನರನ್ನೇ ನಿಯಮಿಸುವುದು (ರಾಯರು ಹೌಸ್ ಆಫ್ ಕಾಮನ್ಸ್ ಸಭೆಯ ಮುಂದೆ ಸಾಕ್ಷ್ಯವಿತ್ತಾಗ ಮಹಮ್ಮದೀಯರಿಗೆ ನ್ಯಾಯ ವಿಚಾರದಲ್ಲಿ ಹೆಚ್ಚು ತಿಳಿವಳಿಕೆಯಿರುವುದರಿಂದ ನ್ಯಾಯಶಾಖೆಯ ಸ್ಥಾನಗಳಿಗೆ ಅವರು ಹಿಂದೂಗಳಿಗಿಂತಲೂ ಅರ್ಹರು ಎಂದು ಹೇಳಿದ್ದರಂತೆ); ರೆವಿನ್ಯೂ ಶಾಖೆಯ ಅಧಿಕಾರಗಳನ್ನೆಲ್ಲ ಹಿಂದೂಗಳಿಗೆ ಕೊಡುವುದು; ಪೋಲೀಸ್ ಶಾಖೆಯ ಕೆಲಸಗಳನ್ನು ಐರೋಪ್ಯರಿಗೆ ಕೊಡುವುದು. ಈ ಕ್ರಮದಲ್ಲಿನ ಸೊಗಸೇನೆಂದರೆ ರಾಮಮೋಹನರು ಹಿಂದೂಗಳೂ ಅಲ್ಲ ಮಹಮ್ಮದೀಯರೂ ಅಲ್ಲ, ಕ್ರೈಸ್ತರೂ ಅಲ್ಲ; ಆದುದರಿಂದ ಅವರಿಗೆ ಯಾರಲ್ಲಿಯೂ ಪಕ್ಷಪಾತವಿರದು. ಉಳಿದವರಿಗೆ ಪರಸ್ಪರ ದ್ವೇಷ ವಿರುವುದರಿಂದ, ಅವರ ದ್ವೇಷದಿಂದಲೇ ಸರ್ಕಾರದ ಯಂತ್ರವು, ಒಂದು ಕಸೂರಿನ ಎರಡು ಕಡೆಗಳ ಭಾರವು ಸಮವಾಗಿರುವಾಗ ಭದ್ರವಾಗಿರುವಂತೆ, ಸ್ಥಿರವಾಗಿ ನಡೆಯುವುದು."

ಇಂಗ್ಲೆಂಡಿನ ರಾಜ್ಯವ್ಯವಸ್ಥೆಯ ಸುಧಾರಣಾಕಾನೂನು ೧೮೩೧ರಲ್ಲಿ ಮೊದಲನೆಯಸಲ ಕಾಮನ್ಸ್ ಸಭೆಯಲ್ಲಿ ಚರ್ಚೆಗೆ ಬಂತು. ರಾಮಮೋಹನರಿಗೆ ಆ ವಿಚಾರದಲ್ಲಿ ಬಹಳ ಆಸಕ್ತಿ. ಆಗ ಅವರು ಇಂಗ್ಲೆಂಡನ್ನು ಸಮೀಪಿಸಿ ಬರುತ್ತಿದ್ದರು. ಆದರೆ ಆ ಕಾನೂನು ಆಗ ಅಂಗೀಕೃತವಾಗಲಿಲ್ಲ. ಎರಡನೆಯ ಸಲ ಆ ಕಾನೂನು ಶ್ರೀಮಂತರ (ಲಾರ್ಡ್ಸ್) ಸಭೆಯಲ್ಲಿ ನಿರಾಕೃತವಾಯಿತು. ಆಗ ದೇಶವೆಲ್ಲ ಉದ್ವೇಗಗೊಂಡು ಒಂದು ಕ್ರಾಂತಿಯೊದಗುವ ಸೂಚನೆಗಳಿದ್ದುವು. ರಾಮಮೋಹನರು ಸ್ವಾತಂತ್ರ್ಯಪ್ರಿಯರಾಗಿದ್ದುದರಿಂದ ಬ್ರಿಟಿಷರ ಮನೋಭಾವಗಳಲ್ಲಿ ಸಂಪೂರ್ಣವಾಗಿ ಏಕೀಭವಿಸಿದರು. ಇಂಗ್ಲೆಂಡಿನ ಮುಂದಿನ ಅಭಿವೃದ್ಧಿಯು ಆ ಕಾನೂನಿಗೊದ

ಗುವ ಜಯವನ್ನು ಅವಲಂಬಿಸಿರುವುದೆಂದೂ, ಅದು ಇಂಗ್ಲೆಂಡಿನ ಸ್ವಾತಂತ್ರ್ಯಕ್ಕೆ ಮಾತ್ರ ಅನ್ವಯಿಸತಕ್ಕದ್ದಲ್ಲವೆಂದೂ, ಪ್ರಪಂಚದ ಎಲ್ಲ ಭಾಗಗಳಿಗೂ ಅದರ ಪರಿಣಾಮವು ವ್ಯಾಪಿಸುವುದೆಂದೂ, ಮುಖ್ಯವಾಗಿ ಇಂಡಿಯದ ಮೇಲೆ ಅದರ ವ್ಯಾಪ್ತಿಯು ಬಹಳ ಹೆಚ್ಚಾಗಿ ಬೀಳುವುದೆಂದೂ ರಾಮಮೋಹನರು ಭಾವಿಸಿದರು. ಆ ಕಾನೂನಿನ ಅಂಗೀಕಾರದಿಂದ ಒಂದು ಪರಿಷ್ಕೃತ ನೂತನ ಪ್ರಪಂಚವನ್ನೇ ಮನಗಂಡರು, ಅದರಿಂದ ಇಂಡಿಯ ದೇಶದ ಸ್ಥಿತಿಯು ಉತ್ತಮಗೊಳ್ಳುವುದೆಂದು ನಿರೀಕ್ಷಿಸಿದರು. ಆ ಕಾನೂನಿಗೆ ಅಪಜಯವಾದಲ್ಲಿ ಸತ್ಯ ಮತ್ತು ಸ್ವಾತಂತ್ರ್ಯಗಳಿಗೆ ಚ್ಯುತಿ ಬಂದಂತೆಯೆಂದು ವಾದಿಸಿದರು. ಸ್ವಾತಂತ್ರ್ಯ ಅಧೀನತೆಗಳಿಗೂ, ನ್ಯಾಯ ಅನ್ಯಾಯಗಳಿಗೂ, ಧರ್ಮ ಅಧರ್ಮಗಳಿಗೂ ನಡೆಯುತ್ತಲಿರುವ ಹೋರಾಟಕ್ಕೆ ಆ ಕಾನೂನು ಸಾಕ್ಷಿ ಎಂದು ಊಹಿಸಿದರು. ಅದು ೧೮೩೧ರ ಮಾರ್ಚಿಯಲ್ಲಿ ಪುನಃ ಕಾಮನ್ಸ್ ಸಭೆಯಲ್ಲಿ ತೀರ್ಮಾನಕ್ಕೆ ಬಂತು. ಆಗಲೂ ಅದಕ್ಕೆ ಜಯವಾಗದಿದ್ದಲ್ಲಿ ತಾವು ಇಂಗ್ಲೆಂಡ್ ದೇಶದ ಸಂಬಂಧವನ್ನು ಕಳೆದು ಸ್ವಾತಂತ್ರ್ಯದ ಬೀಡಾದ ಅಮೆರಿಕಕ್ಕೆ ಹೊರಟುಹೋಗಿ ಅದರ ಸ್ವಾಮ್ಯವನ್ನು ಅಂಗೀಕರಿಸುವುದಾಗಿ ಎಲ್ಲರಲ್ಲಿಯೂ ಹೇಳಿಕೊಂಡಿದ್ದರು. ಬ್ರಿಟಿಷ್ ಜನಾಂಗಕ್ಕೆ ಉತ್ತಮ ರಾಜಕೀಯ ಸುಧಾರಣೆಗಳು ದೊರೆಯುದುದಕ್ಕಾಗಿ ಒಬ್ಬ ಹಿಂದೂ ದೇಶದ ಪ್ರಜೆಯ ಈ ಪ್ರತಿಭಟನೆಯು ಅದರಲ್ಲಿಯೂ ಅವನನ್ನು ಕೇವಲ ' ಕರಿಯ ಮನುಷ್ಯ ' ಎಂದು ಭಾವಿಸಿದ್ದ ಗುಂಪಿಗೆ ಹಾಸ್ಯಕರವಾಗಿ ತೋರಬಹುದು. ರಾಮಮೋಹನರು ತಾವು ಭಾರತೀಯರ ಪ್ರತಿನಿಧಿಯೆಂದೇ ಭಾವಿಸಿದ್ದರು. ಮುಂದುವರಿಯುತ್ತಿದ್ದ ಭಾರತ ಜನಾಂಗಕ್ಕೆ ಬ್ರಿಟಿಷ್ ಜನಾಂಗದಲ್ಲಿ ಸೌಹಾರ್ದವು ತಪ್ಪಿ ಪ್ರಜಾಧೀನವಾದ ಫ್ರಾನ್ಸ್ ಜನಾಂಗದಲ್ಲಿ ಹೆಚ್ಚು ಸಹಾನುಭೂತಿಯುಂಟಾದಲ್ಲಿ ಬ್ರಿಟಿಷರನ್ನು ಇಂಡಿಯದವರು ವಿರೋಧಿಸುವುದು ಫ್ರಾನ್ಸ್ ದೇಶೀಯರಿಗೆ ಹೆಚ್ಚು ಕಷ್ಟವಾಗಲಾರದೆಂದು ಅವರು ಊಹಿಸಿದರು. ಆದರೆ ಈ ಸಲ ಕಾನೂನು ಅಂಗೀಕೃತವಾಯಿತು. ಆದ್ದರಿಂದ ರಾಮಮೋಹನರಿಗಾದ ಸಂತೋಷಕ್ಕೆ ಪಾರವಿರಲಿಲ್ಲ.

ಫ್ರಾನ್ಸಿನ ವಿದ್ಯಾವಂತ ಸಮಾಜವು ೧೮೧೮ ರ ವೇಳೆಗೆ ರಾಮಮೋಹನರ ಹೆಸರನ್ನು ಕೇಳಿದ್ದಿತು. ಇಂಡಿಯದಲ್ಲಿ [illegible] ನೆಲಸಿದ್ದ ಕೆಲವು ಮಹನೀಯರು ಅವರ ಲೇಖನಗಳನ್ನೂ ಗ್ರಂಥಗಳನ್ನು

ಫ್ರಾನ್ಸಿನಲ್ಲಿದ್ದ ತಮ್ಮ ಸ್ನೇಹಿತರಿಗೆ ಕಳುಹಿಸಿದ್ದರು. ಫ್ರಾನ್ಸಿಗೆ ಪ್ರಯಾಣ ಬೆಳೆಸಬೇಕೆಂಬ ಆಶೆಯು ಅವರಿಗೆ ಬಹುಕಾಲದಿಂದಿತ್ತು. ಆದುದರಿಂದ ೧೮೩೨ರ ಚಳಿಗಾಲದ ವೇಳೆಗೆ ಫ್ರಾನ್ಸನ್ನು ತಲಪಿದರು. ಅಲ್ಲಿನ ಪ್ರಕೃತಿ ಸೌಂದರ್ಯವೂ, ಅಲ್ಲಿನ ರಾಜ್ಯ ವ್ಯವಸ್ಥೆಯೂ, ಅವರಿಗೆ ವಿಶೇಷ ಮೆಚ್ಚಿಕೆಯಾಗಿದ್ದುವು. ಜನರು ಅವರನ್ನು ಬಹು ಆದರದಿಂದ ಬರಮಾಡಿಕೊಂಡರು. ಫ್ರಾನ್ಸಿನ ದೊರೆಯಾದ ಲೂಯಿ ಫಿಲಿಪ್ಪನ ಪರಿಚಯುವಾಗಿ ಆತನ ಜೊತೆಯಲ್ಲಿ ಅನೇಕ ಬಾರಿ ಭೋಜನ ಮಾಡಿದರು. ಫ್ರಾನ್ಸಿನ ಏಷಿಯಾಟಿಕ್ ಸೊಸೈಟಿ ಎಂಬ ಪ್ರಸಿದ್ಧ ವಿದ್ವಾಂಸರ ಮಂಡಲಿಗೆ ಅವರನ್ನು ಸದಸ್ಯರನ್ನಾಗಿ ಚುನಾಯಿಸಿದರು. ಇದು ಒಂದು ಅಪೂರ್ವಪದವಿ. ಇಂಥ ಪ್ರಶಸ್ತಿಯು ಅವರಿಗೆ ಇಂಡಿಯದಲ್ಲಾಗಲಿ ಇಂಗ್ಲೆಂಡಿನಲ್ಲಾಗಲಿ ದೊರೆತಿರಲಿಲ್ಲ. ಫ್ರಾನ್ಸಿನಿಂದ ೧೮೩೩ರ ಜನವರಿಯಲ್ಲಿ ಇಂಗ್ಲೆಂಡಿಗೆ ಹಿಂತಿರುಗಿ ಬಂದರು.

'ಧರ್ಮಸಭೆ'ಯವರು ಕಳುಹಿಸಿದ್ದ ಸಹಗಮನ ನಿರೋಧ ಬಿನ್ನಹವು ಕಾಮನ್ಸ್ ಸಭೆಯಲ್ಲಿ ಚರ್ಚೆಗೆ ಬಂದಾಗ ರಾಮಮೋಹನರು ಆ ಸಭೆಯಲ್ಲಿದ್ದರು. ಸಹಗಮನ ನಿರೋಧಕ್ಕೆ ವಿರುದ್ಧವಾಗಿ ಹೊರಟಿದ್ದ ಈ ಬಿನ್ನಹವು ೧೮೩೨ನೆ ಜುಲೈ ೧೧ನೆಯ ತಾರೀಖಿನದಿನ ನಿರಾಕೃತವಾಯಿತು. ಇದರಿಂದ ಆ ಕ್ರೂರಪದ್ಧತಿಯು ಸಂಪೂರ್ಣವಾಗಿ ನಿರ್ನಾಮವಾಯಿತು. ಅದನ್ನು ಪ್ರತ್ಯಕ್ಷವಾಗಿ ನೋಡುವ ಸುಯೋಗವು ರಾಮಮೋಹನರಿಗೆ ಒದಗಿತು. ತಮ್ಮ ಹಟವು ಕೊನೆಗೂ ಕೈಸಾರಿದುದಕ್ಕಾಗಿ ಹೆಚ್ಚು ಸಂತೋಷಿಸಿದರು. ಅವರಿಂದ ದೇಶಕ್ಕೆ ಆಗಿರುವ ಉಪಕಾರಗಳಲ್ಲಿ ಇದು ಮಹತ್ತರವಾದುದು. ಇದರಿಂದ ಇಂಡಿಯದ ಪ್ರಜೆಗಳು ಮಾತ್ರವಲ್ಲದೆ ನಾಗರಿಕ ಪ್ರಪಂಚವೇ ಅವರನ್ನು ಸ್ಮರಿಸಬೇಕಾಗಿದೆ.

ಡೆಲ್ಲಿ ಸಾಮ್ರಾಟನ ವರ್ಷಾಶನವನ್ನು ಹೆಚ್ಚಿಸಬೇಕೆಂದು ಈಸ್ಟ್ ಇಂಡಿಯ ಕಂಪೆನಿಯ ಅಧಿಕಾರಿಗಳ ಮುಂದೆ ವಾದಿಸುವುದು ರಾಮಮೋಹನರು ಹೊತ್ತ ಜವಾಬ್ದಾರಿಯಾಗಿತ್ತು. ಅದರಲ್ಲಿಯೂ ಅವರು ಕೃತಕೃತ್ಯರಾದರು. ಅವರ ಪ್ರಯತ್ನಗಳಿಂದ ಡೆಲ್ಲಿಯ ಚಕ್ರವರ್ತಿಗೆ ಕೊಡಲಾಗಿದ್ದ ವರ್ಷಾಶನವು ಮೂರು ಲಕ್ಷರೂಪಾಯಿಗಳಷ್ಟು ಹೆಚ್ಚಿಸಬೇಕೆಂದು ೧೮೩೩ ನೆಯ ಜುಲೈ ೧೨ರಲ್ಲಿ ತೀರ್ಮಾನವಾಯಿತು.

ಪುನಾರಚಿತವಾದ ಈಸ್ಟ್ ಇಂಡಿಯ ಕಾನೂನು ರಾಮಮೋಹನರಿಗೆ ಒಪ್ಪಿಕೆಯಾಗಲಿಲ್ಲವೆಂದು ಸಾಂಡ್ ಫರ್ಡ್ ಆರ್ನಾಟ್ ಬರೆದ ಒಂದು ಲೇಖನದಿಂದ ತಿಳಿಯುವುದು ಅವರು ಸುಧಾರಣೆಗೆ ಹೊರಟಿದ್ದರೂ ತೀವ್ರಗಾಮಿಗಳಾಗಿರದ ಮಿತಗಾಮಿಗಳಾಗಿಯೇ ಇದ್ದರು ಇಂಡಿಯ ದೇಶದರಾಜ್ಯಾಂಗಕ್ಕೆ ಒಂದು ನ್ಯಾಯವಿಧಾಯಕ ಸಭೆಯನ್ನೂ ಬಯಸಲಿಲ್ಲ ದೇಶದ ಆಡಳಿತವನ್ನು ನಡೆಸಲು ದೇಶೀಯರಿಗಿಂತ ಬ್ರಿಟಿಷರೇ ಉತ್ತಮರೆಂಬುದು ಅವರ ಭಾವನೆಯಾಗಿತ್ತು ದೇಶದ ಒಳ ಆಡಳಿತವನ್ನು ನಡೆಸುವುದರಲ್ಲಿ ಗಣ್ಯರಾದ ಕೆಲವುಮಂದಿ ಬ್ರಿಟಿಷರ ಮತ್ತು ದೇಶೀಯರ ಅಭಿಪ್ರಾಯವನ್ನು ಪಡೆದು ಅವರ ಸಲಹೆಯಂತೆ ಕಾನೂನುಗಳನ್ನು ಜಾರಿಗೆ ತರಬೇಕೆಂದು ಅವರು ಸೂಚಿಸಿದ್ದರು ಇಂಡಿಯ ರಾಜ್ಯವ್ಯವಸ್ಥೆಯಲ್ಲಿ ಅವರು ಸೂಚಿಸಿದವಲಕಗ-ು ಮಿತವೇ ಆಗಿದ್ದರೂ ಅವುಗಳಿಗೆ ಕಂಪೆನಿಯ ಕಾನೂನಿನಲ್ಲಿ ಸ್ಥಾನ ದೊರೆಯಲಿಲ್ಲ. ಬ್ರಿಟಿಷ್ ಪಾರ್ಲಿಮೆಂಟಿನ ಉಪಸಭೆಗೆ ತಾವು ಒಪ್ಪಿಸಿದ್ದ ಶಿಫಾರಸುಗಳು ಪರಿಣಾಮಕಾರಿಯಾಗಲಿಲ್ಲ ಆದುದರಿಂದ ರಾಮಮೋಹನರಿಗೆ ಬಹುಮಟ್ಟಿಗೆ ಆಶಾಭಂಗವಾಯಿತು ಹೊಸದಾಗಿ ಅಧಿಕಾರಕ್ಕೆ ಬಂದಿದ್ದ ಗ್ರೇ ಮಂತ್ರಿಮಂಡಲವನ್ನು ಅವರು ಮೊದಲು ಶ್ಲಾಘಿಸಿದ್ದರೂ ಇಂಡಿಯ ಕಾನೂನು ಜಾರಿಗೆ ಬರುವ ವೇಳೆಗೆ ಅವರಿಗೆ ಆ ಮಂತ್ರಿಮಂಡಲದಲ್ಲಿ ಅಸಮಾಧಾನವುಂಟಾಯಿತು ಅಂತೂ ಚಕ್ರವರ್ತಿ ನಾಲ್ಕನೆಯ ವಿಲಿಯಂ ಅವರು ಈಸ್ಟ್ ಇಂಡಿಯ ಕಾನೂನಿಗೆ ಒಪ್ಪಿಗೆ ಇತ್ತರು ಅದರೊಂದಿಗೆ ರಾಮಮೋಹನರ ಅವಿಶ್ರಾಂತ ಪ್ರಯತ್ನಗಳು ಕೊನೆ ಮುಟ್ಟಿದುವೆಂದು ಹೇಳಬಹುದು ರಾಮಮೋಹನರು ಈರೀತಿ ವಿದೇಶದಲ್ಲಿ ತಮ್ಮ ಜೀವನೋದ್ಯಮಗಳ ಶಿಖರವನ್ನು ಮುಟ್ಟಿದರೆಂದು ಹೇಳಬಹುದು

ಸಂತತ ಉದ್ಯೋಗದಿಂದ ರಾಮಮೋಹನರ ದೇಹಾರೋಗ್ಯವು ಕೆಟ್ಟಿತ್ತು ಅವರ ಯಕೃತ್ ಕೆಟ್ಟಿತಂತೆ ಆ ಕಾಲದಲ್ಲಿ ಅವರು ದಪ್ಪಗೆಊದಿಕೊಂಡಿದ್ದರಂತೆ ದೇಹಶ್ರಮದೊಂದಿಗೆ ಮಾನಸಿಕ ಚಿಂತೆಯೂ ಸೇರಿ ದೂರ ದೇಶದಲ್ಲಿ ಕೊನೆಕಾಲದಲ್ಲಿ ವ್ಯಾಕುಲಕ್ಕೀಡಾದರು ಇಂಡಿಯದಲ್ಲಿಯೂ ಇಂಗ್ಲೆಂಡಿನಲ್ಲಿಯೂ ಇದ್ದ ಮಕಿಂಟಾಷ್ ಕಂಪೆನಿ ಎಂಬ ಬ್ಯಾಂಕ್ ಸಂಸ್ಥೆಯು

ದಿವಾಳಿಯಾದುದರಿಂದ ಹೆಚ್ಚಿನ ದ್ರವ್ಯ ನಷ್ಟಕ್ಕೀಡಾದರು. ಇಂಡಿಯದಿಂದ ಅವರ ಮಕ್ಕಳು ಸಾಕಾದಷ್ಟು ಹಣ ಕಳುಹಿಸಲಾಗಲಿಲ್ಲ. ಈಸ್ಟ್ ಇಂಡಿಯ ಕಂಪೆನಿಯ ಡೈರೆಕ್ಟರುಗಳನ್ನು ತಮ್ಮ ಸ್ವದೇಶ ಪ್ರಯಾಣಕ್ಕಾಗಿ ನಾಲಕೇಳಿದರು. ಆದರೆ ಅವರು ನಿರಾಕರಿಸಿದ್ದರಿಂದ ಮಾನಸಿಕ ಚಿಂತೆಯು ಹೆಚ್ಚಿತು. ಹೀಗೆ ದೇಹ ಮನಸ್ಸುಗಳು ದುರ್ಬಲವಾಗಿದ್ದಾಗ ವಿಶ್ರಾಂತಿ ಶಾಂತಗಳಿಗಾಗಿ ಅವರು ೧೮೩೩ನೆಯ ಸೆಪ್ಟಂಬರ್ ತಿಂಗಳ ಮೊದಲಲ್ಲಿ ಬ್ರಿಸ್ಟಲ್ ಪಟ್ಟಣಕ್ಕೆ ಹೋದರು. ಅಲ್ಲಿ ಕುಮಾರಿ ಕ್ಯಾಸಲ್ಲಳ ಮನೆಯಲ್ಲಿ ಆದರದ ಆತಿಥ್ಯವನ್ನು ಪಡೆದರು. ಅಲ್ಲಿ ಅವರ ಪಾಲಕ ಪುತ್ರ ರಾಜರಾಮನು ವಿದ್ಯಾಭ್ಯಾಸಪಡೆಯುತ್ತಿದ್ದನು. ಆಕೆಯ 'ಸ್ಟೇಪಲ್‌ಟನ್ ಗ್ರೋವ್' ಎಂಬ ರಮ್ಯವಾದ ಮತ್ತು ಶಾಂತವಾದ ಮಂದಿರದಲ್ಲಿ ರಾಮಮೋಹನರ ದೇಹಶ್ರಮಕ್ಕೆ ಉಪಶಾಂತಿಯೊದಗಿತು. ಕುಮಾರಿ ಕಿಡ್ಡೆಲ್ ಕಾರ್ಪೆಂಟರ್ ಮುಂತಾದವರ ಸ್ನೇಹ ಆದರಣೆಗಳಿಂದ ಮನಸ್ಸು ಸುಖಮಯವಾಯಿತು.

ಇದ್ದಕ್ಕಿದ್ದಂತೆಯೇ ಸೆಪ್ಟಂಬರ್ ೧೧ನೆಯ ದಿನ, ಜ್ವರ ತಲೆನೋವು ಕಾಣಿಸಿಕೊಂಡುವು. ಮಾರನೆಯ ದಿನ ಮಧ್ಯರಾತ್ರಿಯ ವೇಳೆಗೆ ದೇಹವೆಲ್ಲ ತಣ್ಣಗಾಗಿ ನಾಡಿಯು ದುರ್ಬಲವಾಗಿ ಕೃಶರಾದರು. ವೈದ್ಯರು ದೇಹದ ಒಳಕ್ಕೂ ಹೊರಕ್ಕೂ ಔಷಧಿಗಳನ್ನು ಕೊಡಲು ಸ್ವಲ್ಪ ಚೇತರಿಸಿಕೊಂಡರು. ಕುಮಾರಿ ಹೇರಳು ಅವರು ಬೇಡವೆಂದರೂ ಅವರಬಳಿಯಲ್ಲಿಯೇ ಇದ್ದು ಶುಶ್ರೂಷೆ ಮಾಡಿದಳು. ಸೆಪ್ಟಂಬರ್ ೨೩ಕ್ಕೆ ಸ್ಥಿತಿಯು ವಿಷಮಿಸಿತು. ರೋಗಿಗೆ ಪ್ರಜ್ಞಾಶೂನ್ಯತೆಯೂ, ಉಬ್ಬಸವೂ, ಬಾಯನ್ನು ವಕ್ರವಾಗಿ ತಿರುಗಿಸುವುದೂ ಕಾಣಿಸಿಕೊಂಡವು; ಬಲಕಾಲೂ ತೋಳೂ ವಾಯು ಹಿಡಿದು ಚಲನೆಯಿಲ್ಲದಂತಾದುವು. ಸೆಪ್ಟಂಬರ್ ೨೭ರ ದಿನ ವ್ಯಾಧಿಯು ಉತ್ಕಟಾವಸ್ಥೆಗೇರಿತು. ಕ್ಷಣೇ ಕ್ಷಣೇ ಕ್ಷೀಣಿಸುತ್ತಿದ್ದರು. ಉಸಿರಾಡುವುದು ಕಷ್ಟವಾಯಿತು. ಬಲಗೈಯನ್ನು ನಿರಂತರವಾಗಿಯೂ ಎಡಗೈಯನ್ನು ಆಗಾಗ್ಗೂ ಚಲಿಸುತ್ತಲೇ ಇದ್ದರು. ಹೀಗೆ ನರಳುತ್ತಿರಲು ರಾತ್ರಿ ೨.೨೫ ಘಂಟೆಗೆ ಇಹಲೋಕದ ವ್ಯಾಪಾರಗಳು ನಿಂತವು. ಕೊನೆಯ ಉಸಿ

ರಿನ ಜೊತೆಯಲ್ಲಿ 'ಓಂ' ಎಂದು ಉಚ್ಚರಿಸಿದ್ದು ಅಲ್ಲಿದ್ದವರಿಗೆ ಕೇಳಬಂದಿತು.

ರಾಮಮೋಹನರು ತಮ್ಮ ಕಾಯಿಲೆಯ ಸಮಯದಲ್ಲಿ ಯಾರೊಂದಿಗೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ತಮ್ಮ ಶುಶ್ರೂಷೆ ಮಾಡುತ್ತಿದ್ದ ಸ್ನೇಹಿತರಿಗೂ ವೈದ್ಯರಿಗೂ ತಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದರು. ಯಾವಾಗಲೂ ಧ್ಯಾನಾಸಕ್ತರಾಗಿರುತ್ತಿದ್ದರಂತೆ. ಮರಣಾನಂತರ ದೇಹವನ್ನು ಪರೀಕ್ಷಿಸಲಾಗಿ ಮಿದುಳು ತೀವ್ರ ತಾಸಕ್ಕೀಡಾಗಿ ದೇಹದ ಸತ್ವವನ್ನೇ ಕುಗ್ಗಿಸಿಬಿಟ್ಟಂತೆ ತಿಳಿಯ ಬಂದಿತು.

ಭರತಖಂಡದ ಅಗ್ರಗಣ್ಯ ಜೀವಜ್ಯೋತಿಯು ಈ ರೀತಿಯಲ್ಲಿ ದೇಶಾಂತರದಲ್ಲಿ ಬಂಧುಬಳಗದ ಕಣ್ಮರೆಯಲ್ಲಿ ಅಸ್ತಂಗತವಾಯಿತು.

---

# ಪ್ರಕರಣ ೧೧

## ಶೀಲಸ್ವಭಾವ—ಮಹತ್ವ

ರಾಮಮೋಹನರ ರೂಪ ಆಕೃತಿಗಳು ಅನ್ಯಾದೃಶ್ಯವಾದುವು. ಆರಡಿ ಎತ್ತರದ ದೇಹ, ತಕ್ಕಷ್ಟು ಗಾತ್ರ, ವಿಶಾಲವಕ್ಷಸ್ಥಳ; ದೀರ್ಘಬಾಹು ಸ್ಫುರದ್ರೂಪ—ಇವುಗಳಿಂದ ಸುಂದರರೂ ದೃಢಕಾಯರೂ ಆಗಿದ್ದರು. ಮುಖಮಂಡಲವು ವಿಚಿತ್ರ ರೀತಿಯ ತೇಜಸ್ಸಿನಿಂದ ರಾರಾಜಿಸುತ್ತಿತ್ತು. ಆ ತೇಜೋರಾಶಿಯನ್ನು ನೋಡಿ ಮತ, ದೇಶ, ಜನಾಂಗಗಳ ವ್ಯತ್ಯಾಸ ವಿಲ್ಲದೆ ಮುಗ್ಧರಾಗದವರಿಲ್ಲ; ಆಕರ್ಷಿತರಾಗದವರಿಲ್ಲ; ಪ್ರೇರಿತರಾಗದವ ರಿಲ್ಲ. ಈ ಸಲ್ಲಕ್ಷಣವೊಂದೇ ಅವರ ಮಹತ್ವವನ್ನು ಸಾರಲು ಸಾಕಾಗಿತ್ತು.

ಆಹಾರ ವಿಹಾರದಲ್ಲಿ ರಾಮಮೋಹನರಿಗೆ ಸಂಕೋಚವಿರಲಿಲ್ಲ; ಭರ್ತಿಯಾಗಿ ಸೇವಿಸುತ್ತಿದ್ದರಂತೆ. ದಿನಕ್ಕೆ ಹನ್ನೆರಡು ಸೇರು ಹಾಲು ಕುಡಿಯುತ್ತಿದ್ದರಂತೆ! ಉಪಾಹಾರಕ್ಕೆಂದು ೫೦ ಮಾವಿನ ಹಣ್ಣುಗಳನ್ನು ತಿನ್ನುತ್ತಿದ್ದುದೂ ಉಂಟಂತೆ! ಹೀಗೆ ದೇಹವನ್ನು ಚೆನ್ನಾಗಿ ಬೆಳೆಸಿ ದೃಢಾಂಗರಾಗಿದ್ದುದರಿಂದಲೇ ಚಿಕ್ಕಂದಿನಲ್ಲಿ ಗೃಹಚ್ಯುತರಾದಾಗ ಕಾಲು ನಡಿಗೆಯಲ್ಲಿಯೇ ಟಿಬೆಟ್ ಮೊದಲಾದ ದೇಶಗಳಲ್ಲಿ ಸಂಚಾರಮಾಡಲೂ ದೇಹಶ್ರಮ ಅನುಭವಿಸಲೂ ಸಾಧ್ಯವಾಯಿತೆನ್ನಬಹುದು. ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಬಲ್ಲವರಾದುದರಿಂದಲೇ ಕಲ್ಕತ್ತೆಯಲ್ಲಿ ದುಷ್ಟರು ಅವರ ಪ್ರಾಣಕ್ಕೆ ಹಾನಿತರಲು ಯತ್ನಿಸಿದಾಗ ತಮ್ಮನ್ನು ಕೊಲ್ಲತಕ್ಕವರು ಯಾರೂ ಇಲ್ಲವೆಂದು ಧೈರ್ಯದಿಂದಿದ್ದರು.

ತಮ್ಮ ದಿನಚರಿಯ ಕರ್ಮಗಳನ್ನು ನಿಯತ ಕಾಲಗಳಲ್ಲಿ ಕ್ರಮದಿಂ ದಲೂ ಆಸಕ್ತಿಯಿಂದಲೂ ಜರುಗಿಸುತ್ತಿದ್ದರು. ಅವರ ಸೇವಕ ರಾಮ ಹರಿದಾಸನು ತನ್ನ ಯಜಮಾನನ ದಿನಚರಿಯ ಕ್ರಮವನ್ನು ಹೀಗೆ ವಿವರಿಸಿದ್ದಾನೆ:—

" ಮುಂಜಾನೆ ಸುಮಾರು ೪ ಘಂಟೆ ವೇಳೆಗೆದ್ದು ಸ್ನೇಹಿತರ ಜೊತೆಯಲ್ಲಿ ಗಾಳಿಸಂಚಾರ ಹೋಗುವುದು , ಸಾಮಾನ್ಯವಾಗಿ ಸೂರ್ಯೋದಯದ ವೇಳೆಗೆ ಹಿಂತಿರುಗುವುದು , ಆಮೇಲೆ ವರ್ತಮಾನ ಪತ್ರಿಕೆಗಳನ್ನು ಓದಿಸಿ ಕೇಳುತ್ತಿದ್ದುದು , ಆ ಮೇಲೆ ಚಹಾ ಕುಡಿಯುವುದು , ಪತ್ರವ್ಯವಹಾರ , ಸ್ನಾನ, ಸುಮಾರು ಹನ್ನೊಂದು ಘಂಟೆ ವೇಳೆಗೆ ಭೋಜನ , ಪುನಃ ವರ್ತಮಾನ ಪತ್ರಿಕೆಗಳ ಓದುವಿಕೆ, ಸ್ವಲ್ಪ ನಿದ್ರೆ, ಎದ್ದಮೇಲೆ ಮಾತುಕಥೆ ಅಥವಾ ಸ್ನೇಹಿತರ ದರ್ಶನ , ಮೂರು ಘಂಟೆಯ ವೇಳೆಗೆ ಉಪಾಹಾರ , ಐದು ಘಂಟೆಗೆ ಫಲಾಹಾರ , ಸಂಜೆ ಗಾಳಿ ಸಂಚಾರ , ರಾತ್ರಿ ಹತ್ತು ಘಂಟೆಗೆ ಊಟ ಮಧ್ಯ ರಾತ್ರಿಯವರೆಗೂ ಸ್ನೇಹಿತರೊಂದಿಗೆ ಚರ್ಚೆ, ಸಂಭಾಷಣೆ, ಅನಂತರ ನಿದ್ರೆ "

ಅವರ ಸ್ನಾನದ ರೀತಿಯು ವಿಚಿತ್ರವಾದುದು ತೊಟ್ಟಿಕ್ಕುವಂತೆ ಎಣ್ಣೆಯನ್ನು ಮೈತುಂಬ ಹಚ್ಚಿಕೊಳ್ಳುತ್ತಿದ್ದರಂತೆ ಇಂಥ ಸಂದರ್ಭದಲ್ಲಿ ದೇವೇಂದ್ರನಾಥ ಠಾಕೂರನು ಚಿಕ್ಕವನಾಗಿದ್ದಾಗ ಒಂದುಸಲ ನೋಡಿದ ನಂತೆ ಆ ದಪ್ಪದೇಹ, ವಿಶಾಲವಾದ ವಕ್ಷಸ್ಥಲ, ನಡುವಗ ಸುತ್ತಿದ್ದ ಸಣ್ಣ ಚೌಕ, ಎಣ್ಣೆಯಲ್ಲಿ ಮುಳುಗಿ ಎತ್ತಿದವರಂತೆ ಹಚ್ಚಿಕೊಂಡಿರುವ ಎಣ್ಣೆ—ಇದನ್ನು ನೋಡಿ ಬಾಲಕನಿಗೆ ಭಯವಾಯಿತಂತೆ ಈ ಸ್ಥಿತಿಯಲ್ಲಿ ದಪ್ಪಹೆಜ್ಜೆ ಹಾಕುತ್ತ ಬಚ್ಚಲ ಮನೆಯಲ್ಲಿ ನೀರಿನ ತೊಟ್ಟಿಗಿಳಿಯುತ್ತಿದ್ದರು ಆಗ ಸಂಸ್ಕೃತ, ಪಾರ್ಸಿ ಮತ್ತು ಅರಬ್ಬೀ ಭಾಷೆಗಳಲ್ಲಿ ಶ್ಲೋಕಗಳನ್ನೂ ವ್ಯಾಕರಣ ಸೂತ್ರಗಳನ್ನೂ ಹೇಳುತ್ತಿದ್ದರು ಹೀಗೆ ಒಂದು ಘಂಟೆಯಾದ ಮೇಲೆ ಸ್ನಾನ ಮುಗಿಯುತ್ತಿತ್ತು

ರಾಮಮೋಹನನಿಗೆ ಬದುಕಿನಲ್ಲಿ ಅಸಂತೋಷವಾಗಲಿ ಸುಖಬೇಡ ಎನ್ನುವುದಾಗಲಿ ಇರಲಿಲ್ಲ. ಬದುಕಿನಲ್ಲಿ ಸಂತೋಷ ಉತ್ಸಾಹಗಳನ್ನು ಕಂಡಿದ್ದರು ದೇಹವನ್ನು ಚೆನ್ನಾಗಿ ಪೋಷಿಸಬೇಕೆಂದು ಹೇಳುತ್ತಿದ್ದರು. ಮದ್ಯ ಪಾನವನ್ನೂ ಮಾಂಸಾಹಾರವನ್ನೂ ಮಿತವಾಗಿ ಮಾಡಬಹುದೆಂಬುದು ಅವರ ಅಭಿಪ್ರಾಯ ಒಂದಾವರ್ತಿ ದೇವೇಂಧ್ರನಾಥ ಠಾಕೂರನನ್ನು ಮಾಂಸ ತಿನ್ನುವೆಯಾ ಎಂದು ಕೇಳಿ ಪ್ರತಿದಿನವೂ ಊಟದ ಜೊತೆಗೆ ಸ್ವಲ್ಪ ಮಾಂಸವನ್ನು ಕೊಡುವಂತೆ ಅವನ ತಂದೆಯನ್ನು ಕೇಳ

ಬೇಕೆಂದು ಬುದ್ಧಿವಾದ ಹೇಳಿದನು. ಆಗ ರಾಮಮೋಹನರು ಹೀಗೆ ಹೇಳಿದರು.—"ಗಿಡಗಳಿಗೆ ಚೆನ್ನಾಗಿ ನೀರೆರೆಯಬೇಕು. ಇಲ್ಲದಿದ್ದರೆ ಅವು ಎತ್ತರವಾಗಿ ಪುಷ್ಟವಾಗಿ ಬೆಳೆಯಲಾರವು" ದೇಹವು ಭಗವಂತನಿಂದ ಕೊಡಲ್ಪಟ್ಟದ್ದು, ಅದನ್ನು ಉಪೇಕ್ಷಿಸಬಾರದು ಎಂದು ಹೇಳುತ್ತಿದ್ದರು.

ಉಡುಪಿನ ವಿಚಾರದಲ್ಲಿ ರಾಮಮೋಹನರಿಗೆ ಒಂದು ಸೌಂದರ್ಯಾಭಿರುಚಿಯಿತ್ತು. ಕೊಳಕೊಳಕಾಗಿ ಅಥವಾ ವಿಲಕ್ಷಣವಾಗಿರುವವರನ್ನು ಕಂಡರೆ ಆವರಿಗಾಗದು. ಆಗಿನ ಪದ್ಧತಿಯಂತೆ ಅವರು ಮಹಮ್ಮದೀಯರ ರೀತಿಯಲ್ಲಿ ಉಡುಪನ್ನು ಧರಿಸುತ್ತಿದ್ದರು—ಒಂದು ನುಲಿಮಾಡಿದ ರುಮಾಲು, ಉದ್ದವಾದ ಅಂಗಿ ಮತ್ತು ಷರಾಯಿ. ಅವರಿಗೆ ಸಂಗೀತದಲ್ಲಿಯೂ ಅಭಿರುಚಿ ಇತ್ತು.

ರಾಮಮೋಹನರಿಗೆ ದೀರ್ಘ ಕೇಶರಾಶಿಯಿತ್ತಂತೆ. ಒಂದಾವರ್ತಿ ಅವರು ತಲೆಕೂದಲನ್ನು ಬಾಚುವುದಕ್ಕೆ ಹೆಚ್ಚು ಗಮನಕೊಟ್ಟು ಕಾಲ ವಿಸ್ತರಿಯೋಗಿಸಿದರಂತೆ. ಇದನ್ನು ನೋಡುತ್ತಿದ್ದ ತಾರಾಚಂದ್ರ ಚಕ್ರವರ್ತಿಯು ರಾಮಮೋಹನರ ಎಷ್ಟುಕಾಲ ಮುಕುರದಲ್ಲಿ ಮುಖವ ನೋಡುವೆ ಎಂಬ ಭಾವದ ಹಾಡನ್ನು ಹೇಳಿ ಆದರ ತತ್ತ್ವವು ಇತರರ ಆಚರಣೆಗೋ ಎಂದು ಕೇಳಿದನು. ರಾಮಮೋಹನರು ತಮ್ಮ ಸಹಜವಾದ ಸೂಕ್ಷ್ಮ ಬುದ್ಧಿಯಿಂದ ತಾರಾಚಂದ್ರನ ಪ್ರಶ್ನೆಯ ರಹಸ್ಯಾರ್ಥವನ್ನು ಗ್ರಹಿಸಿ 'ಸಹೋದರನೇ, ನೀನು ಹೇಳಿದ್ದು ಸರಿ' ಎಂದರು.

ರಾಮಮೋಹನರಲ್ಲಿ ಒಂದು ಗಾಡಿಯಿತ್ತು; ಅದು ಮುರುಕು. ಒಡಕು, ಕುದುರೆಗೆ ಲಗಾಮು, ಜೀನುಗಳಿರಲಿಲ್ಲ. ಹಗ್ಗವೇ ಅವುಗಳ ಕೆಲಸವನ್ನು ಮಾಡುತ್ತಿತ್ತು. ರಾಯರೇ ಗಾಡಿ ನಡೆಸುತ್ತಿದ್ದಾಗ ಕೆಲವು ವೇಳೆಗಳಲ್ಲಿ ಗಾಡಿಯು ಕುದುರೆಯಿಂದ ಬೇರೆಯಾಗುತ್ತಿತ್ತು. ಕೆಲವು ಸಲ ಗಾಡಿಯನ್ನು ನಡೆಸುತ್ತ ಕುಳಿತಿದ್ದ ರಾಮಮೋಹನರು ದಾರಿಯಲ್ಲಿ ಅನೇಕ ರೆದುರಿಗೆ ದೂರ ಹೋಗಿ ಬೀಳುತ್ತಿದ್ದರು. ಒಂದಾವರ್ತಿ ತಮ್ಮ ಕುದುರೆ ಗಾಡಿಯಿಂದ ತಾವು ವಿದೂಷಕರಾಗಿದ್ದರೆಂದು ಅವರೇ ದೇವೇಂದ್ರನಾಥ ಠಾಕೂರನಿಗೆ ಹೇಳಿದ್ದರಂತೆ.

ದೇವೇಂದ್ರನಾಥ ಠಾಕೂರನು ರಾಮಮೋಹನರೊಂದಿಗೆ ಗಾಡಿಯಲ್ಲಿ ಸಂಚಾರ ಹೋಗುತ್ತಿದ್ದನು. ಆಗ ಇಬ್ಬರೂ ಮೌನವಾಗಿರುತ್ತಿದ್ದರು.

ಠಾಕೂರನು ರಾಮಮೋಹನರ ಎದುರಿಗೆ ಕುಳಿತು ಅವನ ಸುಂದರ ಕೇಶೋಮಯ ಮುಖವನ್ನೇ ರೆಪ್ಪೆಹಾಕದೆ, ಆಕಡೆ ಈಕಡೆ ರಸ್ತೆಯಲ್ಲಿ ನಡೆಯುತ್ತಿರುವುದನ್ನೂ ಗಮನಿಸದೆ, ನೋಡುತ್ತಿದ್ದನಂತೆ ಆಗ ಠಾಕೂರನ ಮನಸ್ಸಿನಲ್ಲಿ ಅಂತರವಾದ ಮತ್ತು ಅವರ್ಣನೀಯವಾದ ಭಾವೋದ್ರೇಕವಾಗುತ್ತಿತ್ತು. ರಾಮಮೋಹನರಿಗೂ ಠಾಕೂರನಿಗೂ ವಿವರಿಸಲಾಗದ ಅಲೌಕಿಕ ಸಂಬಂಧ ಎತ್ತಂದೂ ತಾನು ರಾಯರಿಂದ ಬಲವತ್ತರವಾಗಿ ಆಕರ್ಷಿತನಾಗಿದ್ದನೆಂದೂ ಠಾಕೂರನೇ ಹೇಳಿಕೊಂಡಿದ್ದಾನೆ ರಾಮಮೋಹನರು ವಿದೇಶ ಪ್ರಯಾಣ ಬೆಳೆಸುವ ಮೊದಲು ದ್ವಾರಕಾನಾಥ ಠಾಕೂರನನ್ನು ನೋಡಲು ಅವನ ಮನೆಗೆ ಹೋದರು. ಆದರೆ ಅಲ್ಲಿ ದೇವೇಂದ್ರನಾಥನು ಇರಲಿಲ್ಲ ಅವನು ಚಿಕ್ಕವನಾಗಿದ್ದರೂ ಅವನನ್ನು ನೋಡದೆ ಹಸ್ತಲಾಘವ ಕೊಡದೆ ಹೋಗುವುದಿಲ್ಲವೆಂದು ದ್ವಾರಕಾನಾಥನಿಗೆ ಹೇಳಿ ಅವನ ಮಗನನ್ನು ಕರೆಸಿದರಂತೆ ರಾಮಮೋಹನರ ಹಸ್ತಲಾಘವವು ದೇವೇಂದ್ರನಿಗೆ ಅರ್ಥಗರ್ಭಿತವಾಗಿತ್ತು, ಇದೇ ಅವನನ್ನು ಮುಂದೆ ಬ್ರಾಹ್ಮಸಮಾಜದ ಅಧ್ಯಕ್ಷಸ್ಥಾನಕ್ಕೆ ಪ್ರೇರಿಸಿತಂತೆ.

ರಾಮಮೋಹನರ ಮನಸ್ಸು ಶಾಂತವಾದುದು. ಕ್ರೈಸ್ತ ಮತಸ್ಥರೊಂದಿಗೆ ವಾದವಿವಾದಗಳಲ್ಲಿ ಪ್ರತಿಪಕ್ಷದವರು ಸುರಿಸಿದ ತೀಕ್ಷ್ಣವಾದ ಮತ್ತು ಅಗೌರವದ ಮಾತುಗಳಿಂದ ರೋಷಕ್ಕೀಡಾಗದೆ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಅವರ ವಾದಗಳಿಗೆಲ್ಲ ಸದುತ್ತರಗಳನ್ನೀಯುತ್ತಿದ್ದರು ಅವರ ಪಾಲಕ ಪುತ್ರ ರಾಜರಾಮನು ಬಹು ತುಂಟ ರಾಮಮೋಹನರು ನಿದ್ರೆಮಾಡುತ್ತಿದ್ದಾಗ ಒಂದು ದಿನ ರಾಜರಾಮನು ಅವರ ಎದೆಯಮೇಲೆ ರಭಸದಿಂದ ಬಿದ್ದನ ರಾಮಮೋಹನರು ಎಚ್ಚತ್ತು "ರಾಜರಾಮ್, ರಾಜರಾಮ್" ಎಂದು ಅವನನ್ನು ಅಪ್ಪಿಕೊಂಡರಂತೆ ರಾಜರಾಮನು ದೇವೇಂದ್ರನಿಗೆ ತಾನು ಒಂದು ತಮಾಷೆಮಾಡುವುದಾಗಿ ಹೇಳಿ ಅದನ್ನು ನೋಡಲು ಅವನನ್ನು ಕರೆತಂದಿದ್ದನು ರಾಮಮೋಹನರ ಸೌಮ್ಯತೆಯು ಅಸಾಮಾನ್ಯವಾದುದೆಂದು ಠಾಕೂರನು ಶ್ಲಾಘಿಸಿರುತ್ತಾನೆ

ಅವರಿಗೆ ಪ್ರಾಣಿಹಿಂಸೆಯೆಂದರಾಗದು, ಒಂದು ದಿನ ರಾಮಸುಂದರನೆಂಬ ಭೃತ್ಯನು ಒಂದು ಮೇಕೆಯನ್ನು ಕೊಯ್ಯುವುದರಲ್ಲಿದ್ದನಂತೆ.

ರಾಮಮೋಹನರು ಈ ಸುಳುವನ್ನು ತಿಳಿದುಕೊಂಡು ವಧೆಯನ್ನು ತಪ್ಪಿಸಿದರು. ಅಲ್ಲದೆ ಸೇವಕನಿಗೆ ೫ ರೂಪಾಯಿಗಳ ದಂಡ ಹಾಕಿದರು.

ರಾಮಮೋಹನರಲ್ಲಿ ಸ್ವಲ್ಪವೂ ದೊಡ್ಡಸ್ತಿಕೆಯಾಗಲಿ ಅಹಂಕಾರವಾಗಲಿ ಇರಲಿಲ್ಲ. ಅವರು ಎಲ್ಲರಲ್ಲಿಯೂ ಬಹಳ ಮರ್ಯಾದೆಯಿಂದಲೂ ವಿನಯ ನಾಜೂಕಿನಿಂದಲೂ ನಡೆದುಕೊಳ್ಳುತ್ತಿದ್ದರು. ಅವರ ಸೌಜನ್ಯ ವಿನಯಾದಿಗಳು ಎಲ್ಲರಿಗೂ ಮನಮೋಹಕವಾಗಿತ್ತು. ದೊಡ್ಡವರಿಗೂ, ಪೂಜ್ಯರಿಗೂ ಯೋಗ್ಯ ಗೌರವವನ್ನು ಸಲ್ಲಿಸುತ್ತಿದ್ದರೂ ಕಿರಿಯವರನ್ನೂ ಸಾಮಾನ್ಯರನ್ನೂ ಉದಾಸೀನಮಾಡುತ್ತಿರಲಿಲ್ಲ. ಅವರ ಉದಾರ ಭಾವವು ಅತಿಶಯವಾದುದು. ಕಲ್ಕತ್ತೆಯ ಬೋ ಬಜಾರಿನಲ್ಲಿ ಒಂದುದಿನ ತರಕಾರಿ ಮಾರುವವನೊಬ್ಬನಿಗೆ ತನ್ನ ಹೊರೆಯನ್ನು ತಲೆಯಮೇಲಿಟ್ಟುಕೊಳ್ಳುವುದರಲ್ಲಿ ಸಹಾಯ ಬೇಕಾಗಿತ್ತು. ಆ ಮಾರ್ಗವಾಗಿ ಹೋಗುತ್ತಿದ್ದ ರಾಮಮೋಹನರು ಸ್ವಲ್ಪವೂ ಹಿಂಜರಿಯದೆ, ಒಳ್ಳೆಯ ಉಡುಪನ್ನು ಧರಿಸಿದ್ದರೂ ಕೂಡ, ಮುಂದೆಬಂದು ಹೊರೆಯನ್ನು ಅವನ ತಲೆಯಮೇಲಕ್ಕೇರಿಸಿದರು. ಅದೇ ದಾರಿಯಲ್ಲಿ ಇನ್ನೂ ಅನೇಕರು ತಿರುಗಾಡುತ್ತಿದ್ದರೂ ಅವರು ಈ ಕೆಲಸವನ್ನು ಮಾಡಿರಲಿಲ್ಲ.

ರಾಮಮೋಹನರಿಗೆ ವಿಷಯಸಂಗ್ರಹಣದಲ್ಲಿ ಒಂದು ಆತುರವೂ ಚುರುಕು ಬುದ್ಧಿಯೂ ಇತ್ತು. ಆದುದರಿಂದಲೇ ಅವರು ಕ್ರೈಸ್ತರ ಬೈಬಲ್ಲನ್ನು ಗ್ರೀಕ್, ಹೀಬ್ರೂ ಮೂಲಭಾಷೆಗಳಲ್ಲಿಯೇ ಓದಿದರು.

ರಾಮಮೋಹನರಿಗೆ ಅಸಾಧಾರಣವಾದ ಸ್ಮೃತಿಶಕ್ತಿಯಿತ್ತು. ಒಂದಾವರ್ತಿ ತಂತ್ರವಿಚಾರವಾಗಿ ಅವರಲ್ಲಿ ಚರ್ಚೆ ನಡೆಸಲು ಒಬ್ಬ ಪಂಡಿತನು ಬಂದನಂತೆ. ರಾಮಮೋಹನರಿಗೆ ಆ ವಿಷಯವೇ ತಿಳಿದಿರಲಿಲ್ಲ. ಆದುದರಿಂದ ರಾಮಮೋಹನರು ಜಿಜ್ಞಾಸಕ್ಕೆ ಮಾರನೆಯದಿನ ವೇಳೆಯನ್ನು ಗೊತ್ತುಮಾಡಿದರು. ಕೂಡಲೇ ಆ ಶಾಸ್ತ್ರಗ್ರಂಥವನ್ನು ಸಂಪಾದಿಸಿ, ಅದನ್ನು ಓದಿ ಮನನಮಾಡಿ ಮಾರನೆಯ ದಿನ ಪಂಡಿತನೊಂದಿಗೆ ವಾದ ನಡೆಸಿ, ಅವನನ್ನು ಸೋಲಿಸಿದರಂತೆ.

ರಾಜಕೀಯ ವ್ಯವಹಾರಗಳನ್ನು ನಡೆಸುವುದರಲ್ಲಿ ರಾಮಮೋಹನರಿಗಿದ್ದ ಜಾಣತನವೂ ದೃಢಸಂಕಲ್ಪವೂ ಆಶ್ಚರ್ಯಕರವಾದುದು.

ವಿರೋಧಿಗಳಲ್ಲಿ ವಿನಯದಿಂದ ವಾದಮಾಡಿ ತಮ್ಮ ಮಾರ್ಗಕ್ಕೇ ಅವರನ್ನು ಪ್ರೇರಿಸುತ್ತಿದ್ದರು ಕೆಲವು ವೇಳೆಗಳಲ್ಲಿ ಸಮಾಜದ ಹಿತದಲ್ಲಿ ತಾವು ಸೋಲುವುದು ಅವಶ್ಯವಾಗಿದ್ದರೆ ತಕ್ಷಣ ಹಾಗೆಯೇ ಮಾಡುತ್ತಿದ್ದರು ಕೆಲವು ಸುಧಾರಣೆಗಳನ್ನು ಸಾಧಿಸುವುದರಲ್ಲಿ ಅವರು ವಜ್ರಮುಷ್ಟಿಯಿಂದ ಕಾದಿದರು ಸಹಗಮನ ನಿರೋಧವನ್ನು ಸಾಧಿಸುವುದರಲಿ ಅವರು ವಿಶೇಷ ಮನಸ್ಸಿನ ಮತ್ತು ದೇಹದ ಶ್ರಮವನ್ನೂ ಸಹಿಸಿದ್ದಲ್ಲದೆ ಹೇರಳವಾದ ಹಣವನ್ನೂ ವ್ಯಯಮಾಡಿದರು. ಇದು ಬೇರೆಯವರಿಂದ ಸಾಧ್ಯವಾಗುತ್ತಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು ಸಾರ್ವಜನ ಉಪಯುಕ್ತವಾದ ಅನೇಕ ಕೆಲಸಗಳಿಗೆ ರಾಮಮೋಹನರು ಅಪಾರ ಹಣ ವ್ಯಯಮಾಡಿರುವುದರಿಂದ ಅವರ ಔದಾರ್ಯ ಪ್ರಶಂಸನೀಯವಾಗಿದೆ

ಅವರ ಬುದ್ಧಿಯು ಎಷ್ಟು ಸೂಕ್ಷ್ಮವೂ ಚುರುಕಾದುದೂ ಆಗಿತ್ತೋ ಅವರ ಮನಸ್ಸು ಅಷ್ಟು ಮೃದುವಾದುದಾಗಿತ್ತು ತನ್ನ ದೇಶೀಯರ ದುಃಸ್ಥಿತಿಯು ಅವರ ಮನಸ್ಸನ್ನು ಕರಗಿಸುತ್ತಿತ್ತು ಅವರು ಸುಖವನ್ನು ತ್ಯಜಿಸಿ ಕಷ್ಟತರವಾದ ಜೀವನವನ್ನು ನಡೆಸಿದ್ದಕ್ಕೆ ನಡೆಯುತ್ತಿದ್ದಾಗ ಅವರು ಕಣ್ಣೀರು ಸುರಿಸುತ್ತಿದ್ದರಂತೆ ಒಂದಾವರ್ತಿ ಪಕ್ಕದಲ್ಲಿದ್ದವರು ಅದಕ್ಕೆ ಕಾರಣವನ್ನು ಕೇಳಿದಾಗ ತನ್ನ ದೇಶೀಯರ ದುಃಸ್ಥಿತಿ ತನ್ನ ಮನಸ್ಸಿಗೆ ಶಾಂತಿ ಇತ್ತಿಲ್ಲವೆಂದು ಹೇಳಿದರಂತೆ ಭಾರತ ಮಹಿಳೆಯರ ಕಷ್ಟಗಳು ಚಿಕ್ಕಂದಿನಲ್ಲಿಯೇ ಅವರ ಮನಸ್ಸನ್ನು ಸೂರೆಗೊಂಡವು ಅವರ ಏಳಿಗೆಗೋಸ್ಕರ ಯಾವಜ್ಜೀವವೂ ಶ್ರಮಿಸಿದರು ಒಟ್ಟಿನಲ್ಲಿ ತಮ್ಮ ದೇಶಕ್ಕೆ ಮಾತ್ರವಲ್ಲದೆ ಮಾನವ ವರ್ಗಕ್ಕೆ ಉಂಟಾದ ಅನ್ಯಾಯ ವಿಪತ್ತುಗಳು ಅವರಲ್ಲಿ ಕನಿಕರ ಸಹಾನುಭೂತಿಗಳನ್ನು ಉಕ್ಕಿಸುತ್ತಿದ್ದುವು ದೂರದೇಶವೆಂದಾಗಲಿ ಬೇರೆ ಭಾಷೆ ಜನಾಂಗದವರೆಂದಾಗಲಿ ಅವರ ಮನಸ್ಸನ್ನು ಪರಿಣಾಮಗೊಳಿಸದೆ ಇರಲಿಲ್ಲ ಈ ವಿಶ್ವ ಸಹಾನುಭೂತಿಯು ಸಹಜವಾಗಿಯೂ ಆಂತರವಾಗಿಯೂ ಇದ್ದುದರಿಂದ ಅವರ ಪರಿಚಯಕ್ಕೆ ಈಡಾದವರೆಲ್ಲ ಆ ಭಾವನೆಯಿಂದ ಪ್ರೇರಿತರಾಗುತ್ತಿದ್ದರು.

ಪರದೇಶಗಳ ಕ್ಷೇಮಾಭಿವೃದ್ಧಿಯಲ್ಲಿನ ಆಸಕ್ತಿಯನ್ನೂ ಅವರ ಸ್ವಾತಂತ್ರ್ಯ ಪ್ರೇಮವನ್ನೂ ಹಿಂದಿನ ವಿವರಗಳಿಂದಲೇ ತಿಳಿಯಬಹುದಾ

ಗಿದೆ. ಸ್ಪೈಯಿನ್ ದೇಶದ ಪ್ರಜೆಗಳಿಗೆ ಪ್ರಜಾಪ್ರತಿನಿಧಿಸಭೆ ಲಭ್ಯವಾದಾಗ ರಾಮಮೋಹನರು ಸಂತೋಷಿಸಿ ಆ ಸಂತೋಷ ಸೂಚಕವಾಗಿ ಕಲ್ಕತೆಯ ಪುರಭವನದಲ್ಲಿ ಭಾರಿ ಔತಣವನ್ನೇರ್ಪಡಿಸಿದರು. ನೇಪಲ್ಸಿನಲ್ಲಿ ಸ್ವಾತಂತ್ರ್ಯ ಪಕ್ಷದವರಿಗೆ ಅಪಜಯವಾದ ದುರ್ವಾರ್ತೆಯನ್ನು ಕೇಳಿ ಸ್ನೇಹಿತರೊಂದಿಗೆ ಮಾತನಾಡುವುದಕ್ಕೂ ಇಷ್ಟಪಡದೆ ವ್ಯಸನ ಪಟ್ಟರಂತೆ. ಸ್ವಾತಂತ್ರ್ಯ ಪ್ರೇಮವು ಅವರ ಆತ್ಮಕ್ಕೆ ಪೋಷಣೆಯಾಗಿತ್ತು.

ಮಾನವ ವರ್ಗವೆಲ್ಲ ಒಂದು ಸಂಸಾರದಂತೆ ಭಾವಿಸಿದರು. ಅವರು ಪ್ರಪಂಚದ ಬೇರೆಬೇರೆ ಜನಾಂಗಗಳೂ ಪಂಗಡಗಳೂ ಮಾನವ ವರ್ಗವೆಂಬ ವೃಕ್ಷದ ಅನೇಕ ಶಾಖೆಗಳಂತೆ; ಆದುದರಿಂದ ಎಲ್ಲ ದೇಶಗಳಲ್ಲಿನ ನಾಗರಿಕ ಜನರೂ ಸಾಧ್ಯವಿದ್ದಷ್ಟೂ ಇತರ ಜನಾಂಗಗಳ ಜೊತೆಯಲ್ಲಿ ಕಲೆತು ಸೌಹಾರ್ದ ಬೆಳೆಸಬೇಕು ; ಹಾಗೆ ಕಲೆಯಲು ಒದಗುವ ಎಲ್ಲ ಆತಂಕಗಳನ್ನೂ ಪರಿಹರಿಸಬೇಕು; ಮತ್ತು ಒಟ್ಟು ಮಾನವ ವರ್ಗದ ಸುಖ ಪ್ರಯೋಜನಗಳನ್ನು ಹೆಚ್ಚಿಸಬೇಕು. ಹೀಗೆ ವಿಶ್ವಪ್ರೇಮಬಾಂಧವ್ಯಗಳನ್ನು ಸಾರಿದರು. ಇದೇ ಅವರ ಮಹತ್ವ. ಈ ವಿಶ್ವಪ್ರೇಮಭಾವವನ್ನು ಅವರ ತರುವಾಯ ಹೆಸರುಪಡೆದ ಎಲ್ಲ ಭಾರತ ಮಾತೆಯ ಪುತ್ರರೂ ಸಾರಿರುವರು.

ರಾಮಮೋಹನರು ಮಹತ್ತರ ಕಾರ್ಯಗಳಿಂದ ಎಷ್ಟು ಚಿರಸ್ಮರಣೀಯರೋ ಅವರ ಶೀಲ ಸ್ವಭಾವಗಳಿಂದಲೂ ಆದರ್ಶನೀಯರೂ ಸಂಮಾನ್ಯರೂ ಆಗಿರುವರು. ಅವರ ಗುಣಗಣವು ಅವರ ಕಾರ್ಯ ಪ್ರಪಂಚವನ್ನು ಬೆಳಗಿಸಿದೆ.

ರಾಮಮೋಹನರ ಜೀವನವು ಉಜ್ವಲವೂ, ಉದಾತ್ತವೂ ಕಾರ್ಯಮಯವೂ ಆದುದು. ಅವರ ಹೆಸರು ಇಂಡಿಯದ ಚರಿತ್ರೆಯಲ್ಲಿ ಮಾತ್ರವೇ ಅಲ್ಲದೆ ಪ್ರಪಂಚದ ಮಹಾವ್ಯಕ್ತಿಗಳ ಮಾಲೆಯಲ್ಲಿ ರಾರಾಜಿಸತಕ್ಕದಾಗಿದೆ. ಎಲ್ಲ ಮಹನೀಯರಂತೆಯೇ ಅವರೂ ಅವರ ಕಾಲದಲ್ಲಿ ಸಲ್ಲದ ಆಕ್ಷೇಪ ಅವಹೇಳನಗಳಿಗೆ ಗುರಿಯಾದರು. ಆದರೆ ಕಾಲಪುರುಷನು ಅವರ ಯೋಗ್ಯತೆಯನ್ನು ಒರೆಹಚ್ಚಿ ಸಾರಿರುವನು. ಜ್ಞಾನವಿಲ್ಲದವರಾಗಿ, ಸ್ವಾತಂತ್ರ್ಯ ಕಳೆದುಕೊಂಡವರಾಗಿ, ಐಕಮತ್ಯವಿಲ್ಲದೆ ಗಾಢಾಂಧ

ಕಾರದಲ್ಲಿ ಮುಳುಗಿದ್ದ ದೇಶೀಯರನ್ನು ಜಾಗೃತಗೊಳಿಸಿ ಅವರನ್ನು ಹೊಸ ಬೆಳಕಿಗೆಳೆದು ಹೊಸದಾರಿಯಲ್ಲಿ ನಡಸಿದರು ರಾಮಮೋಹನರು ಒಂದು ರಂಗದಲ್ಲಿ ಮಾತ್ರ ಕೆಲಸ ಮಾಡಿದವರಲ್ಲ, ಹಾಗೆ ಅವರು ಒಂದು ಕ್ಷೇತ್ರ ದಲ್ಲಿ ಮಾತ್ರ ಉದ್ಯೋಗಿಸಿದ್ದರೆ ಅವರ ಕೀರ್ತಿಯು ಶಾಶ್ವತವಾಗಿ ಅಖಂಡ ವಾಗಿ ನಿಲ್ಲುತ್ತಿರಲಿಲ್ಲ. ಅವರ ಸುಧಾರಣಾ ಪ್ರಯತ್ನವು ಕೇವಲ ಮತ ಅಥವಾ ಧರ್ಮಕ್ಕೆ ಮಾತ್ರ ಅನ್ವಯಿಸದ ಮಾನವ ಜೀವನದ ಎಲ್ಲ ಅಂಶ ಗಳಿಗೂ ಸಂಬಂಧಿಸಿತ್ತು ಇದೇ ಅವರ ವ್ಯಕ್ತಿ ಮಹತ್ವ ಅವರು ರಾಜ ಕೀಯ, ಆರ್ಥಿಕ ಮತ್ತು ಧರ್ಮ ವಿಚಾರಗಳಲ್ಲಿ ಮೊದಲಿಟ್ಟ ಹೋರಾಟವು ಇನ್ನೂ ನಡೆಯುತ್ತಲೇ ಇದ ಮತಪಿಚಾರದಲ್ಲಿ ಅವರು ಬೋಧಿಸಿದ ವಿಶ್ವ ಮತ ತತ್ತ್ವವನ್ನೇ ಅನುಸರಿಸಿ ಮುಂದೆ ಶ್ರೀ ರಾಮಕೃಷ್ಣ ಪರಮ ಹಂಸರು ತಮ್ಮ ದಿವ್ಯ ಜ್ಞಾನ ಶಕ್ತಿ ಸಾಧನೆಗಳಿಂದ ಅನುಭವ ಮಾಡಿದ ಸಮನ್ವಯ ಮತವನ್ನು ಲೋಕಕ್ಕೆ ಮತ್ತಷ್ಟು ವಿಶದವಾಗಿಯೂ ತೇಜೋ ಮಯವಾಗಿಯೂ ಸಾರಿ ಭರತಖಂಡದ ಧರ್ಮಕ್ಕೆ ಉತ್ತಮೋತ್ತಮ ಸ್ಥಾನ ವನ್ನು ಸಂಪಾದಿಸಿರುವುದು ಸರ್ವವಿದಿತವಾಗಿದೆ ರಾಜಕೀಯ ಆರ್ಥಿಕ ಪ್ರಪಂಚಗಳಲ್ಲಿ ರಾಮಮೋಹನರು ವ್ಯಕ್ತಪಡಿಸಿದ ಸೂತ್ರಗಳನ್ನೇ ಹಿಡಿದು ಮಹದೇವ ಗೋವಿಂದ ರಾನಡೆ, ಗೋಪಾಲ ಕೃಷ್ಣ ಗೋಖಲೆ ಮೊದಲಾ ದವರು ಸ್ವಾತಂತ್ರ್ಯ ಸಂಗ್ರಾಮವನ್ನು ಮುಂದುವರಿಸಿದರು, ಅದು ಇನ್ನೂ ಸಾಗುತ್ತಲೇ ಇದೆ ಅವರಿಂದ ಪ್ರಣೀತವಾದ ಬ್ರಹ್ಮಸಮಾಜವು ಅವರ ಹೆಸರನ್ನು ಶಾಶ್ವತಗೊಳಿಸಿದ ಅವರ ತರುವಾಯ ಆ ಸಂಸ್ಥೆಯಲ್ಲಿ ಸ್ವಲ ಬದಲಾವಣೆಗಳಾಗಿದ್ದರೂ ಮೂಲನಿಯಮಗಳು ರಾಯರು ನಿಯಮಿಸಿ ದಂತೆಯೇ ಇದ್ದು ದೇಶದ ಧಾರ್ಮಿಕ ಸಂಸ್ಥೆಗಳಲ್ಲಿ ಮುಖ್ಯವಾದುದಾಗಿದೆ. ನಮ್ಮ ಸಮಾಜ ಜೀವನದಲ್ಲಿ ರಾಮಮೋಹನರ ಗಮನಕ್ಕೆ ಬರದ ಯಾವ ಸಮಸ್ಯೆಯೂ ಇರಲಿಲ್ಲ ರಾಮಮೋಹನರು ಗತಿಸಿ ಒಂದು ನೂರು ವರ್ಷಗಳ ಮೇಲೆ ಆಗಿದ್ದರೂ ಅವರ ಕೀರ್ತಿಯು ಮಲಿನವಾಗದ ಸ್ವಚ್ಛ ವಾಗಿರುವುದು ಪ್ರತಿವರ್ಷವೂ ದೇಶದ ನಾನಾಭಾಗಗಳಲ್ಲಿ ನಡೆಯುವ ಜಯಂತ್ಯುತ್ಸವಗಳಿಂದಲೇ ವ್ಯಕ್ತವಾಗುವುದು.

೬೦ ತಕ್ಷಣ

# ನೋಡಿದರೆ ಬಿಡದೆ ಇರುವ ಪುಸ್ತಕಗಳು.

| | | ರೂ. | ಆ. | ಪೈ. |
|---|---|---|---|---|
| ೧. | ಅನುಭವಾಮೃತ — ಚಿದಂಬರಯ್ಯ | ೧ | ೮ | ೦ |
| ೨. | ಆತ್ಮಶಕ್ತಿಯು ತೇಜಸ್ಸು ,, | ೧ | ೨ | ೬ |
| ೩. | ಗೀತಾರ್ಥ ಚಂದ್ರಿಕೆ ,, | ೨ | ೮ | ೦ |
| ೪. | ಭಗವದ್ಗೀತಾಸಾರ ವಿಚಾರ ,, | ೧ | ೮ | ೦ |
| ೫. | ತಾರಾನಾಥ ತರ್ಕವಾಚಸ್ಪತಿ ,, | ೦ | ೧೦ | ೦ |
| ೬. | ನೀತಿಗಳ ನೆಲೆಗಟ್ಟು ,, | ೧ | ೮ | ೦ |
| ೭. | ರಾಮಾಯಣದ ಮಹಾಪುರುಷರು ,, | ೧ | ೨ | ೦ |
| ೮. | ದೇಶಾಂತರದ ಕಥೆಗಳು ,, | ೦ | ೧೨ | ೦ |
| ೯. | ಬಂದುವಾಸಿನಿಯ ಮಗ — ಜೋಶಿ | ೦ | ೮ | ೦ |
| ೧೦. | ಪುಷ್ಪಮಾಲೆ — ಶ್ರೀ ಸ್ವಾಮಿ | ೧ | ೪ | ೬ |
| ೧೧. | ಭಾಗ್ಯಲಕ್ಷ್ಮಿ — ಎಂ. ವಿ. ಸೀತಾರಾಮಯ್ಯ | ೦ | ೧೨ | ೦ |
| ೧೨. | ಜೀವಜ್ಯೋತಿಗಳು — ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್ | ೧ | ೪ | ೦ |
| ೧೩. | ಅಕ್ಬರ್ ಬಾದಷಹ — ತಾತಾಚಾರ್ಯ ಶರ್ಮ | ೧ | ೦ | ೦ |
| ೧೪. | ದೀನಬಂಧು ಸಿ. ಎಫ್. ಆ್ಯಂಡ್ರೂಸ್ — ಕೆ. ದೊರಸಾಮಿ | ೧ | ೮ | ೦ |
| ೧೫. | ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ — ಅ. ನ. ಕೃಷ್ಣರಾಯರು | ೨ | | |
| ೧೬. | ಸ್ವಾಮಿ ವಿವೇಕಾನಂದ — ಅ. ನ. ಕೃಷ್ಣರಾಯರು | | | |
| ೧೭. | ಉದಯರಾಗ — ಅ. ನ. ಕೃಷ್ಣರಾಯರು | | | |
| ೧೮. | ಮಾರ್ಗದರ್ಶಕ — ಎಂ. ವಿ. ಸೀತಾರಾಮಯ್ಯ | | | |
| ೧೯. | ಸ್ವಾಮಿ ವಿದ್ಯಾರಣ್ಯರು — ಟಿ. ಎನ್. ಲಿಂಗಯ್ಯ | | | |
| ೨೦. | ಮಂಗಳಸೂತ್ರ — ಅ. ನ. ಕೃಷ್ಣರಾಯರು | ೩ | ೦ | |
| ೨೧. | ಸಾಹಿತ್ಯ ಚಿತ್ರಗಳು — ಎಲ್. ಗುಂಡಪ್ಪ | ೧ | ೦ | ೦ |
| ೨೨. | ಕಾವ್ಯಾಲಾಪ — ಎಂ. ವಿ. ಸೀತಾರಾಮಯ್ಯ | ೦ | ೨ | ೬ |